ವೇದಾಂತ ಗ್ರಂಥಮಾಲೆ, ೨

'I believe that the more thoroughly Science is studied the further does it take us from anything comparable to Atheism.'

—*Lord* ***Kelvin.***



# ವಿಕಾಸವಾದ

ಅಥವಾ

# ದೇವರು ಸತ್ತನೇ ?

(*A Book of Modern Science and Knowledge*)



ಗ್ರಂಥಕಾರ:

**ಕುಲಕರ್ಣಿ ನಾರಾಯಣರಾಯರು,** ಎಮ್. ಎ.

ಬಹುಮಾನಗಳನ್ನು ಪಡೆದ

" ಗೋಖಲೆಯವರ ಚರಿತ್ರೆ " " ಮೂರ್ತಿಪೂಜೆ "

ಮೊದಲಾದ ಪುಸ್ತಕಗಳನ್ನು

ಬರೆದವರು.



ಸಂಪಾದಕ ಮತ್ತು ಪ್ರಕಾಶಕ

**ಬಂಕಾಪುರದ ಶ್ರೀ ಶಿವಾನಂದಸೂನು.**



೧೯೩೦

**ಬೆಲೆ ೧। ರೂಪಾಯಿ**

ಶ್ರೀ. ಖಂಡೋ ರಾಮಚಂದ್ರ ಭಿಸೆಯವರು
ಧಾರವಾಡ ಕರ್ನಾಟಕ ಪ್ರಿಂಟಿಂಗ ವರ್ಕ್ಸಿನಲ್ಲಿ
ಮುದ್ರಿಸಿದರು.

ವೇದಾಂತಗ್ರಂಥಮಾಲೆಯ ಸಂಪಾದಕರು
ಹುಬ್ಬಳ್ಳಿಯಲ್ಲಿಯ ತಮ್ಮ ಅವಧೂತಗ್ರಂಥಾಲಯದಲ್ಲಿ
ಪ್ರಸಿದ್ಧಿಸಿದರು.

ಪುಸ್ತಕ ದೊರೆಯುವ ಸ್ಥಳ:-
ಬಂಕಾಪುರದ ಶ್ರೀಶಿವಾನಂದಸೂನು,
ಸಂಪಾದಕ, ವೇದಾಂತಗ್ರಂಥಮಾಲಾ,
ಅವಧೂತಗ್ರಂಥಾಲಯ
ಹುಬ್ಬಳ್ಳಿ.

# ಪ್ರಸ್ತಾವನೆ

ವಿಕಾಸವಾದವು ಒಂದು ಹೊಸ ದರ್ಶನವು, ಎಂದರೆ ವಿಶ್ವದ ವ್ಯಾಪಾರಗಳ ಗೂಢವನ್ನು ಹೊಸದೊಂದು ದೃಷ್ಟಿಕೋನದಿಂದ ನೋಡಿದುದರ ನೋಟವು. ನಮ್ಮಲ್ಲಿ ಸಾಂಖ್ಯ, ನ್ಯಾಯ, ವೇದಾಂತ ಮುಂತಾದ ಷಡ್ದರ್ಶನಗಳಿರುತ್ತವಷ್ಟೆ. ಹಾಗೆಯೇ ಶ್ರೀವಿದ್ಯಾರಣ್ಯರು ತಮ್ಮ ಸರ್ವದರ್ಶನಸಂಗ್ರಹದಲ್ಲಿ ಮತ್ತೂ ಕೆಲವು ದರ್ಶನಗಳನ್ನು ಸಂಗ್ರಹಿಸಿರುವರು. ಅವೆಲ್ಲವೂ, ಜಗತ್ತಿನ ಗೂಢವನ್ನು ಬಿಡಿಸುವುದಕ್ಕೆ ಬೇರೆ ಬೇರೆ ದೃಷ್ಟಿಯಿಂದ ಮಾಡಿದ ಪ್ರಯತ್ನಗಳೇ. ಒಂದೊಂದು ದೃಷ್ಟಿಯಿಂದ ಪ್ರಪಂಚದ ಕಡೆಗೆ ನೋಡಿದರೆ ಒಂದೊಂದು ವಿಧವಾದ ನೋಟವು ಅಥವಾ ದರ್ಶನವು ನಮಗೆ ಕಾಣುತ್ತದೆ. ವಿಶ್ವದಲ್ಲಿ ನಡೆದಿರುವ ವ್ಯಾಪಾರಗಳ ತೊಡಕನ್ನು ಆದಷ್ಟು ಹೆಚ್ಚಿಗೆ ಸಮಂಜಸವಾಗಿಯೂ ಸಯುಕ್ತಿಕವಾಗಿಯೂ ಬಿಡಿಸಲು ಯತ್ನಿಸುವುದೇ ಈ ದರ್ಶನಗಳ ಉದ್ದೇಶ. ಈ ಯಾವತ್ತು ವ್ಯಾಪಾರಗಳ ಬುಡಕ್ಕೆ ಅಲ್ಪ ಸ್ವಲ್ಪ ಮೂಲತತ್ತ್ವಗಳಿರುತ್ತವೆಂದೂ ಅವುಗಳ ಬಲದಿಂದ ಆ ತೊಡಕನ್ನು ಬಿಡಿಸಬಹುದೆಂದೂ ದರ್ಶನಕಾರರ ಪ್ರತಿಜ್ಞೆ. ವಿಕಾಸವಾದವು ಅದೇ ಉದ್ದೇಶದಿಂದ ಮತ್ತು ಅದೇ ಪ್ರತಿಜ್ಞೆಯನ್ನಿಟ್ಟುಕೊಂಡು ಹೊರಟಿರುತ್ತದೆ. ಆದುದರಿಂದಲೇ ಇದು ಒಂದು ದರ್ಶನವೆಂದು ನಾವು ಕರೆಯುತ್ತೇವೆ. ಈ ದರ್ಶನದ ಮುಖ್ಯ ಆಚಾರ್ಯರು ಮಿ. ಸ್ಪೆನ್ಸರ ಸಾಹೇಬರು. ಅವರು ಆಜನ್ಮಬ್ರಹ್ಮಚಾರಿಗಳಾಗಿದ್ದು ೫೦-೬೦ ವರುಷಗಳ ವರೆಗೆ ವಿಚಾರಮಾಡಿ ತಪಶ್ಚರ್ಯಮಾಡಿದುದರ ಫಲವು ಈ ದರ್ಶನವು. ಮಿ. ಡಾರ್ವಿನ್ನರೇ ಮುಂತಾದ ಅನೇಕರು ಬೇರೆ ಬೇರೆ ಪ್ರಯೋಗಗಳನ್ನು ಮಾಡಿ ಈ ದರ್ಶನವನ್ನು ಪುಷ್ಟೀಕರಿಸಿರುವರು.

ಅವರೆಲ್ಲರ ವಿಚಾರಗಳ ಸಾರವನ್ನು ಗ್ರಂಥಕರ್ತರು ಈ ಪುಸ್ತಕದಲ್ಲಿ ಬಹಳ ಸುಲಲಿತವಾಗಿಯೂ ಮನೋರಂಜಕವಾಗಿಯೂ ಸಂಕ್ಷೇಪವಾಗಿಯೂ ತಿಳಿಸಿರುವರು. ಈ ದರ್ಶನವು ಮುಖ್ಯತಃ ಮೂರು ಮೂಲತತ್ತ್ವಗಳನ್ನವಲಂಬಿಸಿರುತ್ತದೆ. ಅವು ಯಾವುವೆಂದರೆ, (೧) ಒಂದೇ ಒಂದು ಜಡರೂಪವಾದ ತತ್ತ್ವದಿಂದ ಮೊದಲು ಸೃಷ್ಟಿಗೆ ಪ್ರಾರಂಭವಾಯಿತು. ಹೀಗೆ ಏಕವಾಗಿದ್ದ ವಸ್ತುವು ಹೊರಗಣ ದೇವರೇ ಮುಂತಾದ ಯಾವ ಕರ್ತೃವಿನ ಅವಶ್ಯಕತೆಯಿಲ್ಲದೆಯೇ ಪರಿಸ್ಥಿತಿಯ ಸಹಾಯ

ದಿಂದ ತಾನಾಗಿಯೇ ಬೆಳೆದು ಬಹುತ್ವವನ್ನೂ ಸುಸಂಬದ್ಧತೆಯನ್ನೂ ಹೊಂದಿರು ತ್ತದೆ. (೨) ಈ ಜಡದಿಂದಲೇ ಜೀವಸೃಷ್ಟಿಯು. ಆದು ಸೃಷ್ಟಿಯು ಕೆಲವೊಂದು ವಿಶಿಷ್ಟಪರಿಸ್ಥಿತಿಯಲ್ಲಿ ಆಕಸ್ಮಿಕವಾಗಿ ಆವಿರ್ಭವಿಸಿತು. ಅದೂ ಮೇಲೆ ಹೇಳಿ ದಂತೆಯೇ ವಿಕಾಸಹೊಂದುತ್ತ ಈಗಿನ ಬಹುವಿಧದ ಜೀವಸೃಷ್ಟಿಯಾಗಿರುತ್ತದೆ. (೩) ಮುಂದೆ ಮತ್ತೊಂದು ವಿಶಿಷ್ಟಪರಿಸ್ಥಿತಿಯಲ್ಲಿ, ಮಾನವಜೀವಿಗಳೊಳಗೆ ಸಾಮಾಜಿಕ ಭಾವನೆಯೂ ಬುದ್ಧಿಯೂ ಆಕಸ್ಮಿಕವಾಗಿಯೇ ಪ್ರಾದುರ್ಭವಿಸಿ ದವು. ತಾಯಿಯನ್ನವಲಂಬಿಸಿ ಕೂಸು ಬೆಳೆಯಬೇಕಾದ ಸ್ಥಿತಿಯೇ ಈ ಸಾಮಾ ಜಿಕ ಭಾವನೆಯ ಮೂಲವು. ಸಸ್ತನ ಪ್ರಾಣಿಗಳಿಂದ ಪ್ರಾರಂಭವಾದ ಈ ಸಾಮಾ ಜಿಕ ಭಾವನೆಯು ಬೆಳೆಯುತ್ತ ಬೆಳೆಯುತ್ತ ಈಗ ಅನೇಕ ಸಮಾಜಗಳಿಗೆ ಜನ್ಮ ಕೊಟ್ಟಿದೆ. ಈ ಮೂರು ಮುಖ್ಯ ತತ್ತ್ವಗಳ ಆಧಾರದಿಂದ ಈ ದರ್ಶನಕಾರರು ಜಗತ್ತಿನ ಯಾವತ್ತು ವ್ಯಾಪಾರಗಳ ಮರ್ಮವನ್ನು ತಿಳುಹಿಸುವುದಕ್ಕೆ ಸಪ್ರಯೋ ಗವಾದ ಪ್ರಯತ್ನವನ್ನು ಮಾಡಿರುತ್ತಾರೆ. ನಮ್ಮಲ್ಲಿಯೂ ಸೃಷ್ಟಿಕ್ರಮದ ವಿಷಯ ವಾಗಿ ಅನೇಕಸಿದ್ಧಾಂತಗಳಿರುತ್ತವೆ. ನಮ್ಮಲ್ಲಿದ್ದಷ್ಟು ವಿಸ್ತಾರವಾದ ಲಯ ಕ್ರಮವು ಮಾತ್ರ ಈ ವಿಕಾಸವಾದದಲ್ಲಿ ಕಂಡುಬರುವುದಿಲ್ಲ.

ಈ ದರ್ಶನದ ಪರಿಣಾಮವು ಈಗ ಇಡೀ ಪ್ರಪಂಚದ ಮೇಲೆ ಆಗಿರು ವುದು. ಈ ಮೂಲತತ್ತ್ವಗಳ ಮೂಲಕ, ಪಾಶ್ಚಾತ್ಯರ ಇಡೀ ಜೀವನದಲ್ಲಿಯೇ ಕ್ರಾಂತಿಯುಂಟಾಗಿದೆ. ಈ ದರ್ಶನದಿಂದಾದ ಎಲ್ಲಕ್ಕೂ ದೊಡ್ಡ ಪರಿಣಾಮವೇ ನೆಂದರೆ–ಅದು ಕ್ರಿಶ್ಚಿಯನ್ ಧರ್ಮದ ಅನೇಕ ಸಿದ್ಧಾಂತಗಳನ್ನು ಬುಡಮೇಲಾಗಿ ಕಿತ್ತು ಬಿಸುಟಿ ಒಗೆದಿದೆ. ಅಲ್ಲದೆ ನೀತಿಶಾಸ್ತ್ರ, ಸಮಾಜಶಾಸ್ತ್ರ, ರಾಜಕಾರಣ ಮುಂತಾದ ಅನೇಕಶಾಸ್ತ್ರಗಳಲ್ಲಿ ಈ ತತ್ತ್ವಗಳು ದೊಡ್ಡ ಬದಲಾವಣೆಗಳನ್ನು ಮಾಡಿವೆ. ಹಿಂದುಸ್ಥಾನದಲ್ಲಿಯ ಸುಶಿಕ್ಷಿತರ ಮನವನ್ನು ಪರೀಕ್ಷಿಸಿದರೆ ಅವರ ಮನಸ್ಸಿನ ಮೇಲೆ ಈ ವಿಕಾಸವಾದವು ಎಷ್ಟು ವಿಲಕ್ಷಣವಾದ ಪರಿಣಾಮವ ನ್ನುಂಟುಮಾಡಿದೆಂಬುದು ಗೊತ್ತಾಗುವುದು. ನಮ್ಮಲ್ಲಿಯ ಸುಶಿಕ್ಷಿತರು ಯಾವುದೇ ವಿಷಯವನ್ನು ಕುರಿತು ಮಾತಾಡಹತ್ತಿದರೂ ಅವರು, ಬುದ್ಧಿಪೂರ್ವಕವಾಗಿ ಯಾಗಲಿ ಅಬುದ್ಧಿಪೂರ್ವಕವಾಗಿಯಾಗಲಿ ಈ ವಿಕಾಸವಾದದ ಮೂಲತತ್ತ್ವಗಳ ನ್ನವಲಂಬಿಸಿಯೇ ಮಾತಾಡುತ್ತಾರೆ. ಇದರಿಂದ ಈ ವಿಕಾಸವಾದವು ಎಷ್ಟು ಮಟ್ಟಿಗೆ ತನ್ನ ಪ್ರಭುತ್ವವನ್ನು ಪ್ರಸ್ಥಾಪಿಸಿರುತ್ತದೆಂಬುದು ತಿಳಿಯುವುದು.

ಈ ಮೇರೆಗೆ ಸರ್ವವ್ಯಾಪಿಯಾಗಿರುವ ಈ ಸಿದ್ಧಾಂತವನ್ನು ತುಚ್ಛೀಕರಿಸಿ ಫಲವೇನು ? ನಮ್ಮ ಜನರು ಅವನ್ನು ಅಭ್ಯಾಸಿಸಲೇಬೇಕು. ಅದನ್ನು ಸಪ್ರಮಾಣವಾಗಿ ಖಂಡಿಸಬೇಕು; ಅಥವಾ ಅದಕ್ಕೆ ಶರಣುಹೋಗಬೇಕು. ಬುದ್ಧಿಗೆ ಚಾಲನಕೊಟ್ಟಿರುವ ಯಾವ ಸಿದ್ಧಾಂತವನ್ನೂ ಕೇವಲ ಅಲ್ಲಗಳೆದು ಪ್ರಯೋಜನವಿಲ್ಲ. ಹಳೆಯ ಜನರಂತೆ ದೇವರು ಇದ್ದಾನೆಂದು ಬರೀ ಬಾಯಿ ಯಿಂದ ಆಡಿದ ಮಾತ್ರಕ್ಕೆ ಮನುಷ್ಯನು ನಿಜವಾಗಿ ಆಸ್ತಿಕನಾಗುವುದಿಲ್ಲ, ಅಥವಾ ಹೊಸಬರಂತೆ ದೇವರು ಇಲ್ಲವೆಂದು ಬರೀ ಬಾಯಿಯಿಂದ ಆಡಿದ ಮಾತ್ರಕ್ಕೆ ಆತನು ನಿಜವಾಗಿ ನಾಸ್ತಿಕನಾಗುವುದಿಲ್ಲ. ಇವರಿಬ್ಬರೂ ಅಂಧರು, ನಿರ್ಜೀವಿ ಗಳು. ನಿರ್ಜೀವವಾದ ಆಸ್ತಿಕವಾದಕ್ಕಿಂತಲೂ ಸಜೀವವಾದ ನಾಸ್ತಿಕವಾದ ದಿಂದಲೇ ದೇವರ ಮಹಿಮೆ ಹೆಚ್ಚುತ್ತದೆ. ಜ್ಞಾನದಿಂದಲೇ ಮೋಕ್ಷವಲ್ಲವೆ? ಸೃಷ್ಟಿಯ ಜ್ಞಾನವನ್ನು ಮನುಷ್ಯನು ಎಷ್ಟೆಷ್ಟು ಹೆಚ್ಚು ಸೂಕ್ಷ್ಮವಾಗಿ ಮಾಡಿಕೊ ಳ್ಳುತ್ತಾನೋ ಅಷ್ಟಷ್ಟು ಹೆಚ್ಚಿಗೆ ಆತನು ದೇವರ ಸಮೀಪಕ್ಕೆ ಹೋಗುತ್ತಾನೆ. ಇಂದು ಕೆಲ ವಿಕಾಸವಾದಿಗಳು ದೇವರನ್ನು ಸಿಂಹಾಸನದಿಂದ ತಳ್ಳಲು ಟೊಂಕ ಕಟ್ಟಿರಬಹುದು. ಆದರೆ, ದೇವರ ಸಿಂಹಾಸನವು ಇಂಥವರ ಆಘಾತಗಳಿಂದ ಅಗ ಳಾಡುವಷ್ಟು ಅಭದ್ರವಾಗಿಲ್ಲ. ಅಷ್ಟು ಅದು ಅಭದ್ರವಾಗಿದ್ದರೆ ಅದು ದೇವರ ಸಿಂಹಾಸನವೇ ಅಲ್ಲ. ಅಂತಃಕರಣಪೂರ್ವಕವಾದ ಪ್ರತಿಯೊಂದು ಪ್ರಯತ್ನ ದಿಂದಲೂ ದೇವರು ಪ್ರೀತನಾಗುತ್ತಾನೆ. ವಿಕಾಸವಾದಿಗಳು ಹಠವಾದಿಗಳಲ್ಲ, ತತ್ವಾನ್ವೇಷಿಗಳು. ತಮಗೆ ಇದುವರೆಗೆ ಗೊತ್ತಾಗದ ಸಂಗತಿಗಳನ್ನು ಅವರು ಪ್ರಾಂಜಲ ಮನಸ್ಸಿನಿಂದ ಒಪ್ಪಿಕೊಂಡಿರುತ್ತಾರೆ. ಜ್ಞೇಯವಾದ ವಸ್ತುಗಳ ಆಚೆಗೆ ವಿಶಾಲವಾದುದೊಂದು ಅಜ್ಞೇಯವಾದ ವಸ್ತುಗಳ ಕ್ಷೇತ್ರವಿರುತ್ತದೆಂದು ಮಿ. ಸ್ಪೆನ್ಸರ ಸಾಹೇಬರು ಒಡಂಬಟ್ಟಿರುತ್ತಾರೆ. ದೇವರು ಅಚಿಂತ್ಯನು, ಅಜ್ಞೇಯನು ಎಂದು ವೇದಾಂತಿಗಳೂ ಬೇರೊಂದು ದೃಷ್ಟಿಯಿಂದ ಹೇಳುವುದಿಲ್ಲವೆ? ಆ ಅಜ್ಞೇಯ ವಸ್ತುಗಳ ಉಸಾಬರಿಗೆ ಹೋಗದೆ ಜಗತ್ತಿನ ವ್ಯಾಪಾರಗಳನ್ನು ತಿಳಿದು ಕೊಂಡರೆ ಸಾಕೆಂದು ಅವರ ಅಂಬೋಣ; ತದ್ವಿರುದ್ಧವಾಗಿ ಆ ಎಲ್ಲಕ್ಕೂ ಮೂಲ ವಾದ ಅಜ್ಞೇಯವಸ್ತುವನ್ನು ತಿಳಿಯುವುದೇ ಮುಖ್ಯವಾದುದೆಂದೂ ಅದನ್ನು ಸಾಕ್ಷಾತ್ಕರಿಸಿಕೊಳ್ಳುವುದು ಶಕ್ಯವಿರುತ್ತದೆಂದೂ ನಮ್ಮವರ ಅಂಬೋಣ. ಅದು ಹೇಗಿದ್ದರೂ, ವಿಕಾಸವಾದಿಗಳು ಹಠವಾದಿಗಳೇನೂ ಅಲ್ಲ. ಸಮಾಜಶಾಸ್ತ್ರ,

ಜೀವಶಾಸ್ತ್ರ, ನೀತಿಶಾಸ್ತ್ರ ಇವೇ ಮುಂತಾದವುಗಳು ಜಗದ್-ವ್ಯಾಪಾರಮಂದಿರದ ಆಧಾರಸ್ತಂಭಗಳಿರುವುದರಿಂದ ಅವುಗಳಲ್ಲಿ ದೇವರನ್ನು ಕಾಣಲು ಅವರ ಪ್ರಯತ್ನ. ಇಷ್ಟೊ ಮೀರಿ, ಯಾರಾದರೂ ಉದ್ದಾಮತನದಿಂದ ಆ ಕಂಬಗಳನ್ನೊದ್ದರೆ ದೇವರು ನಾರಸಿಂಹಾವತಾರವನ್ನು ತಾಳಿ ಅಲ್ಲಿಯೇ ಪ್ರಕಟನಾಗುವನು. ಆದ ಕಾರಣ, ಯಾವ ದೃಷ್ಟಿಯಿಂದಲೂ ನಾವು ವಿಕಾಸವಾದಕ್ಕೆ ಬೆದರುವ ಕಾರಣ ವಿಲ್ಲ. ಇದುರಿಸದಿದ್ದರೆ ಮಾತ್ರ ಪ್ರಯೋಜನವಿಲ್ಲ.

ವಿಕಾಸವಾದಿಗಳು ಪ್ರತ್ಯಕ್ಷ ಮತ್ತು ಅನುಮಾನ ಇವೆರಡೇ ಪ್ರಮಾಣ ಗಳನ್ನು ಒಪ್ಪುತ್ತಾರೆ. ಆಗಮಪ್ರಮಾಣವನ್ನೊಪ್ಪುವುದಿಲ್ಲ. ಅಂತಜ್ಞಾನದ ಅವ ಶ್ಯಕತೆಯೂ ಅವರಿಗೆ ತೋರುವುದಿಲ್ಲ. ಆದುದರಿಂದ ನಮ್ಮ ವೇದಾಂತಿಗಳ ಮುಂದೆ ಮತ್ತೆ ಬುದ್ಧನ ಕಾಲದ ಪ್ರಶ್ನೆಯು ಬಂದುನಿಂತಿರುತ್ತದೆ. ಅದೇನೆಂದರೆ ಆಗಮಪ್ರಮಾಣವನ್ನು ಒಪ್ಪಬೇಕೋ ಬೇಡವೋ ಎಂಬುದು. "ಆಗಮಪ್ರಮಾಣ ವನ್ನು ಯಾರು ಒಪ್ಪುವುದಿಲ್ಲವೋ ಅವರಿಂದ ಆ ಪ್ರಮಾಣವನ್ನು ಒಪ್ಪಿಕೊಳ್ಳಲಿಕ್ಕೆ ಹಚ್ಚಿ ಆಮೇಲೆ ಅವರೊಡನೆ ಮಿಕ್ಕ ವಾದವನ್ನು ಪ್ರಾರಂಭಿಸುತ್ತೇವೆ." ಎಂದು ಹಿಂದಕ್ಕೆ ವೇದಾಂತಿಗಳು ಪ್ರತಿಜ್ಞೆಮಾಡಿ ಹೊರಟರು. ಇಂದು ಅವರು ವಿಕಾಸ ವಾದಿಗಳನ್ನು ಇದುರಿಸಬೇಕಾಗಿರುವುದು. ಅದಕ್ಕೋಸ್ಕರ ನಮ್ಮ ತತ್ವಜ್ಞರು ತಮ್ಮ ಮೂಲತತ್ತ್ವಗಳನ್ನು ನೀತಿಶಾಸ್ತ್ರ ಸಮಾಜಶಾಸ್ತ್ರ ಮುಂತಾದವುಗಳಿಗೆ ಹೊಸ ಪದ್ಧತಿಯಲ್ಲಿ ಹಚ್ಚಿತೋರಿಸಬೇಕು. ಹಿಂದಕ್ಕೆ ಒಮ್ಮೆ ಖಂಡನವಾಗಿದೆ ಯಲ್ಲಾ ಎಂದು ಹೇಳಿ ಫಲವೇನು? ಈಗಿನ ಆಕ್ಷೇಪಗಳ ರೀತಿ ಬೇರೆ, ಪ್ರಯೋಗ ಶಾಲೆಗಳು ಬೇರೆ. ಆದುದರಿಂದ, ವಿಕಾಸವಾದದ ಖಂಡನವೂ ಬೇರೆ ರೀತಿಯಿಂದಲೇ ಆಗಬೇಕಾಗಿದೆ. ಆದರೆ, ಮುಂಚೆ ನಾವು ಅವರ ಶಾಸ್ತ್ರಗಳನ್ನು ಚೆನ್ನಾಗಿ ಅರಿತು ಕೊಳ್ಳಬೇಕಲ್ಲವೆ?

ಹೀಗೆ ಅಭ್ಯಾಸಮಾಡಲಿಚ್ಛಿಸುವವರಲ್ಲಿ ಜಿಜ್ಞಾಸೆಯನ್ನು ಹುಟ್ಟಿಸುವುದೇ ಈ ಗ್ರಂಥಕರ್ತರ ಉದ್ದೇಶವು. ಈ ತರುಣಲೇಖಕರು ತಮ್ಮ ವಿದ್ಯಾಭ್ಯಾಸವು ಮುಗಿಯುವ ಸಮಯದಲ್ಲಿಯೇ ಪುಸ್ತಕರೂಪದಿಂದ ಈ ಮಹತ್ತ್ವದ ವಿಷಯ ವನ್ನು ಕನ್ನಡಿಗರ ಮುಂದೆ ಇಟ್ಟದ್ದು, ಜ್ಞಾನದ ವಿಷಯಕ್ಕೆ ಅವರಿಗಿರುವ ಕಳ ಕಳಿಯನ್ನು ವ್ಯಕ್ತಪಡಿಸುತ್ತದೆ. ಕನ್ನಡದಲ್ಲಿ ಇದುವರೆಗೆ ಈ ತರಹದ ಪುಸ್ತಕ

ವಿರಲಿಲ್ಲ. ಲೇಖಕರು "ಮೂರ್ತಿಪೂಜೆ" ಎಂಬ ಉತ್ಕೃಷ್ಟವಾದ ಪ್ರಬಂಧವನ್ನು ಬರೆದು "ಧರ್ಮಸ್ಥಳ" ದವರು ಇಟ್ಟ ಮೇಲಾಟದಲ್ಲಿ ಪದಕವನ್ನು ಸಂಪಾದಿಸಿ ಕನ್ನಡಿಗರಿಗೆ ಪರಿಚಿತರಾಗಿರುವರು. ಅವರ ಮಾವಂದಿರಾದ **ಶ್ರೀಶಿವಾನಂದ ಮಹಾರಾಜರು** ತಮ್ಮ ವೇದಾಂತ ಗ್ರಂಥಮಾಲೆಯಲ್ಲಿ ಈ ಗ್ರಂಥಕ್ಕೆ ಇಂಬುಗೊಟ್ಟದ್ದೊಂದು ವಿಶೇಷ. ಈ ವೇದಾಂತಗ್ರಂಥಮಾಲೆಯು ಕೇವಲ ಅಂಧಪರಂಪರೆಯನ್ನನುಸರಿಸದೆ, ಭಾಷಾಂತರಗಳು, ತುಲನಾತ್ಮಕಗ್ರಂಥಗಳು, ಸುಲಭಗ್ರಂಥಗಳು, ಸ್ವತಂತ್ರಗ್ರಂಥಗಳು—ಇವೇ ಮುಂತಾದ, ಬುದ್ಧಿಗೆ ಚಾಲನಕೊಡುವ ಅನೇಕವಿಧದ ಗ್ರಂಥಗಳನ್ನು ಪ್ರಕಟಿಸಬೇಕೆಂದು ಅದು ವಿಶಾಲವಾದ ಬುದ್ಧಿಯನ್ನಿಟ್ಟುಕೊಂಡಿರುವುದು. **ಶ್ರೀಶಿವಾನಂದರ** ವರೋಪಚಾರದಿಂದಲ್ಲ, ವರಪ್ರಸಾದದಿಂದ ಲೇಖಕರ ಬುದ್ಧಿವಿಕಾಸವಾಗಿ ಅವರಿಂದ ಮತ್ತೆ ಅನೇಕ ಗ್ರಂಥಗಳು ಹೊರಡಲೆಂದೂ ವೇದಾಂತಗ್ರಂಥಮಾಲೆಯು ಜ್ಞಾನವನ್ನು ಬೀರಿ ದೇಶಸೇವೆಯನ್ನು ಮಾಡಲೆಂದೂ ಹಾರೈಸುತ್ತೇವೆ.

ಧಾರವಾಡ
೨೮-೧೦-೧೯೩೦ } ಆಲೂರ ವೆಂಕಟರಾಯ

# ಬಿನ್ನಹ

ನಾನು ಭಾಷಾಪ್ರವೀಣನಲ್ಲ. ಕನ್ನಡ ಭಾಷೆಯ ಜ್ಞಾನವು ನನಗೆ ಅಷ್ಟೊಂದು ವಿಶೇಷವಾಗಿ ಇಲ್ಲ. ವಿಷಯವಂತೂ ತೀರ ಕಠಿಣವಾಗಿದೆ. ಆದರೂ ಅದನ್ನು ಸುಲಭವಾದ, ಸರಳವಾದ, ರೂಢಿಯೊಳಗಣ ಶಬ್ದಗಳಲ್ಲಿ ಆಧುನಿಕ ವಿಚಾರದ ಜೀವನಾಧಾರವಾದ ವಿಕಾಸವಾದವನ್ನು ಆದಷ್ಟು ಸ್ವಲ್ಪದರಲ್ಲಿ, ಆದರೂ ಸ್ಪಷ್ಟವಾಗಿ ಸರ್ವಾಂಗೀಣವಾಗಿ, ಚಿತ್ರಿಸುವ ಯತ್ನಮಾಡಿದ್ದೇನೆ. ವ್ಯಾಕರಣದೋಷಗಳು ಇದರಲ್ಲಿ ಕೆಲವೆಡೆಗೆ ಸಿಕ್ಕಬಹುದು. ಆದರೆ ಭಾಷೆಯು ನನ್ನ ಉದ್ದೇಶವಲ್ಲ. ನನಗೆ ಕಾವ್ಯಮಯವಾದ, ರಮ್ಯವಾದ ಶಬ್ದಗಳಿಂದೊಡಗೂಡಿದ, ಮನೋಹರ ದೃಷ್ಟಾಂತಗಳಾಗಲಿ ರೂಪಕಗಳಾಗಲಿ ಗೊತ್ತಿರುವದಿಲ್ಲ. ಇದ್ದುದನ್ನು ಇದ್ದಂತೆಯೇ ಅನಲಂಕಾರಯುಕ್ತವಾದ ಶೈಲಿಯಲ್ಲಿ, ( bald style ) ಆದರೂ ಶಾಸ್ತ್ರೀಯ ರೀತಿಗನುಸರಿಸಿ ಸ್ಪಷ್ಟವಾಗಿ, ಯೋಗ್ಯವಾಗಿ (precisely) ಮಂಡಿಸುವಯತ್ನಮಾಡಿದ್ದೇನೆ. ಜ್ಞಾನಪ್ರಸಾರವೇ ನನ್ನ ಮುಖ್ಯವಾದ ಹೇತುವು. ಇದರೊಳಗಿನ ವಿಧಾನಗಳ ( statements ) ಬಗ್ಗೆ ಯಾರಿಗಾದರೂ ಸಂದೇಹ ಬಂದಲ್ಲಿ ಅವಶ್ಯವಾಗಿ ನನ್ನ ಜವಾಬಿಗೆ ಬರೆಯಬೇಕು. ನನ್ನ ಕೈಯಿಂದಾದಷ್ಟು ಅವರ ತೃಪ್ತಿಯನ್ನು ಮಾಡಲಿಕ್ಕೆ ಸಿದ್ಧನಿರುವೆ. ಹೆಚ್ಚೇನು ? ಮುಂದೆ ಬರೆದ ಬರೆಹದೊಳಗಿನ ಬಹುಭಾಗವು ಒಂದಿಲ್ಲೊಂದು ಗ್ರಂಥದ ಆಧಾರದಿಂದಲೇ ಬರೆದುದಾಗಿದೆ. ಕೆಲವೆಡೆಗಂತೂ ರೂಪಾಂತರವೇ ಆಗಿದೆ. ಆದರೂ ಇದು ಆವುದೊಂದು ಗ್ರಂಥದ ಭಾಷಾಂತರವಾಗಿರದೆ ಸ್ವತಂತ್ರವಾದ, ಪ್ರೌಢವಾದ ಶಾಸ್ತ್ರೀಯಗ್ರಂಥವಾಗಿರುವುದೆಂಬುದನ್ನು ಮಾತ್ರ ಯಾರೂ ಮರೆಯಬಾರದು. ಪ್ರಮಾಣಭೂತವಾದ ೨೫–೩೦ ಗ್ರಂಥಗಳನ್ನು ನಾಲ್ಕೈದು ವರುಷಗಳವರೆಗೆ ಅಭ್ಯಾಸಮಾಡಿ, ಅವೆಲ್ಲವುಗಳ ಸಾರವೆಂದು ನಾನೀ ಪುಸ್ತಕವನ್ನು ಬರೆದಿದ್ದೇನೆ. ಅಲ್ಲಲ್ಲಿಗೆ ಸ್ವತಂತ್ರವಿಚಾರಗಳೂ ಸೇರಿವೆ. ಆದರೂ ವಿಕಾಸವಾದದ ಮಂಡನವೇ ನನ್ನ ಮುಖ್ಯ ವಿಷಯವಾಗಿರುವದರಿಂದ, ಕಡೆಯವೆರಡು ಭಾಗಗಳನ್ನು ಬಿಟ್ಟರೆ ಗ್ರಂಥವು ಬಹುಶಃ descriptive ಎಂದರೆ ವರ್ಣನಾತ್ಮಕವಾಗಿರುವುದೆಂದು ಹೇಳಬಹುದು. ಕೊನೆಯವೆರಡು ಭಾಗಗಳು ಮಾತ್ರ ತೀರ ಸ್ವತಂತ್ರವಾಗಿವೆ. ಅಲ್ಲಿ ಹೇಳಿದ್ದಕ್ಕೆಲ್ಲ ನಾನೇ ಬದ್ಧನು. ಆದರೂ ಅವೂ ಕೂಡ ತಾಳಗೆಟ್ಟಿಲ್ಲವೆಂದು ನನ್ನ ನಂಬುಗೆ. ಅದು ಸಟೆಯೋ ದಿಟವೋ ಎಂಬುದನ್ನು ಪ್ರಮಾಣಿಸಿ ಹೇಳುವದು ವಾಚಕರ ಕೆಲಸವು.

ಹೆಚ್ಚು ಕಠಿಣವಾದ ಕೆಲವು ಪಾರಿಭಾಷಿಕ ಶಬ್ದಗಳ ಕೋಶವೊಂದನ್ನು ಕಡೆಗೆ ಜೋಡಿಸಿದೆ. ಅದು ಇನ್ನೂ ಅಪೂರ್ಣವಾಗಿರುವದೆಂಬುದು ಸ್ಪಷ್ಟವಿದೆ. ಕನ್ನಡದಲ್ಲಿ ಸರಿಯಾದ ಸಮಾನಾರ್ಥಕ ಶಬ್ದಗಳು ಸಿಗದ್ದರಿಂದ ಕೆಲವು ಶಬ್ದಗಳನ್ನು ಕೈಬಿಟ್ಟಿದ್ದೇನೆ. (ಓದುವಾಗ "ವಿನಹ" ಎಂದಿದ್ದಲ್ಲಿ "ವಿನಾ" ಎಂದು ಓದಬೇಕು. )

ಶ್ರೀಕ್ಷೇತ್ರ ನೃಸಿಂಹವಾಡಿ<br>೧೯೩೭ನೆಯ ಶ್ರೀಗುರುದ್ವಾದಶಿ } ಎನ್. ಆರ್. ಕುಲಕರ್ಣಿ.

# ನಾಲ್ಕು ಮಾತುಗಳು

ಮಾಂಡೂಕ್ಯದೀಪಿಕೆಯನ್ನು ಪ್ರಸಿದ್ಧಿಸಿದ ನಂತರ ಅನೇಕ ಕೆಲಸಗಳ ಗೊಂದಲದಲ್ಲಿ ದ್ವಿತೀಯಕುಸುಮವು ಇಷ್ಟು ಬೇಗ ಪ್ರಕಟವಾಗುತ್ತಿರುವುದು ನನಗೇ ಬಲು ಆಶ್ಚರ್ಯವೆನಿಸುತಿದೆ. ಅದರಲ್ಲಿಯೂ ಕನ್ನಡಿಗರಿಗೆ ಹೊಸದಾದ ಭೌತಿಕಶಾಸ್ತ್ರಗಳ ಮೂಲಭೂತವಾದ ವಿಕಾಸವಾದದಂತಹ ಪ್ರೌಢವಿಷಯದ ಪುಸ್ತಕವು ದ್ವಿತೀಯ ಕುಸುಮವಾದುದಂತೂ ಮತ್ತಿಷ್ಟು ಸಮಾಧಾನದ ಸಂಗತಿ. ವಿಷಯವೇನೋ ಸಾಮಾನ್ಯರಿಗೆ ತಿಳಿಯುವುದು ಕಷ್ಟವೆಂದು ಕೆಲವರ ಹೇಳಿಕೆ. ಮತ್ತೊಮ್ಮೆ ಓದಿದರೆ ತಾನೇ ತಿಳಿಯುವುದು.

ಈ ಪುಸ್ತಕವು ವಿಕಾಸವಾದದ ಸರ್ವಾಂಗೀಣವಾದ ಕೋಶದಂತಿದೆ. ನಮ್ಮಲ್ಲಿ ರೂಢವಾಗಿರುವ ತಾತ್ತ್ವಿಕಸಿದ್ಧಾಂತಗಳಿಗೆ ಸರಿವಿರುದ್ಧವಾದೀ ವಿಚಾರಗಳು ತತ್ತ್ವಜ್ಞಾನಭೂಮಿಯಲ್ಲಿ ನಿಶ್ಚಯವಾಗಿ ಕ್ರಾಂತಿಯನ್ನುಂಟುಮಾಡಿರುವವು. ತಿದ್ದಿತಿದ್ದಿ ಕೆತ್ತಿದಂತೆ ವಜ್ರವು ಹೆಚ್ಚೆಚ್ಚು ಮಿಂಚುವ ಹಾಗೆ, ಕ್ರಾಂತಿಯಿಂದ ಸತ್ಯತತ್ತ್ವದ ಉಜ್ವಲಸ್ವರೂಪವು ಮತ್ತಿಷ್ಟು ಸ್ಪಷ್ಟವಾಗುವುದು. ಭೌತಿಕಶಾಸ್ತ್ರದ ನಾಸ್ತಿಕವಿಚಾರಗಳು ಮೊದಮೊದಲು ವಿರುದ್ಧದಿಶೆಯಿಂದ ಹೊರಟು, ಎತ್ತೆತ್ತೋ ಸುತ್ತಾಡಿ, ಕೊನೆಗೆ ಸನಾತನ ತತ್ತ್ವಜ್ಞಾನ ಸಾಗರಕ್ಕೇ ಕೂಡುವವೇ ವಿನಾ ಪರ್ವತದಲ್ಲಿ ಬೆರೆಯುವುದಿಲ್ಲ. ಅಂತಹ ಪ್ರಸಂಗದಲ್ಲಿ ಪ್ರವಾಹಕ್ಕೆ ಸ್ವಲ್ಪ ತಡೆಯಾಗಬಹುದು. ಆದರೆ ಮುಂದೆ ಎಂದಾದರೂ ಅವು ಆ ಅಜ್ಞಾನಗಿರಿಯನೊಡೆದು ಆನಂದವಾರಿಧಿಯನ್ನೇ ಸೇರುವವೆಂಬುದು ಸಿದ್ಧವಾದುದಲ್ಲವೇ? ಆದರೂ ಕಣ್ಣು ಮುಚ್ಚಿಕೊಂಡುಕುಳಿತು ನಾನೆನ್ನುವುದೇ ಸತ್ಯವೆನ್ನುವುದರಲ್ಲೇನು ತಥ್ಯವಿದೆ? ಪ್ರತಿಪಕ್ಷವನ್ನು ನಿರಾಗ್ರಹದಿಂದ ನಿಸ್ಪೃಹತೆಯಿಂದ, ಆದರಪೂರ್ವಕವಾಗಿ ವಿಚಾರಿಸಬೇಕು. ಸಮಂಜಸವಾದುದನ್ನು ಸ್ವೀಕರಿಸಿ ಹುರುಳಿಲ್ಲದ್ದನ್ನು ಬಿಡುತ್ತ ಮುಂದುವರಿದರೆಯೇ ಅಧ್ಯಾತ್ಮದ ಚರಮಭೂಮಿಯನ್ನು ತಲುಪಿ, ಆತ್ಮನ ತನ್ಮಯಾನುಭವದ ಪರಮಾನಂದವನ್ನು ಹೊಂದುವುದು ಸಾಧ್ಯ.

ವಿಕಾಸವಾದದ ವರ್ಣನೆಯನ್ನೆ ಅಥವಾ ಮಂಡನೆಯನ್ನೇ ಗ್ರಂಥಕರ್ತರು ಮುಖ್ಯವಾಗಿಟ್ಟುಕೊಂಡಿದ್ದರೂ, ಅಲ್ಲಲ್ಲಿ ಅವರು ಪ್ರತಿಪಕ್ಷ (ವೇದಾಂತ) ದ ಪ್ರಬಲ ಆಕ್ಷೇಪಗಳನ್ನೊಡ್ಡಿರುವ ಕೌಶಲ್ಯದ ತಾಣಗಳನ್ನು ಕಂಡುಹಿಡಿದವರು ವಿಕಾಸವಾದಿಗಳೊಡನೆ ಮಲ್ಲಯುದ್ಧಕ್ಕೆ ಸನ್ನದ್ಧರಾಗುವುದು ನಿಶ್ಚಿತ! "ದೇವರು ಸತ್ತನೇ?" ಎಂಬ ದೊಡ್ಡಕ್ಷರದ ಹೆಸರನ್ನು ನೋಡಿ ಕೆಲವರಿಗೆ ಕೌತುಕವಾಗುವುದು ಸಹಜ. ಕಳೆದ ಶತಮಾನದ ಕೊನೆಯಲ್ಲಿ ನಡೆದ ಭೌತಿಕಶಾಸ್ತ್ರ ಹಾಗು ಕ್ರಿಸ್ತಧರ್ಮಗಳ ನಡುವಿನ ಘೋರಸಂಗ್ರಾಮದ ಇತಿಹಾಸಜ್ಞರಿಗೆ ಈ ಹೆಸರಿನ ಯಥಾರ್ಥತೆಯು ಕಂಡುಬರದಿರಲಾರದು. ಮುಂದಿನ ಪ್ರಶ್ನಾರ್ಥಕ ಚಿನ್ಹವಂತೂ ಭ್ರಮನಿರಸನಕ್ಕೆಂನೇ ನಿಂತಿದೆ. ದೇವರು ಹೋದಮೇಲೆ, "ದೇವರು ಸತ್ತನೇ?" ಎಂದು ಪ್ರಶ್ನೆಮಾಡಲು ಉಳಿಯುವ ಅಣ್ಣಂದಿರಾರು? ಆ ಗುರುತು ದೇವರ ತ್ರಿಕಾಲಾಬಾಧಿತವಾದ ಸದ್ರೂಪವನ್ನೇ ತಿಳಿಸುತ್ತಿದೆ. ಬರಿಯ ಹೆಸರನ್ನು ನೋಡಿ ಹೆದರುವ ಕಾರಣವೇನೂ ಇಲ್ಲ.

ಇದರ ಮುಂದಿನ ಭಾಗದಲ್ಲಿ ಧಾರ್ಮಿಕಭಾವನೆ, ಅದರ ಉಗಮ, ಬೆಳೆವಣಿಗೆ, ಬೆಳೆವಣಿಗೆಯ ನಿಯಮ, ಧರ್ಮದ ಸಾಧ್ಯ, ಪ್ರಾಮಾಣ್ಯ ಮೊದಲಾದ ವಿಷಯಗಳನ್ನು ಇದೇ ರೀತಿಯಾಗಿ, ಇಂದಿನವರೆಗೆ ಭೌತಿಕಶಾಸ್ತ್ರಜ್ಞರು ಶೋಧಿಸಿ ತೆಗೆದ ಸಲಕರಣೆಗಳ ಮೇಲಿಂದ, ಶಾಸ್ತ್ರೀಯ ಪದ್ಧತಿಗನುಸರಿಸಿ ಚರ್ಚಿಸುವ ಪುಸ್ತಕವೊಂದನ್ನು ಬರೆಯಿಸಿ ಬೇಗನೆ ಪ್ರಕಟಿಸಬೇಕೆಂದಿದ್ದೇನೆ. ಶಾಸ್ತ್ರೀಯ ಸಾಧನಗಳೂ ಶೋಧಗಳೂ ಮೀಮಾಂಸೆಯೂ ಈ ಪುಸ್ತಕದ ವೈಶಿಷ್ಟ್ಯ.

ಶ್ರಮಬಟ್ಟು ಇಲ್ಲಿಯವರೆಗೆ ಅಭ್ಯಾಸಿಸಿದ ಪಾಶ್ಚಾತ್ಯತತ್ತ್ವಜ್ಞಾನದ ಫಲರೂಪವಾಗಿರುವೀ ಪುಸ್ತಕವನ್ನು ಬರೆದುಕೊಟ್ಟ ನಮ್ಮ **ಶ್ರೀ. ಕುಲಕರ್ಣಿ ನಾರಾಯಣರಾಯರ** ಉಪಕಾರವು ನಮ್ಮ ಗ್ರಂಥಮಾಲೆಯ ಮೇಲಂತೂ ಸರಿಯೆ; ನಿಜವಾಗಿ ಕನ್ನಡಿಗರ ಮೇಲೆಯೂ ಬಹಳವಾಗಿದೆ. ಕಲಿತ ಹಾಗು ಕಲಿಯುತ್ತಿರುವ ನಮ್ಮ ಭಾಷಾಬಂಧುಗಳೂ ಇದೇ ರೀತಿ ತಮ್ಮ ವಿಚಾರರತ್ನಗಳನ್ನು ಅರ್ಪಿಸಿದರೆ ಕನ್ನಡದೇವಿಯ ಜ್ಞಾನಭಾಂಡಾರವು ಎಲ್ಲರ ಕಣ್ಣು ಕುಕ್ಕಿಸಬಹುದಲ್ಲವೇ? ಇನ್ನು ಕನ್ನಡಿಗರಿಗೆಲ್ಲ

ಮಾನ್ಯರೂ ಕರ್ನಾಟಕ ಏಕೀಕರಣದ ಇತಿಹಾಸದಲ್ಲಿ ಅಗ್ರಸ್ಥಾನವನ್ನಲಂಕರಿಸಿದವರೂ ಮೊನ್ನೆ ಮೈಸೂರಲ್ಲಿ ನೆರೆದ ೧೬ನೆಯ ಕರ್ನಾಟಕ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಆದ **ಶ್ರೀಮಾನ್ ಆಲೂರ ವೆಂಕಟರಾಯರು** ಆಶೀರ್ವಾದಪೂರ್ವಕ ಪ್ರಸ್ತಾವನೆಯನ್ನು ಬರೆದುಕೊಟ್ಟುದಕ್ಕಾಗಿ ತುಂಬಾ ಕೃತಜ್ಞನಾಗಿರುವೆ.

ಹೊಸ ಯೋಜನೆಯಿಂದ ಓದುಗರೊಳಗೆ ಪುಸ್ತಕಪ್ರಚಾರಕ್ಕೆ ಕರ್ತವ್ಯವೆಂದು ಶಕ್ತಿಮೀರಿ ಯತ್ನಿಸುವೆ. ನಿಶ್ಚಿತವಾದಂತೆ ಒಂದು ವರುಷ ಕೆಲಸ ಮಾಡಿಯೇ ಉದ್ದೇಶಪತ್ರಿಕೆಯನ್ನು ಪ್ರಸಿದ್ಧಿಸಬೇಕೆಂದಿರುವೆ. ಈ ಕಠಿಣ ಕಾಲದಲ್ಲಿಯೂ ಸಮರ್ಥರಾದ ಹಾಗೂ ಜ್ಞಾನಾಪೇಕ್ಷಿಗಳಾದವರು ಸಹಾಯಮಾಡಿ ಗ್ರಂಥಮಾಲೆಯ ಉಪಯೋಗಮಾಡಿಕೊಳ್ಳಬೇಕು.

ಸಂಕಲ್ಪ ವಿಕಲ್ಪಗಳನಳಿದವನು ಹೀಗೆಯೇ, ಇಂತಿಷ್ಟೇ, ಇಂತಹದನ್ನೇ ಮಾಡಿತೀರಬೇಕೆಂಬ ಭ್ರಮೆಯಿಂದ ಬದ್ಧನಾಗುವನೆ ?

ಅವಧೂತಗ್ರಂಥಾಲಯ
ಹುಬ್ಬಳ್ಳಿ
೩೦–೧೦–೩೦

ಸಂಪಾದಕ
योगीश्वरशर्मा

# ಅನುಕ್ರಮಣಿಕೆ



ಅವಧೂತಗ್ರಂಥಾಲಯ



ಸಚ್ಚಿದಾನಂದಸ್ವರೂಪ

**ಶ್ರೀ ಶಿವಾನಂದಸದ್ಗುರು ಮಹಾರಾಜ**

ಬಂಕಾಪುರ

K. P. W. Dharwar.

## समर्पणम् ।

प्रीतः प्रीत्या गतबहुजनिष्वाहिताद्भक्तियोगा-
दातुं पुत्रीमिह जगति मे मोक्षदां ज्ञानरूपाम् ।
गी:श्रीनाम्नीं **गुरुवरशिवानन्द**रूपोऽभवद्यो
**दत्तात्रेयो** मम परमदेवस्स एतेन तुष्यात् ॥

—ग्रंथकर्ता ।

ಶ್ರೀ

# ವಿಕಾಸವಾದ

ಅಥವಾ

# ದೇವರು ಸತ್ತನೇ ?



## ೧

## ವಿಷಯ ಪ್ರವೇಶ

ವಿಕಾಸವಾದದ ಜ್ಞಾನವು ಆಧುನಿಕ ಸುಧಾರಣೆಯ ಹೆಗ್ಗುರುತು

“ ವಿಕಾಸವಾದದ ತಿರುಳನ್ನರಿಯದವನು, ಆಧುನಿಕ ಸುಧಾರಣೆಯ ಗಂಧವನ್ನೂ ಕೂಡ ಅರಿತಿಲ್ಲವೆಂದು ಹೇಳಬಹುದು.” ಇದು ಒಬ್ಬಿಬ್ಬರ ಅಭಿಪ್ರಾಯದ ಮಾತಲ್ಲ; ಅಥವಾ ಉತ್ಕ್ರಾಂತಿವಾದದ ಭವ್ಯಮಂದಿರದಿಂದ ಅಚ್ಚರಿಗೊಂಡು ಒಮ್ಮೆಲೆ ನುಡಿದವರ ಕ್ಷಣಿಕಶಬ್ದಗಳೂ ಇವಲ್ಲ. ಇಲ್ಲವೆ ಅಭಿಮಾನಾತಿಶಯದಿಂದ ವರ್ಣಿಸಿದವರ ಅತಿಶಯೋಕ್ತಿಗಳೂ ಇವೆನಿಸವು; ಹಾಗೆಯೇ ಏಕಪಕ್ಷದವರನ್ನು ಮಾತ್ರ ಕೇಳಿಕೊಂಡು ಅನ್ಯಾಯದಿಂದ ತೀರ್ಮಾನಕೊಡುವ ನ್ಯಾಯಮೂರ್ತಿಗಳ ನಿರ್ಣಯ ವಾಕ್ಯಗಳೂ ಇವಾಗಿಲ್ಲ. ಆದರೆ ಪಾಶ್ಚಿಮಾತ್ಯರ ಆಧುನಿಕಜೀವನ, ಅವರ ಆಚಾರವಿಚಾರ, ಅವರ ಶಿಕ್ಷಣಪದ್ಧತಿ, ಅವರ ಜ್ಞಾನಕ್ಕಾಗಿ ಜ್ಞಾನವೆಂಬ ತತ್ತ್ವದ ಅಭಿರುಚಿ, ಇವೇ ಮೊದಲಾದವುಗಳನ್ನು ನಿಷ್ಪಕ್ಷಪಾತಬುದ್ಧಿಯಿಂದ ವಿಚಾರಮಾಡಿ ಹೇಳಿದವರ ಸತ್ಯಪೂರಿತ ನುಡಿಗಳಿವು. ಹೆಚ್ಚೇನು, ಈ ಸಂಗತಿಯು ಸರಿಯೇ ಎಂದು ಪ್ರಶ್ನೆಮಾಡುವವರೇ ಆ ದೇಶಗಳಲ್ಲಿ ಇಲ್ಲವೆಂದು ಹೇಳಬಹುದು. ಅದೊಂದು ಸ್ವತಃಪ್ರಮಾಣಭೂತವಾದ ಸಿದ್ಧಾಂತವೆಂದೇ ಅವರು ತಿಳಿಯುತ್ತಾರೆ. ಅದು ಅವರ ರಕ್ತನಾಳಗಳಲ್ಲಿ, ರೋಮರಂಧ್ರಗಳಲ್ಲಿ, ಅಂಗಾಂಗಗಳಲ್ಲಿ, ಜ್ಞಾನದ ತಂತುತಂತುಗಳಲ್ಲಿ ತುಂಬಿ ಹರಿದಾಡುತ್ತಿರುವುದೆಂದರೆ ಅತಿಶಯೋಕ್ತಿಯಾಗದು.

ಉತ್ಕ್ರಾಂತಿವಾದವು ಅಂತಹ ಕೆಲಸವನ್ನಾದರೂ ಏನು ಮಾಡಿದೆಯೆಂದು ಚಕಿತರಾದ ನಮ್ಮ ಬಾಂಧವರು ಸಹಜವಾಗಿಯೆ ಕೇಳಬಹುದು. ಆದರೆ ಆ ವಿಷಯವನ್ನೆಲ್ಲ ಇಲ್ಲಿ ಚರ್ಚಿಸುವುದು ನಮ್ಮ ಉದ್ದೇಶವಿರದ್ದರಿಂದ, ಸ್ವಲ್ಪದರಲ್ಲಿ ವಾಚಕರ ಕುತೂಹಲವನ್ನು ಪೂರ್ಣ ಮಾಡಿ ಮುಖ್ಯ ವಿಷಯದ ಕಡೆಗೆ ಹೊರಳುವೆವು.

ಈ ಜಗತ್ತೆಲ್ಲವೂ ಪ್ರಕೃತಿದೇವಿಯ ಮಾಟದ ಪೆಟ್ಟಿಗೆಯೆಂದಿಟ್ಟುಕೊಂಡರೆ, ಆ ಪೆಟ್ಟಿಗೆಯು ಒಗಟವನ್ನೊಡೆಯುವುದರಲ್ಲಿಯೇ ಮಾನವನ ವಿಚಾರಪ್ರವೃತ್ತಿಯ ಉಗಮವಿದೆಯೆಂದು ಹೇಳಬಹುದು. ಎಲ್ಲ ದೇಶಗಳಲ್ಲಿಯೂ ಎಲ್ಲಕಾಲಗಳಲ್ಲಿಯೂ ಈ ಜಗತ್ತಿನ ರಹಸ್ಯವನ್ನರಿಯದೆ ಅದರ ಮಹತಿಯನ್ನು ಆಶ್ಚರ್ಯದಿಂದ ವರ್ಣಿಸಿದವರು ಅಸಂಖ್ಯಾಕವಾಗಿ ಸಿಕ್ಕುವರು.

ಈ ಜಗತ್ತೆಂದರೆ ಪ್ರಕೃತಿದೇವಿಯ ಮಾಟದ ಪೆಟ್ಟಿಗೆಯು

“ ಅನಂತನಕ್ಷತ್ರಗಳಿಂದೊಪ್ಪುವ ಮೇಲಣ ಆಕಾಶವೂ, ಒಳಗಿನಿಂದ ಪ್ರಸ್ಫುರಿಸುವ ಆತ್ಮನ ಕರ್ತವ್ಯಭಾವನೆಯೂ ಮನುಷ್ಯನ ಸೋಜಿಗವನ್ನುದ್ದೀಪಿಸುವ ಶಾಶ್ವತವಾದ ವಸ್ತುಗಳೆ”ಂದು, ಆಧುನಿಕ ಪಂಡಿತವರ್ಯನಾದ ಕಾಂಟನು ಹೇಳಿದ್ದರೆ, “ ಅಚ್ಚರಿಯೇ ತತ್ತ್ವಜ್ಞಾನದ ತಾಯಿಯೆ”ಂದು ಪ್ರಾಚೀನ ಪಂಡಿತನಾದ ಪ್ಲೇಟೋನು ಅಭಿಪ್ರಾಯಪಟ್ಟಿರುವನು. “ ನಾನು ಅಜ್ಞಾನಿಯೆಂಬ ಜ್ಞಾನವೇ ನನ್ನ ಜಾಣತನವೆ”ಂದು ಜ್ಞಾನಮೂರ್ತಿಯಾದ ಸೊಕ್ರೇಟೀಸನು ನುಡಿದಿದ್ದರೆ, “ ನಮ್ಮ ಶಾಸ್ತ್ರವೂ ಶಾಸ್ತ್ರಗಳೂ ಎಷ್ಟೇ ಶೋಧಗಳನ್ನು ಮಾಡಿರಲಿ, ವಿಚಾರಮಾಡುವ ಪ್ರತಿಯೊಬ್ಬನಿಗೂ ಈ ಜಗತ್ತು ಇನ್ನೂವರೆಗೆ ಆಶ್ಚರ್ಯಮಯವಾಗಿಯೇ ಇದೆ ” ಎಂದು ಸ್ವತಂತ್ರವಿಚಾರದ ಕಾರ್ಲಾಯಿಲನು ಬರೆದಿದ್ದಾನೆ. **को अद्धा वेद क इह प्रवोचत्...........**
**यत आबभूव ।**, ಮತ್ತು **इयं विसृष्टिर्यत आबभूव.........अंग वेद यदि वा न वेद ।** ಎಂದರೆ “ ಸದ್ವಸ್ತುವಿನ ಈ ವಿಸರ್ಗವೆಂದರೆ ಪ್ರಸಾರವು ಏತರಿಂದ ಅಥವಾ ಎಲ್ಲಿಂದಾಯಿತೆಂಬುದನ್ನು ಇದಕ್ಕಿಂತಲೂ ಪ್ರ ಎಂದರೆ ಹೆಚ್ಚು ವಿಸ್ತಾರವಾಗಿ ಯಾರು ಹೇಳುವುದು ಶಕ್ಯವಿದೆ? ನಿಶ್ಚಯಾತ್ಮಕವಾಗಿ ತಿಳಿಯುವುದಾದರೂ ಯಾರಿಗೆ! ದೇವತೆಗಳೂ ಕೂಡ ಸದ್ವಸ್ತುವಿನ ವಿಸರ್ಗಾನಂತರದವರೆಂದ ಮೇಲೆ, ಆ ಮೂಲ ವಸ್ತುವೇ ಎಲ್ಲಿಂದ ಹೊರಟಿತೆಂಬುದನ್ನು ಯಾರು ಹೇಳಬೇಕು? ” ಮತ್ತು “ಸದ್ವಸ್ತುವಿನ ಈ ವಿಸರ್ಗವೆಂದರೆ ಪ್ರಸಾರವು ಎಲ್ಲಿಂದಾಯಿತು, ಅಥವಾ

ಅದು ನಿರ್ಮಿಸಲ್ಪಟ್ಟಿರುವುದೋ ಇಲ್ಲವೋ ಎಂಬುದು, ಈ ಜಗತ್ತಿಗೆ ಅಧ್ಯಕ್ಷನಾದ, ಆ ಶ್ರೇಷ್ಠವಾದ ಆಕಾಶದಲ್ಲಿ ವಾಸಿಸುವ ಹಿರಣ್ಯಗರ್ಭನಿಗೆ ಮಾತ್ರ ಗೊತ್ತಿರಬಹುದು; ಅಥವಾ ಅವನಿಗೂ ಕೂಡ ಅದು ಗೊತ್ತಿರಲಿಕ್ಕಿಲ್ಲ !" (ಇವನ್ನೆಲ್ಲ ಯಾರು ಹೇಳಬೇಕು? ) ಎಂದು ನಮ್ಮ ಪ್ರಾಚೀನ ಋಷಿಗಳು ಪಾಡಿದ್ದರೆ, "ಆ ಮಾಟಗಾರನಾರ್ ?" ಎಂದು ನಮ್ಮ ಅರ್ವಾಚೀನಕವಿಯು ಪಾಡಿರುವನು. ಕಿಂಬಹುನಾ, ಜಗತ್ತಿನ ಬಗ್ಗೆ ನಮ್ಮ ಜ್ಞಾನವು ಬೆಳೆಯುವುದೆಂದರೆ ನಮ್ಮ ಅಜ್ಞಾನದ ವಿಸ್ತಾರವು ಹೆಚ್ಚುತ್ತ ಹೋಗುವುದೆ ಸರಿಯೆಂದು ಹೇಳಬಹುದು.

ಜ್ಞಾನದ ಉಗಮವು

ಮನುಷ್ಯನು ನೋಡಿದತ್ತೆಲ್ಲ ವಿಚಿತ್ರವಾದ ಚಮತ್ಕಾರಗಳನ್ನೇ ಕಾಣುವನು. ಆ ಚಮತ್ಕಾರಗಳಲ್ಲಿ ಸಕೃದ್ದರ್ಶನಕ್ಕೆ ವ್ಯತ್ಯಾಸವು ಅಥವಾ ವೈಪರೀತ್ಯವು ಕಂಡುಬರುವುದಂತೂ ಎಲ್ಲರ ಅನುಭವದ ಮಾತು. ಆದುದರಿಂದ ನಮ್ಮ ಕಣ್ಣಿಗೆ ಬಿದ್ದ ಸಂಗತಿಗಳನ್ನೆಲ್ಲ ಪರಸ್ಪರ ವಿರೋಧವಿಲ್ಲದಂತೆ ಕ್ರಮವಾಗಿ ವ್ಯವಸ್ಥೆಪಡಿಸಿ, ಅವುಗಳ ಮರ್ಮವೇನೆಂಬುದನ್ನು ಬಿಚ್ಚಿ ಹೇಳುವುದೇ ಎಲ್ಲ ಜ್ಞಾನದ ತಿರುಳು. ಮತ್ತು ಮನುಷ್ಯನ ಜೀವನಯಾತ್ರೆಯು ಸುಸೂತ್ರವಾಗಿ ಸಾಗಬೇಕಾದರೆ ಸೃಷ್ಟಿಜ್ಞಾನವು ಅವಶ್ಯವಾಗಿ ಬೇಕು. ಜ್ಞಾನವೆಲ್ಲ ಜೀವನಯಾತ್ರೆಗೆ ಸೌಲಭ್ಯತೆಯನ್ನು ಒದಗಿಸಿ ಕೊಡುವ ಪ್ರಯತ್ನದಲ್ಲಿಯೇ ಜನಿಸಿತು, ಎಂದು ಹೇಳುವವರ ಅರ್ಥವಾದರೂ ಇದೇ. ಎಂತಲೇ ಬೇಕನ್ನನು "Knowledge is power" ಎಂದರೆ ಸೃಷ್ಟಿಯ ಮೇಲಣ ನಮ್ಮ ಪ್ರಭುತ್ವವು ಹೆಚ್ಚಾಗಬೇಕೆಂದೇ ನಾವು ಜ್ಞಾನದ ಬೆನ್ನುಹತ್ತಿರುವೆವೆಂದು ಹೇಳಿರುವನು.

ಅದರ ಬೆಳವಣಿಗೆ

ಹೀಗೊಮ್ಮೆ ಮನುಷ್ಯನ ವಿಚಾರಪ್ರವೃತ್ತಿಗೆ ಚಾಲನವು ಸಿಕ್ಕಿತೆಂದರೆ, ಅವನ ಜ್ಞಾನಾಂಕುರವು ಭರದಿಂದ ಬೆಳೆಯಲಾರಂಭಿಸುವುದು. ಈಗಿನ ಆದಿಭೌತಿಕ ಶಾಸ್ತ್ರಗಳೂ, ದರ್ಶನಗಳೂ, ಅಧ್ಯಾತ್ಮ ಶಾಸ್ತ್ರಗಳೂ, ಕಾವ್ಯೇತಿಹಾಸನಾಟಕಾದಿಗಳೆಲ್ಲವೂ, ಸತ್ಯಾಸತ್ಯತೆಯ ತೊಡಕನ್ನು ಬಿಡಿಸಬೇಕೆಂಬ ಈ ಒಂದೇ ವಿಚಾರಪ್ರವೃತ್ತಿಯ ಬೇರೆಬೇರೆ ಪರಿಣಾಮಗಳೆಂದು ಹೇಳಬಹುದು. ಮಾನವನ ಜ್ಞಾನಸಮುದಾಯವೆಲ್ಲ ಒಂದು ವೃಕ್ಷವೆಂದು ತಿಳಿದರೆ ಈ ವಿಚಾರಪ್ರವೃತ್ತಿಯೇ ಅದರ

ಪ್ರಮುಖವಾದ ಬೇರುಬೊಡ್ಡಿಗಳೆಂದು ತಿಳಿಯಬಹುದು. ಎಂದರೆ ಈ ವಿಶ್ವ ಕೂಟವನ್ನು ಬಿಡಿಸುವುದಕ್ಕಾಗಿಯೇ ಎಲ್ಲ ಪಂಡಿತರೂ, ಧಾರ್ಮಿಕರೂ, ಜ್ಞಾನಿಗಳೂ, ಕವಿಗಳೂ, ಅವಿಶ್ರಾಂತಶ್ರಮಬಟ್ಟಿರುವರೆಂದು ಹೇಳಬಹುದು. ಆದರೂ ಈ ಗೂಢವೇನು ಸಾಮಾನ್ಯವಲ್ಲವೆಂಬುವುದು ಈ ತರದ ಪ್ರಯತ್ನಗಳ ಇತಿಹಾಸವನ್ನೋದಿದರೆ ಸ್ಪಷ್ಟವಾಗುವಂತಿದೆ. ಪಾಯಥಾಗೋರಾಸ, ಕೋಪರ್ನಿಕಸ, ಮತ್ತು ನ್ಯೂಟನ್ ಮೊದಲಾದ ಶಾಸ್ತ್ರೀಯ ಶೋಧಕರೂ, ಪ್ಲೇಟೋ, ಅರಿಸ್ಟಾಟಲ್, ಮತ್ತು ಕಾಂಟ ಮೊದಲಾದ ತತ್ವಜ್ಞಾನಿಗಳೂ, ಕ್ರಿಸ್ತ, ಮಹಂಮದ, ಶಂಕರಾಚಾರ್ಯ, ಬುದ್ಧ ಮತ್ತು ರಾಮಾನುಜ ಮೊದಲಾದ ಧರ್ಮಸಂಸ್ಥಾಪಕರೂ, ಈ ವಿಶ್ವದ ಚಕ್ರವ್ಯೂಹಭೇದನೆಗಾಗಿಯೇ ಪ್ರಯತ್ನಪಟ್ಟಿದ್ದಾರೆ. ಇವರೆಲ್ಲರ ಮಾರ್ಗಗಳು ಭಿನ್ನವಾದರೂ ಹೇತುವು ಒಂದೇ. ಶ್ರದ್ಧಾವಿಶ್ವಾಸಗಳಿಂದ ಈ ಕಾರ್ಯವು ನೆರವೇರುವುದೆಂದು ಧಾರ್ಮಿಕರು ತಿಳಿದರೆ, ಕೇವಲ ಶಾಸ್ತ್ರೀಯ ಪ್ರಯೋಗವಿಶಿಷ್ಟವಾದ ಇಂದ್ರಿಯಗಳಿಂದ ನಿಜವಾದ ಜ್ಞಾನವು ದೊರಕುವುದೆಂದು ಭೌತಿಕಶಾಸ್ತ್ರಜ್ಞರು ಬಗೆಯುತ್ತಾರೆ. ದೇವದತ್ತವಾದ ಸಹಜಸ್ಫೂರ್ತಿಯಿಂದ ಅದು ಸಾಧ್ಯವೆಂದು ಕವಿಗಳ ಕಲ್ಪನೆಯಿದ್ದರೆ, ಕೇವಲ ಯುಕ್ತಿವಾದವೇ ಸಾಕೆಂದು ತತ್ತ್ವಜ್ಞಾನಿಗಳು ಹೇಳುತ್ತಾರೆ. ಆದರೆ ಇವರೆಲ್ಲರೂ ತಮಗೆ ಸಮ್ಮತವಾದ ಮಾರ್ಗಗಳಿಂದ ಎಷ್ಟೇ ದಾವತಿಮಾಡಿರಲಿ, ಈ ವಿಶ್ವದ ತೊಡಕು ಮಾತ್ರ ಇನ್ನೂ ತೊಡಕಾಗಿಯೇ ಉಳಿದಿದೆಯೆಂದು ಹೇಳಬಹುದು. ಈ ಚಕ್ರವ್ಯೂಹವನ್ನು ಭೇದಿಸಿ ಒಳಗೆ ಹೋದ ಅಭಿಮನ್ಯುಗಳು ಹಲವರಿದ್ದಾರೆ; ಆದರೆ ಅದರೊಳಗಿಂದ ಸುರಕ್ಷಿತವಾಗಿ ತಿರುಗಿ ಪಾರಾಗಿ ಬರುವ ಯುಕ್ತಿಯನ್ನರಿತ ಶ್ರೀಕೃಷ್ಣನು ಮಾತ್ರ ಇನ್ನೂ ಹುಟ್ಟಿಲ್ಲ. ವಿಶ್ವನಾಯಕನಾದ ಯಕ್ಷನ ಈ ಪ್ರಶ್ನೆಗಳನ್ನು ದುರ್ಲಕ್ಷಿಸಿದ ಭೀಮಾರ್ಜುನ ನಕುಲಸಹದೇವರು ಅಪರಿಮಿತರಾಗಿದ್ದರೂ ಆ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನಿತ್ತು, ಅವರೆಲ್ಲರನ್ನು ಎಬ್ಬಿಸಬಹುದಾದ ಧರ್ಮರಾಯನು ಮಾತ್ರ ಇನ್ನುಮೇಲೆ ಜನಿಸಬೇಕಾಗಿದೆ. ವಿಶ್ವಕೂಟಗಳನ್ನು ಕೇಳುವ ಸ್ಫಿಂಕ್ಸರಾಕ್ಷಸಿಯೆಡೆಗೆ ಹೋದ ಹಲವು ಥೀಬನ್‌ಜನರು ಸಿಕ್ಕರೂ ಆಕೆಯಿಂದ ಮರಣತಪ್ಪಿಸಿಕೊಂಡು ತಿರುಗಿ ಬರುವ ವೀರನು ಮಾತ್ರ ಇನ್ನೂ ದುರ್ಲಭನಾಗಿಯೇ ಇರುವನು. ಸೃಷ್ಟಿಕರ್ತನಾದ ಗೋರ್ಡಿಯಸನು ಕಟ್ಟಿದ ಗಂಟನ್ನು ಬಿಡಿಸಲೆಸಗಿದವರು ಲಕ್ಷಾವಧಿಜನರಾದರೂ ಅದನ್ನು ಧೈರ್ಯ

ದಿಂದ ಬಿಡಿಸಬಲ್ಲ ಅಲೆಕ್ಸಾಂಡರನು ಮಾತ್ರ ಇನ್ನೂ ಅದೃಶ್ಯನಾಗಿಯೇ ಇರುವನು. ಹೆಚ್ಚೇನು, ಈ ಜಗತ್ತಿನಲ್ಲಿ ಜರುಗುವ ಸಂಗತಿಗಳೆಲ್ಲ ದೇವದೇವೇಶನ ಕೂಟಪ್ರಶ್ನೆಗಳೆಂದು ತಿಳಿದರೆ, ಅವಕ್ಕೆ ಉತ್ತರವನ್ನು ಕೊಡಲಾರದೆ ಆಶ್ಚರ್ಯದಿಂದ ನಿಲ್ಲುವ ಶಕ್ತಿಯುಷ್ಟೆ ನಮ್ಮಲ್ಲಿದೆಯಲ್ಲದೆ ಬೇರೆಯಿಲ್ಲವೆಂದು ಹೇಳಬಹುದು.

ಇನ್ನು ಈ ಗುಂಬನ್ನು ಬಿಡಿಸಲೆಸಗಿದ ಅಪರಿಮಿತವಾದ ಪ್ರಯತ್ನಗಳಲ್ಲಿ ಉತ್ಕ್ರಾಂತಿವಾದವು ಮೊದಲನೆಯ ಸ್ಥಾನವನ್ನು ಆಕ್ರಮಿಸಬೇಕೆನ್ನುತ್ತಿದೆ.

ಇಂಥ ಪ್ರಯತ್ನಗಳಲ್ಲಿ ವಿಕಾಸವಾದವು ಮೊದಲನೆಯ ಸ್ಥಾನವನ್ನು ಪಡೆಯಬೇಕೆನ್ನುತ್ತಿದೆ.

ತಮ್ಮ ಕಾಲಕ್ಕೆ ಗೊತ್ತಿದ್ದ ಸಕಲಶಾಸ್ತ್ರಗಳ ಸಿದ್ಧಾಂತಗಳನ್ನೊಳಗೊಂಡ ತತ್ತ್ವಜ್ಞಾನವಿವೇಚನೆಯನ್ನು ಮಾಡಿದವರು ಮೂವರು. ಅವರಲ್ಲಿ ಗ್ರೀಸದೇಶದ ಅರಿಸ್ಟಾಟಲನು ಮೊದಲನೆಯವನು. ಜರ್ಮನಿಯ ಹೇಗೆಲ್ಲನು ಎರಡನೆಯವನು. ಇಂಗ್ಲಂಡದ ಸ್ಪೆನ್ಸರನು ಮೂರನೆಯವನು. ಇವರೆಲ್ಲರಲ್ಲಿ ಕಡೆಯವನದೇ ನಮ್ಮ ಪ್ರಸ್ತುತವಿಷಯವು. ಅರ್ಧಶತಮಾನಕ್ಕೆ ಮಿಕ್ಕಿದ ದೀರ್ಘಕಾಲದವರೆಗೆ ಪರಿಶ್ರಮಮಾಡಿ, ಎಲ್ಲ ವಿಷಯಗಳ ಅಭ್ಯಾಸವನ್ನೂ ಯಥಾಸಾಂಗವಾಗಿ ಮುಗಿಸಿಕೊಂಡು, ಅವುಗಳ ಫಲವೆಂದು ಸ್ಪೆನ್ಸರನು ತನ್ನ ತತ್ತ್ವಜ್ಞಾನವನ್ನು ಜಗತ್ತಿನ ಜನರಿಗೆ ಸಮರ್ಪಣೆಮಾಡಿದನು. ಆದುದರಿಂದಲೇ ಅವನು ತನ್ನ ದರ್ಶನಕ್ಕೆ ಸಿಂಥೆಟಿಕ್ ಫಿಲಾಸಾಫಿ ಎಂದರೆ "ಸಂಯೋಜಕ ತತ್ತ್ವಜ್ಞಾನ"ವೆಂದು ಹೆಸರು ಕೊಟ್ಟಿದ್ದಾನೆ. ಎಂದರೆ ಜಗತ್ತಿನೊಳಗೆಲ್ಲ ಇಂದಿನವರೆಗೆ ಕಂಡುಹಿಡಿದ ಸರ್ವಸಂಗತಿಗಳು ಈ ದರ್ಶನದಿಂದ ಹೇಗೆ ಸುಗಮವಾಗುವವೋ, ಹಾಗೆ ಬೇರೆ ಯಾವದರ್ಶನದಿಂದಾದರೂ ಆಗಲಾರವೆಂಬುದೇ ವಿಕಾಸವಾದಿಗಳ ಖಂಡಿತವಾದ ಅಭಿಪ್ರಾಯವು. ವಿಕಾಸವಾದವನ್ನೊಪ್ಪಿದರೆ, ನಮಗೆ ಗೊತ್ತಿದ್ದ ಎಲ್ಲ ಸಂಗತಿಗಳ ಉಪಪತ್ತಿಯನ್ನು, ಸುಲಭವಾಗಿ, ಸರಲವಾಗಿ, ಮನಸಿಗೆ ಒಪ್ಪಿಗೆಯಾಗುವಂತೆ ಹೊಂದಿಕೆಯಾಗಿ ಹಚ್ಚಿತೋರಿಸಬಹುದು. ಬೇರೆಯಾವ ದರ್ಶನಕ್ಕಿಂತಲೂ ಇದರಲ್ಲಿ ಆಕ್ಷೇಪಸ್ಥಾನಗಳು ಕಡಿಮೆಪ್ರಮಾಣದಿಂದ ಸಿಕ್ಕುವವು. ಮತ್ತು ಯಾವುದರಲ್ಲಿ ಶಂಕಾಸ್ಥಾನಗಳು ಕಡಿಮೆಯಿದ್ದು, ಜಗತ್ತಿನ ಹೆಚ್ಚೆಚ್ಚು ಸಂಗತಿಗಳ ಉಪಪತ್ತಿಯು ಹೆಚ್ಚೆಚ್ಚು ಹೊಂದಿಕೆಯಾಗುವಂತೆ ಹತ್ತುವುದೋ ಅದು ಶ್ರೇಷ್ಠತರವಾದ ದರ್ಶನವೆಂಬುದು ಸ್ವತಃಸಿದ್ಧವಾದ ಮಾತು. ಅಂತಹ ತರತಮ ಭಾವವನ್ನೊಳಗೊಂಡ ಹಲವು ದರ್ಶನಗಳಲ್ಲಿ, ವಿಕಾಸವಾದವು ಮೊದಲನೆಯ ಸ್ಥಾನವನ್ನು

ಪಡೆಯುಬೇಕೆನ್ನುತ್ತಿದೆ. ಅದರ ತತ್ತ್ವರಚನೆಯಲ್ಲಿ, ಭೌತಿಕಶಾಸ್ತ್ರ, ಸಮಾಜಶಾಸ್ತ್ರ, ಅಧ್ಯಾತ್ಮಶಾಸ್ತ್ರ, ನೀತಿಶಾಸ್ತ್ರ, ಅರ್ಥಶಾಸ್ತ್ರ, ರಾಜನೈತಿಕಶಾಸ್ತ್ರ ಮೊದಲಾದ ಎಲ್ಲ ಗೊತ್ತಿದ್ದ ಶಾಸ್ತ್ರಗಳಿಗೂ ವಿಶಿಷ್ಟವಾದ, ಸರಿಯಾದ ಸ್ಥಾನವು ಸಿಕ್ಕು, ಪ್ರತಿಯೊಂದಕ್ಕೂ ಯೋಗ್ಯವಾದ ಅರ್ಥವಾಗುವುದು. ತೇಜೋಮೇಘಗಳ ಸಮೂಹದಿಂದ ಹೊರಟು, ನೆಟ್ಟಗೆ ಈಗಿನ ತೊಡಕಿನ ಸಮಾಜದ, ಎಲ್ಲ ಆಚಾರವಿಚಾರಗಳಿಗೆ, ಆ ತತ್ತ್ವವು ವ್ಯವಸ್ಥಿತವಾದ ಅರ್ಥವನ್ನು ಹಚ್ಚಿಕೊಡುತ್ತಿದೆ. ವಿಶ್ವದೊಳಗಿನ ಯಾವುದೇ ಕಾಲದ ಯಾವುದೇ ಸಂಗತಿಯನ್ನು ತೆಗೆದುಕೊಂಡರೂ, ಅದು ಅದೇ ಕಾಲದಲ್ಲಿ ಹಾಗೆಯೇ ಏಕಾಯಿತೆಂಬುದನ್ನು ವಿಕಾಸವಾದವು ತಿಳಿಸಿಕೊಡುವಂತೆ ಬೇರೆ ಯಾವ ಶಾಸ್ತ್ರವೂ ತಿಳಿಸಿ ಹೇಳಲಾರದು. ಸ್ಪೆನ್ಸರಸಾಹೇಬರ ಉತ್ಕ್ರಾಂತಿವಾದದಿಂದ ಎಷ್ಟೋ ಹೊಸಶಾಸ್ತ್ರಗಳು ಉದಯಕ್ಕೆ ಬಂದವೆಂಬುದನ್ನು ಈ ಸಂದರ್ಭದಲ್ಲಿ ನೆನಪಿಟ್ಟರೆ, ವಿಕಾಸವಾದದ ಮಹತ್ತ್ವವು ಆಧುನಿಕಯುಗದಲ್ಲೆಷ್ಟಿದೆಯೆಂಬುದು ಮನದಟ್ಟಾಗುವಂತಿದೆ.

ಇದು ದಾರ್ಶನಿಕವಿಚಾರವಾಯಿತು. ಇನ್ನು ವಿಕಾಸವಾದದಿಂದ ರೂಢವಾದ ದೇವಶಾಸ್ತ್ರ ( Theology ) ಅಥವಾ ಅಧ್ಯಾತ್ಮಶಾಸ್ತ್ರದ ಮೇಲೆ ಯಾವ ತರದ ಆಘಾತಗಳುಂಟಾದವೆಂಬುದನ್ನಷ್ಟು ನೋಡುವ.

ಧಾರ್ಮಿಕಶಾಸ್ತ್ರಗಳಾಗಲಿ, ಭೌತಿಕಶಾಸ್ತ್ರಗಳಾಗಲಿ, ಸತ್ಯಾಸತ್ಯತೆಯ ತೊಡಕನ್ನು ಬಿಡಿಸುವ ಒಂದೇ ವಿಚಾರಪ್ರವೃತ್ತಿಯಲ್ಲಿ ಹುಟ್ಟಿದವೆಂದು ಮೇಲೆ ಹೇಳಿದೆ. ಹೀಗಿದ್ದರೂ ಧಾರ್ಮಿಕಗ್ರಂಥಗಳ ಸಿದ್ಧಾಂತ ಮತ್ತು ಭೌತಿಕ ಶಾಸ್ತ್ರ ಇವುಗಳ ನಡುವೆ ನಿರಂತರವಾದ ಯುದ್ಧವು ನಡೆದಿದೆಯೆಂಬುದು ಹಳೆಯ ಮಾತಾಗಿ ಹೋಗಿದೆ. ಹೀಗಾಗಲಿಕ್ಕೆ ಕಾರಣವೇನು? ಸತ್ಯಾನ್ವೇಷಣೆಗೆ ಅವು ಅನುಸರಿಸುವ ಬೇರೆಬೇರೆ ಸಾಧನ ಪದ್ಧತಿಗಳೇ ಇದಕ್ಕೆ ಕಾರಣವೆಂದು ಉತ್ತರ ಕೊಡಬಹುದು. ಧರ್ಮವು ಯಾವಾಗಾದರೂ ಆಪ್ತವಾಕ್ಯವನ್ನು ಮುಖ್ಯ ಪ್ರಮಾಣವಾಗಿ ಹಿಡಿಯುತ್ತದೆ. ಕ್ರಿಸ್ತ, ಮಹಮ್ಮದ, ನಮ್ಮ ಪ್ರಾಚೀನಋಷಿಗಳು ಮೊದಲಾದವರಿಗೆ ದೇವರು ತನ್ನ ಸತ್ಯಸೂತ್ರಗಳನ್ನು ಯಥಾರ್ಥವಾಗಿ ತಿಳಿಸಿರುವನೆಂದೂ, ಅವು ತಿಳಿಯಬೇಕಾದರೆ ನಮ್ಮಲ್ಲೂ ಶ್ರದ್ಧಾವಿಶ್ವಾಸಗಳು ಅವಶ್ಯವಾಗಿ ಬೇಕೆಂದೂ ಅದರ ಮತವು. "ಅತೀಂದ್ರಿಯ ವಸ್ತುಗಳ ಜ್ಞಾನವು ಶ್ರುತಿಗಳ ಸಹಾಯವಿಲ್ಲದೆ ಯಾವನಿಗಾದರೂ

ಭೌತಿಕ ಶಾಸ್ತ್ರ ಮತ್ತು ಅಧ್ಯಾತ್ಮ ಶಾಸ್ತ್ರಗಳ ನಡುವಿನ ಯುದ್ಧ. ಅದರ ಕಾರಣಗಳು

ಆಗುವುದು ಶಕ್ಯವಿದೆಯೆಂದು ತಿಳಿಯಲಿಕ್ಕೆ ಕಾರಣವೇ ಇಲ್ಲ." ಯಾಕೆಂದರೆ "ಬಾಹ್ಯವಸ್ತುಗಳ ರೂಪವು ನಮಗೆ ತಿಳಿಯಬೇಕಾದರೆ ಸೂರ್ಯಪ್ರಕಾಶವು ಅತ್ಯವಶ್ಯವಾಗಿ ಬೇಕೆಂಬುದು ಹೇಗೆ ಸ್ವತಃಸಿದ್ಧವಾಗಿರುವುದೋ, ಹಾಗೆಯೇ ವೇದಸೂತ್ರಿತವಾದ ವಸ್ತುಗಳ ಜ್ಞಾನವಾಗಲಿಕ್ಕೆ ವೇದಗಳೇ ಏಕಪ್ರಮಾಣವೆಂಬುದು ಸ್ವತಃಸಿದ್ಧವಾದ ಮಾತು." ಎಂದು ಶ್ರೀಶಂಕರಾಚಾರ್ಯರು ತಮ್ಮ ಬ್ರಹ್ಮಸೂತ್ರಭಾಷ್ಯದಲ್ಲಿ ಹೇಳಿದ್ದಾರೆ. (**न चातींद्रियानर्थान् श्रुतिमंतरेण कश्चिदुपलभत इति शक्यं संभावयितुं निमित्ताभावात्।** ಮತ್ತು **वेदस्य हि निरपेक्षं स्वार्थे प्रामाण्यं रवेरिव रूपविषये। ब्र. सू. भा.** ೨-೧.೧.) ಆದರೆ ಭೌತಿಕಶಾಸ್ತ್ರಗಳಿಗಾದರೋ ಇಂದ್ರಿಯ ಜ್ಞಾನವೆಂದರೆ ಪ್ರತ್ಯಕ್ಷಪ್ರಮಾಣವೇ ಆಧಾರಸ್ತಂಭವಾಗಿರುವುದು. ಅನುಮಾನ ಅಥವಾ ತರ್ಕದ ಸಹಾಯವು ಭೌತಿಕಶಾಸ್ತ್ರ ಮತ್ತು ಅಧ್ಯಾತ್ಮಶಾಸ್ತ್ರಗಳಿಗೆ ಸಮನಾಗಿಯೇ ಅವಶ್ಯವಾಗಿರುವುದು. ಆದರೆ ಎರಡರಲ್ಲಿಯೂ ಅನುಮಾನಕ್ಕೆ ಗೌಣಸ್ಥಾನವೇ ಇರುವುದೆಂಬುದು ಸಹಜವಿದೆ. ಇರಲಿ. ಇವೆರಡರ ನಡುವೆ ಘೋರವಾದ ಯುದ್ಧವು ನಡೆದಿರುವುದೆಂಬ ಮಾತನ್ನು ರೆನನ್ ಸಾಹೇಬರು ತಮ್ಮ "ಇಸ್ಲಾಮು ಧರ್ಮವೂಭೌತಿಕಶಾಸ್ತ್ರವೂ" ಎಂಬ ಪುಸ್ತಕದಲ್ಲಿ ಸ್ಪಷ್ಟಮಾಡಿ ತೋರಿಸಿದ್ದಾರೆ.— "ದೇವಪ್ರೇರಣೆಯಿಂದ ಪ್ರಕಟವಾದ ಆಗ್ರಹದ ಆಪ್ತವಾಕ್ಯವು, ತನ್ನನ್ನು ಅಲ್ಲಗಳೆಯಬಲ್ಲ, ಸ್ವತಂತ್ರವಾದ ಶಾಸ್ತ್ರೀಯ ಶೋಧಕ್ಕೆ ಯಾವಾಗಾದರೂ ವಿರುದ್ಧವಾಗಿಯೇ ಇರುವುದು. ದೇವರನ್ನು ಸಂಪೂರ್ಣವಾಗಿ ಅಲ್ಲಗಳೆಯಬೇಕೆಂದು ಭೌತಿಕಶಾಸ್ತ್ರವು ಯತ್ನಿಸುವುದಿಲ್ಲ. ಆದರೆ ಇಷ್ಟು ದಿನಗಳ ವರೆಗೆ ಯಾವ ಸಂಗತಿಗಳಲ್ಲಿ ದೇವರ ಆವಿರ್ಭಾವವಾಗುತ್ತಿತ್ತೆಂದು ಜನರು ಬಗೆಯುತ್ತಿದ್ದರೊ, ಅವುಗಳಲ್ಲಿ ದೇವರಿಲ್ಲವೆಂದೂ ಅವುಗಳಿಂದ ಅವನು ಬೇಕಾದರೆ ದೂರದಲ್ಲಿರಬಹುದೆಂದೂ ಭೌತಿಕ ಶಾಸ್ತ್ರಗಳ ಶೋಧಗಳಿಂದ ನಿಶ್ಚಿತವಾಗಹತ್ತಿದೆ." (ಪಾಯೋನಿಯರ್ಸ ಆಫ್ ಎವ್ಹೊಲೂಶನ್ ಪುಟ ೨೩) ಈ ರೀತಿಯಿಂದ ಇವೆರಡು ಭಿನ್ನವಾದ ಸಾಧನ ಸಾಮಗ್ರಿಗಳ ಮೇಲೆ ಅವಲಂಬಿಸಿರುವುದರಿಂದ, ಅವುಗಳ ಸಿದ್ಧಾಂತಗಳ ನಡುವಿನ ವೈಪರೀತ್ಯವು ಎಂದು ಕೊನೆಗಾಣುವುದೋ ದೇವರೇ ಬಲ್ಲ!

ವಿಕಾಸವಾದದಿಂದ ಎಲ್ಲ ರೂಢವಾದ ಧರ್ಮಶಾಸ್ತ್ರಗಳ ತತ್ತ್ವಗಳು ಶಿಥಿಲವಾಗಿದ್ದರೂ, ಅದರ ಸಾಕ್ಷಾತ್ ಪರಿಣಾಮವು ಕ್ರಿಸ್ತಧರ್ಮದ ಮೇಲಾದುದರಿಂದ, ಅದನ್ನೇ ಇಲ್ಲಿ ಮುಖ್ಯವಾಗಿ ಚರ್ಚಿಸುವೆವು.

"ದೇವರ ಕಲ್ಪನೆಯಿಲ್ಲದೆ ಕೆಲಸಸಾಗಿಸಿರುವೆನೆಂ"ದು ಲ್ಯಾಪಲೇಸನೂ, "ಇಲ್ಲಿಯ ವರೆಗೆ ಮಾಡಿದ ಅಲ್ಪಸ್ವಲ್ಪ ಕೆಲಸಗಳಿಗಾಗಿ ಅವನ ಉಪಕಾರವನ್ನು ಸ್ಮರಿಸಿ, ದೇವರನ್ನು ನಾವೀಗ ಸರಹದ್ದಿನಾಚೆಗೆ ಹಿಮ್ಮೆಟ್ಟಿಸಿದ್ದೇವೆ" ಎಂದು ಕೇರೋನೂ ಹೇಳಿರುವರು. ಎಂದರೆ ಧರ್ಮದ ಸೇನಾಪತಿಯಾದ ದೇವರು ಉತ್ಕ್ರಾಂತಿವಾದಿಗಳಿಗೆ ಅಂಜಿ ಕಾಲ್ದೆಗೆಯುತ್ತ ಹಿಂದಕ್ಕೆ ಸರಿಯಲಾರಂಭಿಸಬೇಕಾಯಿತು. ಕಡೆಗೆ ಟೆಂಡಾಲನು ಹೇಳುವಂತೆ ದೇವರು ಯುದ್ಧಭೂಮಿಯನ್ನೇ ಬಿಟ್ಟು ಓಡಿಹೋಗಬೇಕಾಯಿತು. ಇಷ್ಟೇ ಅಲ್ಲ, ಅವನಿಗೆ ಜ್ಞಾನರಾಜ್ಯದಲ್ಲಿ ನಿಲ್ಲಲಿಕ್ಕೆ ಸ್ಥಳವೇ ಇಲ್ಲದಂತಾದುದರಿಂದ ಅವನು ನಾಮಶೇಷನಾಗಿಯೇ ಹೋದನೆಂದು ವಿಕಾಸವಾದಿಗಳು ನಿರ್ಭಯದಿಂದ ಹೇಳಲಾರಂಭಿಸಿದರು. "ಉತ್ಕ್ರಾಂತಿವಾದವು ಬಾಯಬಲ್ಲಿನೊಳಗೆ ವಿವರಿಸಿದ ಸೃಷ್ಟಿಕ್ರಮವನ್ನು ಅಲ್ಲಗಳೆಯುವುದೆಂಬುದು ಸ್ಪಷ್ಟವಿದೆ. ಇಷ್ಟೇ ಅಲ್ಲ, ಇದು ನಿಜವೇ ಇದ್ದುದಾದರೆ ಕ್ರಿಸ್ತಧರ್ಮವು ನಿಜವಾದ ಧರ್ಮವಲ್ಲೆಂಬುದನ್ನೂ ಅದು ಒಡೆದು ತೋರಿಸದಿರಲಾರದು." "ಡಾರ್ವಿನ್ನನು ದೇವರಿಗೆ ಸ್ವಲ್ಪವಾದರೂ ಅವಕಾಶವನ್ನು ಕೊಡುವುದಿಲ್ಲ......ಇದರಿಂದ ಕೋಟ್ಯಾವಧಿ ವರುಷಗಳ ವರೆಗೆ ದೇವರು ನಿರುದ್ಯೋಗಿಯಾಗಿ ಕೂಡ್ರಬೇಕಾಗುವುದು." "ಡಾರ್ವಿನ್ನನ ತತ್ತ್ವವು ನಮ್ಮ ಜೀವನದ ದೃಷ್ಟಿಕೋನವನ್ನೇ ಬದಲು ಮಾಡುವುದಲ್ಲದೆ, ಬಾಯಬಲ್ಲಿನೊಳಗಿನ ನಮ್ಮ ವಿಶ್ವಾಸವು ನಿರಾಧಾರವಾದುದೆಂದು ತೋರಿಸಿಕೊಡುತ್ತಿದೆ.

*ದೇವರ ವಿರುದ್ಧವಾಗಿ ವಿಕಾಸವಾದಿಗಳು ಎಬ್ಬಿಸಿದ ಬಂಡು*

ಬಾಯಬಲ್ಲಿನೊಳಗೆ ವಿವರಿಸಿದ ಕ್ರಿಸ್ತಧರ್ಮದ ತತ್ತ್ವಗಳೆಲ್ಲ ಹುಡುಗಾಟಿಕೆಯ ಕಲ್ಪನೆಗಳಾಗಿರುವವೆಂದು ವಿಕಾಸವಾದಿಗಳು ಧೈರ್ಯದಿಂದ ಹೇಳಹತ್ತಿದರೆಂಬುದು ಮೇಲಿನ ಉದ್ಧೃತವಾಕ್ಯಗಳಿಂದ ಸಿದ್ಧವಾಗುವಂತಿದೆ. ಕ್ರಿಸ್ತಧರ್ಮದ ತತ್ತ್ವಗಳನ್ನೆಲ್ಲ ಇಲ್ಲಿ ವಿವರಿಸುತ್ತ ಕೂಡುವುದು ಸರಿಯಾಗದು; ಬಾಯಬಲ್ಲಿನೊಳಗೆ ಹೇಳಿದ ಪ್ರತಿಯೊಂದು ಅಕ್ಷರವೂ ಈ ವಾದದಿಂದ ಖಂಡಿತವಾಯಿತೆಂಬುದು ಸ್ಪಷ್ಟವಿದೆ. ಆದರೆ ಅದರೊಳಗಿನ ಮೂರು ತತ್ತ್ವಗಳು ಮಾತ್ರ ನಮಗಿಲ್ಲಿ ಗಮ್ಯವಾಗಿವೆ. (೧) ಜಗತ್ತಿನೊಳಗಿನ ಪ್ರಾಣಿವರ್ಗಗಳು ಅಥವಾ ಜಾತಿಗಳು ಸೃಷ್ಟಿಕಾಲದಿಂದಲೇ ನಿಯಮಿತವಾಗಿವೆ. ಒಂದು ವರ್ಗದ ಪ್ರಾಣಿಗಳಿಂದ ಬೇರೊಂದು ವರ್ಗದ ಪ್ರಾಣಿಗಳ ಉತ್ಪತ್ತಿಯಾಗಿಲ್ಲ. ಉದಾ: ಹಾವಿನ ಜಾತಿಯ

*ವಿಕಾಸವಾದದಿಂದ ಖಂಡಿತವಾದ ಬಾಯಬಲ್ಲಿನೊಳಗಿನ ಮೂರು ಮುಖ್ಯ ಮಾತುಗಳು*

ಪ್ರಾಣಿಗಳಿಂದ ಪಶುಗಳಾಗಲಿ ಪಕ್ಷಿಗಳಾಗಲಿ ಹುಟ್ಟಿಲ್ಲ. ಅಥವಾ ಕಪಿಜಾತಿಯ ಪ್ರಾಣಿಗಳಿಂದ ಮನುಷ್ಯನ ಉತ್ಪತ್ತಿಯಾಗಿಲ್ಲ. ಇದಕ್ಕೆ ಇಂಗ್ಲಿಷನಲ್ಲಿ " Fixity of Species " ಎಂದರೆ "ಪ್ರಾಣಿವರ್ಗಗಳ ನಿಯತತ್ವ"ವೆಂದು ಕರೆಯುತ್ತಾರೆ. (೨) ಈ ಸೃಷ್ಟಿಯು ಹುಟ್ಟು ಪ್ರಾಚೀನವಲ್ಲ. ಬಹಳವಾದರೆ ನಾಲ್ಕಾರು ಸಾವಿರ ವರ್ಷಗಳ ಹಿಂದೆ ಈ ಜಗತ್ತು ಹುಟ್ಟಿರಬಹುದು. ೧೭ನೇ ಶತಮಾನದ ಡಾಕ್ಟರ ಲಾಯಿಟಫೂಟರೆಂಬವರು ಬಾಯಬಲ್ಲಿನ ಆಧಾರದಿಂದ ಈ ಜಗತ್ತಿನ ಜನ್ಮಕಾಲವನ್ನು ನಿಶ್ಚಯಿಸಲು ಪ್ರಯತ್ನಿಸಿದ್ದಾರೆ. ಅವರ ಅಭಿಪ್ರಾಯಕ್ಕನುಸರಿಸಿ, ಕ್ರಿ. ಪೂ. ೪೦೦೪ನೇ ವರುಷ ಅಕ್ಟೋಬರ ತಿಂಗಳ ೨೩ ನೇ ತಾರೀಖಿನ ದಿವಸ ಮುಂಜಾನೆ ೯ಗಂಟೆಗೆ ದೇವರು ಈ ಜಗತ್ತನ್ನು ಹುಟ್ಟಿಸಿದನು. (ಪಾಯೋನಿಅರ್ಸ ಆಫ ಎವ್ಹೊಲೂಶನ್ ಪುಟ ೪೮) ಇದಕ್ಕೆ ಇಂಗ್ಲಿಷದಲ್ಲಿ Recent creation ಎಂದರೆ "ಅರ್ವಾಚೀನಸೃಷ್ಟಿ"ಎಂದು ಹೆಸರು. (೩) ದೇವರು ಮನುಷ್ಯನನ್ನು ಪ್ರತ್ಯೇಕವಾಗಿ ಹುಟ್ಟಿಸಿದನು. ಎಂದರೆ ಪಶುಪಕ್ಷಿಸಹಿತ ಉಳಿದ ಎಲ್ಲ ಜಗತ್ತು ಜಡದಿಂದಲೇ ನಿರ್ಮಾಣವಾಗಿರಲು, ಮನುಷ್ಯನನ್ನು ಮಾತ್ರ ದೇವರು ತನ್ನ ಪ್ರತಿಬಿಂಬದಿಂದ ಒಡಗೂಡಿದವನನ್ನಾಗಿ ಮಾಡಿದನು. ಅವನ ದೇಹವನ್ನು ಮಣ್ಣಿನಿಂದ ನಿರ್ಮಾಣ ಮಾಡಿ, ಅದರೊಳಗೆ ಪ್ರಾಣವನ್ನು ಊದಿದಕೂಡಲೆ ಮನುಷ್ಯಪ್ರಾಣಿಯು ಅಸ್ತಿತ್ವದಲ್ಲಿ ಬಂತು. ಎಂದರೆ ಅವನ ದೇಹವು ಜಡದಿಂದ ಮಾಡಲ್ಪಟ್ಟಿದ್ದು, ಅವನ ಆತ್ಮವನ್ನು ಮಾತ್ರ ದೇವರು ಹೊರಗಿಂದ ತಂದುಹಾಕಿದನೆಂದು ಹೇಳಬಹುದು. ಇದಕ್ಕೆ ಇಂಗ್ಲಿಷದಲ್ಲಿ " Special creation " ಎಂದರೆ ಮನುಷ್ಯನ 'ಪ್ರತ್ಯೇಕವಾದ ಸೃಷ್ಟಿಯೆ"ಂದು ಹೆಸರು.

ಈ ಮೂರು ತತ್ತ್ವಗಳು ಸುಳ್ಳೆಂಬುದು ಡಾರ್ವಿನ್ನನ ಶೋಧಗಳಿಂದ ಜಗತ್ತಿಗೆ ಗೊತ್ತಾಯಿತು. ಎಲ್ಲ ವನಸ್ಪತಿಗಳೂ ಪ್ರಾಣಿವರ್ಗಗಳೂ ಮೊತ್ತಮೊದಲು ಒಂದೇ ಜೀವದಿಂದ ಕ್ರಮೇಣವಾಗಿ ಹುಟ್ಟಿದುವೆಂದು ಡಾರ್ವಿನ್ನನು ತನ್ನ ಪ್ರಯೋಗಗಳಿಂದ ಸಿದ್ಧಮಾಡಿ ತೋರಿಸಿದನು. ಮನುಷ್ಯನಾದರೂ ಇದಕ್ಕೆ ಅಪವಾದವಲ್ಲವೆಂದೂ, ಮನುಷ್ಯನು ವಸ್ತುತಃ ಮಂಗನ ಮರಿಯೇ ಅಹುದೆಂದೂ ಅವನು ತನ್ನ " ಮನುಷ್ಯನ ಉತ್ಪತ್ತಿ "ಎಂಬ ಪುಸ್ತಕದಲ್ಲಿ ವಿಸ್ತಾರವಾಗಿ ಮಂಡಿಸಿದ್ದಾನೆ. ಭೂಗರ್ಭಶಾಸ್ತ್ರದಿಂದ ಪೃಥ್ವಿಯು ಗತಾಯುಷ್ಯವು ಅಪರಿಮಿತವಾಗಿದೆಯೆಂದು ಸಿದ್ಧವಾಯಿತು. ಹೀಗೆ ಎಲ್ಲ ತರದಿಂದಲೂ ಸನಾತನಧರ್ಮವನ್ನು

ಹಾಳು ಮಾಡಿದರೂ, ಸತ್ಯಪ್ರಾಪ್ತಿಗಾಗಿ ತನ್ನ ಹೊರತು ಬೇರೆ ಗತಿಯಿಲ್ಲೆಂದು ವಿಕಾಸವಾದವು ಹೇಳಲಾರಂಭಿಸಿದೆ.

ಧರ್ಮಶಾಸ್ತ್ರದಂತೆಯೇ ನೀತಿಶಾಸ್ತ್ರದ ಗತಿಯಾಗಿದೆ. "ಉತ್ಕ್ರಾಂತಿ ವಾದವು ಮನುಷ್ಯನ ನೈತಿಕ ಸ್ವಭಾವವನ್ನೂ ಶಕ್ತಿಗಳನ್ನೂ ಕೂಡ ಕಡಿಮೇ ತರ ಗತಿಗೆ ಇಳಿಸುವುದಲ್ಲದೆ, ನೈತಿಕ ಹಾಗೂ ಧಾರ್ಮಿಕ ತತ್ತ್ವಗಳ ಮೂಲವನ್ನೇ ಕಡಿದು ಹಾಕುವುದೆಂದು ಹೇಳ ಬಹುದು." ಡಾರ್ವಿನ್ನನು ಹೇಳುವಂತೆ ಈ ಜಗತ್ತು

ವಿಕಾಸವಾದದಿಂದ ನೀತಿಶಾಸ್ತ್ರಕ್ಕೆ ಅರದಾಳ ಹತ್ತಿರುವುದು

ಬಲಿಷ್ಠರಿಗಾಗಿಯೇ ಇದ್ದುದಾದರೆ ನಿಜವಾದ ಪರೋಪಕಾರಕ್ಕೆ ಅರದಾಳ ಹತ್ತುವುದೆಂಬುದು ಸ್ಪಷ್ಟವಿದೆ. ಮತ್ತು ಅಧ್ಯಾತ್ಮದ ಕಲ್ಪನೆಯನ್ನು ಬಿಟ್ಟು ಕೇವಲ ಭೌತಿಕವಿಚಾರಗಳ ಮೇಲೆಯೇ ನೀತಿಶಾಸ್ತ್ರಮಂದಿರವನ್ನು ಕಟ್ಟಲು ಯತ್ನಿಸಿದವರ ಪ್ರಯತ್ನಗಳೆಲ್ಲ ನಿಷ್ಫಲವಾಗಿರುವವೆಂಬುದನ್ನು ನೀತಿಶಾಸ್ತ್ರದ ಇತಿಹಾಸವನ್ನೋ ದಿದವರಿಗೆ ಬೇರೆ ಹೇಳಬೇಕಾಗಿಲ್ಲ. "ಸ್ವಾರ್ಥ ಮತ್ತು ಕರ್ತವ್ಯಗಳ ನಡುವಿನ ವೈಪರೀತ್ಯ"ವನ್ನು, ಪರಲೋಕದ ಕಲ್ಪನೆಯನ್ನು ಹಿಡಿಯುವ ಹೊರತು ಬೇರೆ ಯಾವ ತರದಿಂದಲೂ ಹೋಗಲಾಡಿಸುವುದು ಶಕ್ಯವಿಲ್ಲ. ಎಂದಮೇಲೆ ವಿಕಾಸ ವಾದವು ನಿಜವಿದ್ದರೆ, ನಾನು ನನಗೆ ಕಷ್ಟವನ್ನು ಮಾಡಿಕೊಂಡು ಪರರಿಗೆ ಏಕೆ ಸಹಾಯಮಾಡಬೇಕೆಂಬುದು ಸ್ಪಷ್ಟವಾಗಲಾರದು. ಅವಿಶ್ರಾಂತವಾಗಿ ನಡೆದ ಜೀವನಕಲಹದಲ್ಲಿ ಬಲಿಷ್ಠರಿಗೇ ಜಯವಾಗುವುದರಿಂದ, ವಿಕಾಸವಾದಕ್ಕನುಸರಿಸಿ ಕೇವಲ ಸ್ವಾರ್ಥಪರಾಯಣತೆಯೇ ನಮ್ಮೆಲ್ಲರ ಸಾಧ್ಯವಾಗಬೇಕೆಂಬುದು ಸಹಜವಿದೆ. ಎಂತೆಯೇ "ಡಾರ್ವಿನ್ನನ ತತ್ತ್ವದಿಂದ ನಮ್ಮ ಕಸಬು ಕೈಗಾರಿಕೆ ಗಳೆಲ್ಲ ಪಶುವರ್ಗದವಾಗಿ, ಕ್ಷುಲ್ಲಕವಾದ ಸ್ವಾರ್ಥಕ್ಕಾಗಿ ಹೆಣಗಾಡಬೇಕೆಂಬ ಪಶುವೃತ್ತಿಯು ಮಾತ್ರ ನಮ್ಮಲ್ಲಿ ಹುಟ್ಟುತ್ತಿದೆ"ಯೆಂದು ಬ್ರಾಯನ್ ಸಾಹೇಬರು ಹೇಳಿದ್ದಾರೆ. ("In his Image" p. 134) ಮತ್ತು ಗ್ರೀನಸಾಹೇ ಬರು ತಮ್ಮ ನೀತಿಶಾಸ್ತ್ರಪ್ರವೇಶವೆಂಬ ಗ್ರಂಥದಲ್ಲಿ ಹೇಳುವಂತೆ ಉತ್ಕ್ರಾಂತಿವಾದ ದಿಂದ ಹೀಗಾಗುತ್ತ ಹೋಗುತ್ತದೆ, ಎಂಬ ಕಲ್ಪನೆಯಿಂದ ಕರ್ತವ್ಯಭಾವನೆಯು ಹುಟ್ಟುವುದು ಶಕ್ಯವಿಲ್ಲ; ಆದುದರಿಂದ ವಿಕಾಸವಾದದಲ್ಲಿ ನೀತಿಶಾಸ್ತ್ರದ ಬೀಜಗಳು ಸಿಗಲಾರವೆಂದು ಅವರು ಹೇಳಿದ್ದಾರೆ. ವಿಕಾಸವಾದದ ಪರಮಾಭಿಮಾನಿಯಾದ ಹಕ್ಸಲೇನೂ ಕೂಡ, ವಿಶ್ವವಿಕಾಸವು ಮನುಷ್ಯನ ನೈತಿಕವಿಕಾಸಕ್ಕೆ ವಿರುದ್ಧ

ವಾಗಿದೆಯೆಂಬುದನ್ನಂತೂ ತೀರ ಸ್ಪಷ್ಟವಾಗಿ ಒಪ್ಪಿಕೊಂಡಿದ್ದಾನೆ. (Preface to Evolution and Ethics,1894 ) ಮತ್ತು ಧರ್ಮಶಾಸ್ತ್ರವನ್ನು ಬಿಟ್ಟು ನೀತಿಶಾಸ್ತ್ರವು ಇರುವುದೇ ಅಶಕ್ಯವಾಗಿರುವುದರಿಂದ ರೂಢವಾದ ನೀತಿ ಶಾಸ್ತ್ರಕ್ಕೆ ವಿಕಾಸವಾದದಿಂದ ಪ್ರಚಂಡವಾದ ಆಘಾತವು ಸಿಕ್ಕಿದೆಯೆಂಬುದು ಎಲ್ಲರಿಗೂ ಸಹಜವಾಗಿಯೇ ಗೊತ್ತಾಗಬಹುದಾದ ಮಾತಾಗಿದೆ.

ವಿಕಾಸವಾದದಿಂದ ಆಧುನಿಕತತ್ವಜ್ಞಾನದಮೇಲೆ ಉಂಟಾದ ಪರಿಣಾಮ

ಆಧುನಿಕತತ್ತ್ವಜ್ಞಾನದ ಮೇಲೂ ವಿಕಾಸವಾದದ ಪರಿಣಾಮವು ಆಗದೇ ಹೋಗಿಲ್ಲ ! ಈ ಜಗತ್ತು ಪರಿಣಾಮಗಳಿಗೆ ಈಡಾಗಿರಬೇಕೆಂದೂ, ಸ್ಥಿರವಾದ, ಬದಲಾವಣೆಗಳಿಲ್ಲದ ವಿಶ್ವದ ಕಲ್ಪನೆಯು ಜೊಳ್ಳಾಗಿರುವುದೆಂದೂ ಈಗಿನ ಹಲವು ತತ್ತ್ವಜ್ಞಾನಿಗಳು ತಿಳಿಯುಹತ್ತಿದ್ದಾರೆ. ಅವ್ಯಯವಾದ, ಅವ್ಯಕ್ತವಾದ, ಅವಿಕಾರ್ಯವಾದ, ಅದೃಷ್ಟವಾದ, ಅಶ್ರುತವಾದ, ಅಮೃತವಾದ, ಅವಿಜ್ಞಾತವಾದ, ಅದ್ವಯವಾದ ವಸ್ತುವಿನ ಅಸ್ತಿತ್ವವನ್ನು ಅವರು ಸಹಿಸಲಾರರು. ಇಂತಹ ವಸ್ತುವೊಂದೇ ನಿಜವಾಗಿ ಇರುವುದೆಂದು ತಿಳಿದರೆ, ಮನುಷ್ಯನ ಪ್ರಯತ್ನಗಳೆಲ್ಲ ನಿಷ್ಪ್ರಯೋಜಕವಾದವುಗಳೆಂದು ತಿಳಿಯಬೇಕಾಗುವುದೆಂದು ಅವರು ಹೇಳುತ್ತಾರೆ. ಹಾಗಿರದೆ, ನಾವು ಮಾಡುವ ಪ್ರಯತ್ನಗಳಿಗೆ ಫಲವಿರಬೇಕು, ಅದರಿಂದ ಈ ಜಗತ್ತು ಬದಲಾಗುವುದು ಶಕ್ಯವಿರಬೇಕು, ಎಂದರೆ ಸೃಷ್ಟಿಯಲ್ಲಿ ನಿಜವಾದ ಮಾರ್ಪಾಟುಗಳನ್ನು ಒದಗಿಸಿತರುವ ಸಾಮರ್ಥ್ಯವು ನಮ್ಮಲ್ಲಿದೆಯೆಂದು ತಿಳಿಯಬೇಕೆಂದು ಅವರ ಅಭಿಪ್ರಾಯವು. ವೇದಾಂತಿಗಳ ಬ್ರಹ್ಮಕಲ್ಪನೆಯು ನಿರರ್ಥಕವಾದುದೆಂದೂ, ನಿರಾಧಾರವಾದುದೆಂದೂ ಅವರ ಅಂಬೋಣವಿದೆ. ಬ್ರಹ್ಮವು ಅವಿಪರಿಣಾಮಿಯೆಂದು ಹೇಳುವುದೆಂದರೆ ಹುಚ್ಚುತನದ ಪರಮಾವಧಿಯೆಂದು ಉಯಿಲಿಯಮ್ ಜೇಮ್ಸನೆಂಬ ಪಂಡಿತನು ಖಂಡಿತವಾದ ಅಭಿಪ್ರಾಯಬಟ್ಟಿದ್ದಾನೆ. ಈ ಪಂಡಿತನು, ಈ ಜಗತ್ತಿನಲ್ಲಿ ಸಾಂತನಾದ ದೇವನಿಗೂ ಮತ್ತು ರಾಕ್ಷಸನಿಗೂ ಅಖಂಡವಾದ ಯುದ್ಧನಡೆದಿದೆಯೆಂದೂ, ದೇವರೇ ನಮ್ಮನ್ನು ಹುಟ್ಟಿಸಿರುವುದರಿಂದ ದೇವರಿಗೆ ನಾವು ಸಹಾಯಮಾಡಬೇಕೆಂದೂ, ಹಾಗೆ ಮಾಡಿದರೆ ಮಾತ್ರ ಜಗತ್ತಿನಲ್ಲಿ ಪ್ರಗತಿಯಾಗುವುದು ಶಕ್ಯವಿದೆಯೆಂದೂ ತನ್ನ " A Pluralistic Universe " ಎಂಬ ಪುಸ್ತಕದಲ್ಲಿ ವಿವರಿಸಿದ್ದಾನೆ. ಇದಕ್ಕಿಂತಲೂ ಮಹತ್ವವಾದ ಕಲ್ಪನೆಯನ್ನು ಜೇಮ್ಸವಾರ್ಡನೆಂಬುವನು ಮುಂದೆ ಮಾಡಿರುವನು.

" ನಾವು ಹುಟ್ಟಿಸಲ್ಪಟ್ಟವರಾದರೂ ನಾವೂ ನವೀನ ಸಂಗತಿಗಳನ್ನು ಹುಟ್ಟಿಸಬಲ್ಲೆವೆಂ"ದು ( We are created creators) ಅವರ " Pluralism And Theism " ಎಂಬ ಪುಸ್ತಕದಲ್ಲಿ ಹೇಳಿದೆ. ಪ್ರಸಿದ್ಧ ಫ್ರೆಂಚತತ್ತ್ವಜ್ಞಾನಿಯಾದ ಹೆನ್ರಿಬರ್ಗಸನ್ನನ " ಕ್ರಿಯೇಟಿವ್ಹ್ ಎವ್ಹೊಲೂಶನ್ " ವಂತೂ ಪ್ರಸಿದ್ಧವೇ ಇದೆ. ನಿಜವಾಗಿಯೂ ಮಾರ್ಪಾಟುಗಳನ್ನು ಪಡೆಯುತ್ತಿರುವ ವಿಶ್ವವಿರಬೇಕೆಂಬುದೇ ಈ ಎಲ್ಲ ತತ್ತ್ವಜ್ಞರ ಮತವು.

ಕಾವ್ಯಗಳ ಮೇಲಾದರೂ ವಿಕಾಸವಾದದ ಪರಿಣಾಮವು ಚೆನ್ನಾಗಿಯೇ ಆಗಿದೆ. ಮಾಥ್ಯೂ ಅರ್ನಾಲ್ಡನೆಂಬ ಕವಿಯು ಹಲವುಸಾರೆ ಈ ವಿಚಾರಕ್ರಾಂತಿಯನ್ನು ತನ್ನ ಕವಿತೆಗಳಲ್ಲಿ ಹೊರಪಡಿಸಿರುವನು. ದೇವರು ಇರಲಿಕ್ಕಿಲ್ಲವೇ ? ಎಂಬುದೊಂದು ದೊಡ್ಡಪ್ರಶ್ನೆ. ಇದಕ್ಕವನು ಭಿನ್ನಭಿನ್ನವಾದ ಉತ್ತರಗಳನ್ನು ಕೊಡುವನು.

ವಿಕಾಸವಾದವು ಕವೀಶ್ವರರಿಗೆ ಹುಚ್ಚು ಹಿಡಿಸಿದೆ

ಒಮ್ಮೆ ಸೃಷ್ಟಿಯಲ್ಲಿ ಯಾಂತ್ರಿಕತನವೇ ತುಂಬಿದೆಯೆಂದೂ, ಮತ್ತೊಮ್ಮೆ ಅಂತರಾತ್ಮನ ಹೇಳಿಕೆಗಳೇ ಶ್ರೇಷ್ಠವೆಂದೂ, ಅವನ್ನು ನಾವು ಕೇಳಬಹುದೆಂದೂ ಅವನು ಹೇಳುತ್ತಾನೆ. ಈ ಕವಿತೆಗಳನ್ನೋದುವವರಿಗೆ ಆ ಕವಿಯ ವಿಷಯಕ್ಕೆ ಕನಿಕರವು ಬರದಿರಲಾರದು. " ಅಯ್ಯೊ, ಈ ಸಂಶಯ ರಾಕ್ಷಸನಿಂದ ನನ್ನನ್ನು ಬಿಡಿಸುವವರು ಆರೂ ಇರಲಿಕ್ಕಿಲ್ಲವೆ ? ಏನುಮಾಡಲಿ ? " ಎಂಬ ಹಲವು ತರದ ಉದ್ಗಾರಗಳು ಮೇಲಿಂದಮೇಲೆ ಅವನ ಕವಿತೆಗಳಲ್ಲಿ ಕಂಡುಬರುವಂತಿವೆ. ಪ್ರಸಿದ್ಧಕವಿಯಾದ ಲಾರ್ಡ ಟೆನಿಸನ್ನನಂತೂ ಈ ವಾದದ ಸೆಳವಿಗೆ ಸಿಕ್ಕು ಜಿಬ್ಬಿಯಾಗಿ ಹೋದನೆಂಬುದು ಅವನ ಕವಿತೆಗಳನ್ನೋದುವವರಿಗೆ ಸಹಜವಾಗಿಯೇ ಮನದಟ್ಟಾಗುವಂತಿದೆ. " ಇನ್‌ಮೆಮೋರಿಯಮ್ " ಎಂಬ ಕಾವ್ಯದಲ್ಲಿ ಈ ಕವೀಶ್ವರನು " ದೇವರಿಗೂ ಪ್ರಕೃತಿಗೂ ಯುದ್ಧನಡೆದಿರುವುದೆ? " ಎಂದು ತನ್ನ ಶಂಕೆಯನ್ನು ಮುಂದೆಮಾಡುವನು. ಆದರೆ ಅದಕ್ಕವನು ಏನೊಂದು ಸ್ಪಷ್ಟವಾದ ಉತ್ತರವನ್ನು ಕೊಡಲಾರನು. ಇದರ ವಿಷಯಕ್ಕೆ ಸಾಕಾಗುವತನಕ ಅತ್ತಿತ್ತ ಹೊರಳಾಡಿ ಕಡೆಗೆ " ಇದೆಲ್ಲದರ ಹಿಂದೆ ಏನೋ ಒಂದು ವಸ್ತುವಿರಬೇಕೆ"ಂದು ( Behind the veil, behind the veil ) ಹೇಳಿಬಿಡುವನು. ಎಷ್ಟಾದರೂ ಈ ವಿಶ್ವವೆಲ್ಲ ಯಾವುದೋ ಒಂದು ಸದ್ಧೇತುವಿನಿಂದ ಪ್ರೇರಿತವಾಗಿರುವುದೆಂದೂ, ಅದನ್ನದು ಕಡೆಗೆ ಮುಟ್ಟಿಯೇ ಬಿಡುವುದೆಂದೂ ಅವನ ವಿಶ್ವಾಸ. ಇರಲಿ, ಇಂತಹ ಹಲವು ವಿಚಾರಗಳನ್ನು ಬೇಕಾದವರು ಬೇರೆ ಕವಿತೆಗಳಲ್ಲೂ ಕಾಣಬಹುದು.

ಆದರೆ ಇಲ್ಲಿ ಅದು ಅನಾವಶ್ಯಕವಾಗಿರುವುದರಿಂದ ಆ ವಿಷಯುವನ್ನು ಹೆಚ್ಚಾಗಿ ಬೆಳೆಸಲಾರೆವು.

ಹೀಗೆ ಜ್ಞಾನರಾಜ್ಯದ ಎಲ್ಲ ಶಾಖೆಗಳಲ್ಲಿಯೂ ವಿಕಾಸವಾದದಿಂದ ಕ್ರಾಂತಿಯುಂಟಾಗಿರುವುದೆಂಬುದಿಷ್ಟೇ ಇಲ್ಲ; ಇದರಿಂದ "ಐತಿಹಾಸಿಕ ಪದ್ಧತಿ"ಯೆಂಬ

ಐತಿಹಾಸಿಕ ಪದ್ಧತಿ

ಹೊಸಪದ್ಧತಿಯೇ ಸದ್ಯಕ್ಕಿನ ಅಭ್ಯಾಸಕ್ರಮಗಳಲ್ಲಿ ರೂಢವಾಗಿ ಹೋಗಿದೆ; ಯಾವುದಾದರೊಂದು ವಿಷಯವನ್ನು ಅಭ್ಯಾಸ ಮಾಡುವುದಾದರೆ ಅದರ ಉಗಮಕ್ಕೆ ಕಾರಣಗಳಾವವು, ಅವುಗಳಿಂದ ಅದರ ಉತ್ಪತ್ತಿಯು ಹೇಗಾಯಿತು, ಅದರ ಬೆಳವಣಿಗೆಯು ಹಾಗೆಯೇ ಏಕಾಯಿತು, ಅದರ ನಿಯಮಗಳಾವವು ಇವೇ ಮೊದಲಾದ "ಐತಿಹಾಸಿಕ" ಪ್ರಶ್ನೆಗಳನ್ನು ಮತ್ತಮೊದಲು ಚರ್ಚಿಸಿದರೆ ಮಾತ್ರ ಅದರ ಸದ್ಯಕ್ಕಿನ ಜ್ಞಾನವು ಸರ್ವಾಂಗೀಣವಾಗುವುದೆಂದು ನಾವು ತಿಳಿಯುತ್ತೇವೆ. ಇದೆಲ್ಲ ಆ ವಿಕಾಸವಾದದ ಪರಿಣಾಮವಲ್ಲದೆ ಮತ್ತೇನು ?

ಹೆಚ್ಚೇನು ? ವಿಶ್ವಕೂಟವನ್ನು ಬಿಡಿಸಲುಜ್ಜುಗಿಸಿದ ಈ ವಿಕಾಸವಾದವು ಸದ್ಯಕ್ಕೆ ವಿಶ್ವವ್ಯಾಪಿಯಾಗಿದೆಯೆನ್ನಬಹುದು. ಅದು ಎಲ್ಲ ಶಾಸ್ತ್ರಗಳಿಂದಲೂ ಆಹಾರವನ್ನು ಸ್ವೀಕರಿಸಿ, ಅವೆಲ್ಲಕ್ಕೂ ರಕ್ತವನ್ನು ಪೂರೈಸಿಕೊಡುವ ರಕ್ತಾಶಯವು. ಅದರ ವಿಶಾಲವಾದ ಛತ್ರದ ಕೆಳಗೆ ಬರದಿರುವ, ಅದಕ್ಕೆ ಪುಷ್ಟಿಯನ್ನು ಕೊಡದಿರುವ ಮತ್ತು ಅದರಿಂದ ಉಪಕಾರಹೊಂದದ ಶಾಸ್ತ್ರವಿಲ್ಲ. ಅದಕ್ಕೆ ಪ್ರತಿಸ್ಪರ್ಧಿಯಾಗಿ ನಿಲ್ಲುವ ವಸ್ತುವೇ ತ್ರಿಭುವನದಲ್ಲಿಲ್ಲ. ದೇವರೂ ಕೂಡ ಇದರ ಆಘಾತಗಳಿಗೆ ಹಣ್ಣಾಗಿ ಜ್ಞಾನರಾಜ್ಯದಿಂದ ಓಡಿ ಹೋಗಿರುವನೆಂದಮೇಲೆ ಉಳಿದ ಪಾಮರರ ಪಾಡೇನು? ಇದು ಅಧ್ಯಾತ್ಮಶಾಸ್ತ್ರವು ಎದುರಿಸಬೇಕಾದ ಪ್ರಬಲವಾದ ಪ್ರತಿಸ್ಪರ್ಧಿ; ತತ್ತ್ವಜ್ಞಾನಿಗಳು ಬಿಡಿಸಬೇಕಾಗಿರುವ ತೊಡಕಿನ ತೊಡಕು; ನೀತಿಶಾಸ್ತ್ರವು ತಲೆಬೊಗ್ಗಿಸಬೇಕಾದ ದಂಡಸಾಮರ್ಥ್ಯವು; ಕವಿಗಳು ಅಚ್ಚರಿಪಟ್ಟು ಪಾಡಬೇಕಾದ ಅನಂತವಿಷಯವು; ಎಲ್ಲ ವಿದ್ಯಾರ್ಥಿಗಳು ಅನುಸರಿಸಬೇಕಾದ ಅಭ್ಯಾಸಪದ್ಧತಿಯು. ಇಂತಹ ತ್ರಿಭುವನೈಕಮಲ್ಲವಾದ ಈ ತತ್ತ್ವದ ದಿಗ್ದರ್ಶನವನ್ನಾದರೂ ನಮ್ಮ ಕನ್ನಡ ಬಾಂಧವರಿಗೆ ಮಾಡಿಕೊಡಬೇಕೆಂದು ಈ ಪುಸ್ತಕವನ್ನು ಬರೆದಿದ್ದೇವೆ. ಅದರ ಮಹತ್ತ್ವವು ಚೆನ್ನಾಗಿ ಲಕ್ಷದಲ್ಲಿ ಬರಬೇಕೆಂತಲೇ ಇಷ್ಟುದ್ದವಾದ ಅದರ ಮಹತಿಯನ್ನು ನಾವು ವರ್ಣಿಸಿರುವೆವು. ವಾಚಕರಿಗೆ ಅದರ ಬಗ್ಗೆ ತುಸುವಾದರೂ ಅಭಿರುಚಿ ಹುಟ್ಟಿದರೆ ನಮ್ಮ ಶ್ರಮವು ಸಫಲವಾದಂತಾಯಿತೆಂದು ಬಗೆಯುವೆವು.

# ೨

# ಸಾಧನಸಾಮುಗ್ರಿ

ಪೀಠಿಕೆ

ಮೊದಲನೆಯ ಪ್ರಕರಣದಲ್ಲಿ ಜ್ಞಾನದ ಉಗಮುವಾವುದೆಂಬುದನ್ನೂ, ಅದರ ಸಾಧ್ಯವೇನೆಂಬುದನ್ನೂ ತೋರಿಸಿದೆವು. ನಮ್ಮ ಅನುಭವವನ್ನು ಯೋಗ್ಯರೀತಿಯಿಂದ ಏಕೀಕರಿಸಿ, ಅದರ ಉಪಪತ್ತಿಯನ್ನು ಹೊಂದಿಕೆಯಾಗುವಂತೆ ಹಚ್ಚುವುದೇ ಎಲ್ಲ ಜ್ಞಾನದ ಉದ್ದೇಶವೆಂದು ಮೇಲೆ ಹೇಳಿದ್ದೇವೆ. ಸುತ್ತಲು ಆಶ್ಚರ್ಯಮುಯವಾಗಿ ಕಾಣುವ ಜಗತ್ತಿನ ಗೂಢತೆಯನ್ನು ಕಳೆಯಲು ಯತ್ನಿಸುವುದಕ್ಕಾಗಿಯೇ ಎಲ್ಲ ಧರ್ಮಗಳೂ, ದರ್ಶನಗಳೂ, ಶಾಸ್ತ್ರಗಳೂ, ಪ್ರವೃತ್ತವಾದುವೆಂದೂ ನಾವು ಅಲ್ಲಿಯೇ ಬರೆದಿದ್ದೇವೆ. ಜಗತ್ತಿನ ಗುಂಬನ್ನು ಬಿಡಿಸುವುದಕ್ಕಾಗಿಯೇ ಮಾಡಿದ ಈ ತರದ ಹಲವು ಪ್ರಯತ್ನಗಳಲ್ಲಿ ಉತ್ಕ್ರಾಂತಿವಾದವು ಮುಖ್ಯವಾಗಿದೆಯೆಂದೂ, ಅದು ಸರ್ವಾಂಗೀಣವಾಗಿ ಇಂದಿನ ವರೆಗೆ ಗೊತ್ತಿದ್ದ ಎಲ್ಲ ಸಂಗತಿಗಳನ್ನು ಯೋಗ್ಯ ರೀತಿಯಿಂದ ವಿವರಿಸುವುದರಿಂದ ಅದಕ್ಕಿಷ್ಟು ಮಹತ್ತ್ವ ಬಂದಿದೆಯೆಂದೂ ಅಲ್ಲಿಯೇ ಉಲ್ಲೇಖಿಸಿದೆ. ಇನ್ನು ಉತ್ಕ್ರಾಂತಿವಾದಿಗಳು ಯಾವ ಸಾಧನ ಸಾಮುಗ್ರಿಯ ಬಲದಿಂದ ಇಂತಹ ಪ್ರಚಂಡವಾದ ಕಾರ್ಯವನ್ನು ಕೊನೆಗಾಣಿಸಲೆಳಿಸುವರೆಂಬುದರ ಬಾಹ್ಯರೇಷೆಗಳನ್ನಿಷ್ಟು ಇಲ್ಲಿ ಎಳೆಯುವೆವು.

ಭೌತಿಕ ಶಾಸ್ತ್ರಜ್ಞರ ಎರಡು ಮುಖ್ಯವಾದ ಪ್ರಮಾಣಗಳು

ವಿಕಾಸವಾದಿಗಳು ಸತ್ಯಶೋಧನೆಗಾಗಿ ಪ್ರಸಿದ್ಧವಾದ ಶಾಸ್ತ್ರೀಯಪದ್ಧತಿಯನ್ನೇ ಅನುಸರಿಸುತ್ತಾರೆ. ವೇದಪ್ರಮಾಣಗಳನ್ನು, ಅವು ಕೇವಲ ಧರ್ಮಗ್ರಂಥಗಳೆಂಬ ಕಾರಣದಿಂದಲೇ ಒಪ್ಪಬೇಕೆಂಬುವವರ ಮಾತು ಅವರಿಗೆ ಎಂದೂ ಒಪ್ಪಿಗೆಯಾಗಲಾರದು. ಅನುಭವವೆಂದರೆ ಇಂದ್ರಿಯ ಜನ್ಯಜ್ಞಾನ ಅಥವಾ ಪ್ರತ್ಯಕ್ಷ ಪ್ರಮಾಣ, ಹಾಗೂ ಅನುಮಾನ ಅಥವಾ ಊಹೆಗಳೇ ಆದಿಭೌತಿಕ ಶಾಸ್ತ್ರಗಳು ಅನುಸರಿಸುವ ಎರಡು ಸಾಧನಗಳು. (ವಿಶ್ವಕೂಟ ಪು. ೧೩.) ಭಾವನೆ (Emotion), ಅಂತಃಕರಣ (Conscience), ಅಥವಾ ಅಂತಃಸ್ಫೂರ್ತಿ (Intuition) ಎಂಬುದೊಂದು ಮೂರನೆಯ ಸತ್ಯಾನ್ವೇಷಣೆಯ ಪದ್ಧತಿಯಿರುವುದೆಂಬುದಕ್ಕೆ ಅವರು ಎಂದೂ ಸಮ್ಮತಿಸಲಾರರು. ಇದಕ್ಕೆ ವಿಪರೀತವಾಗಿ,

ಸತ್ಯವನ್ನು ಕಂಡು ಹಿಡಿಯಬಲ್ಲ ಇಂತಹ ಅಂತರಾತ್ಮನ ಕಲ್ಪನೆಯೂ, ಮನೋ ವಿಕಾರಗಳಿಂದ (Emotions) ಸತ್ಯವು ಸಿಗಬಹುದೆಂಬ ಹುಚ್ಚು ನಂಬಿಗೆಯೂ ತಮಗೆ ಪ್ರಬಲವಾದ ಶತ್ರುಗಳೆಂದು ವಿಕಾಸವಾದಿಗಳು ತಿಳಿಯುತ್ತಾರೆ. (ವಿಶ್ವಕೂಟ ಪು. ೧೪) ಎಂತೆಯೇ ಪ್ರಸಿದ್ಧ ವಿಚಾರಿಗಳಾದ ಬರ್ಟ್ರಾಂಡ ರಸೆಲರೂ ಕೂಡ ಧರ್ಮದಿಂದ ಜಗತ್ತಿಗಾದಷ್ಟು ಕೇಡು, ಬೇರೆ ಯಾವುದೇ ಒಂದು ವಸ್ತುವಿನಿಂದ ಆಗಿಲ್ಲೆಂದು ಒಂದೆಡೆಗೆ ಅಭಿಪ್ರಾಯಪಟ್ಟಿದ್ದಾರೆ. ಆದುದರಿಂದಲೇ ಭೌತಿಕ ಶಾಸ್ತ್ರಗಳ ಅಭ್ಯಾಸಕ್ಕಾದರೂ ವಿಶಿಷ್ಟತರದ ಅಧಿಕಾರಿಗಳೇ ಬೇಕೆಂದೂ, ಅವರಲ್ಲಿ ಧಾರ್ಮಿಕ, ನೈತಿಕ, ಸಾಮಾಜಿಕ, ತಾತ್ತ್ವಜ್ಞಾನಿಕ ಮೊದಲಾದ ಯಾವುದೇ ತರದ ದುರಾಗ್ರಹಗಳೂ (prejudices), ಮೊದಲೇ ಕಲ್ಪಿಸಿಕೊಂಡ ವಿಚಾರಗಳೂ (preconceived notions), ಸರ್ವಥೈವ ಇರಲಾಗದೆಂದೂ ಆಧುನಿಕ ಶಾಸ್ತ್ರಗಳ ಪುರಸ್ಕರ್ತರು ಹೇಳುತ್ತಾರೆ. ನಮ್ಮ ಕಡೆಗೆ ಬರುವ ಜಿಜ್ಞಾಸುವು ಶುದ್ಧವಾದ, ಸರಳವಾದ ಮನಸಿನವನಿರಬೇಕೆಂದೂ, ಸಪ್ರಮಾಣವಾಗಿ ತೋರಿಸಿಕೊಟ್ಟುದಕ್ಕೆ ನಿರಾಗ್ರಹದಿಂದ ಒಪ್ಪಿಕೊಳ್ಳುವ ಸ್ವಭಾವದವನಿರಬೇಕೆಂದೂ ಅವರು ನಿರ್ದಾಕ್ಷಿಣ್ಯವಾಗಿ ಅಭಿಪ್ರಾಯಬಡುತ್ತಾರೆ. ಕಿಂಬಹುನಾ, ತಮ್ಮ ನೈತಿಕ, ಧಾರ್ಮಿಕ ಕಲ್ಪನೆಗಳನ್ನೆಲ್ಲ ಬೇರು ಸಹಿತ ಕಿತ್ತುಹಾಕಿಯೇ ನಮ್ಮ ಭೌತಿಕ ಶಾಸ್ತ್ರಗಳ ಪಾಠಶಾಲೆಗೆ ಬರಬೇಕೆಂದು ಈಗಿನವರ ಅಂಬೋಣವಿದೆ. ಇರಲಿ, ಈ ರೀತಿಯಿಂದ ಎರಡೇ ಸಾಧನಗಳು ಈಗಿನ ಶಾಸ್ತ್ರಜ್ಞರಿಗೆ ಸಾಕಾಗುವವೆಂಬುದು ಇದರ ಮೇಲಿಂದ ಸ್ಪಷ್ಟವಾಗುವಂತಿದೆ. ಆದರೆ ಪ್ಲೇಟೋ, ಹೇಗೆಲ್ಲ ಮೊದಲಾದವರು ಮಾಡಿದಂತೆ, ಕೇವಲ ಅನುಮಾನ ಅಥವಾ ತರ್ಕವೇ ತತ್ತ್ವಜ್ಞಾನದ ಮುಖ್ಯಸಾಧನವೆಂದು ಭಾವಿಸಿ, ಇಂದ್ರಿಯ ಜ್ಞಾನಕ್ಕೆ ಗೌಣತ್ತ್ವವನ್ನು ಕೊಡುವುದೂ ತಪ್ಪು; ಅಥವಾ ಬೇಕನ್, ಮಿಲ್ಲ ಮೊದಲಾದವರು ಮಾಡಿದಂತೆ ಕೇವಲ ಇಂದ್ರಿಯ ಜ್ಞಾನವೇ ತತ್ತ್ವಜ್ಞಾನಕ್ಕೆ ಸಾಕೆನ್ನುವುದೂ ತಪ್ಪು. ಇಂದ್ರಿಯಾನುಭವವೂ (Sense-experience), ಮತ್ತು ಬುದ್ಧಿಪೂರ್ವಕವಾದ ವಿಚಾರವೂ (Rational thought), ಜ್ಞಾನಾರ್ಜನೆಯ ಮುಖ್ಯವಾದ ಎರಡು ಅಂಗಗಳು. ಒಂದನ್ನೊಂದು ಬಿಟ್ಟರೆ ನಡೆಯುವಂತಿಲ್ಲ; ಒಂದರಿಂದೊಂದು ಪರಿಪೂರ್ಣವಾಗಿ, ಎರಡೂ ಕೂಡಿದರೆ ಮಾತ್ರ ಈ ಕೆಲಸವು ಸಾಧ್ಯವೆಂಬುದನ್ನು ಎಲ್ಲರೂ ಒಪ್ಪ

ಬೇಕಾದ ಮಾತೆಂದು ಹೇಕೆಲ್ಲನು (ವಿಶ್ವಕೂಟ ೧೫) ಹೇಳುತ್ತಾನೆ. ಎಂತೆಯೇ ಕಾಂಟನಾದರೂ ಇಂದ್ರಿಯ ಸಹಾಯವಿಲ್ಲದ ಬುದ್ಧಿಯು ಕುಂಟಾಗುವುದೆಂದೂ (ಜೊಳ್ಳು), ಬುದ್ಧಿಸಹಾಯವಿಲ್ಲದ ಇಂದ್ರಿಯವು ಕುರುಡಾಗುವುದೆಂದೂ ಒಂದೆಡೆಗೆ ಸೂಕ್ಷ್ಮವಿಚಾರಮಾಡಿ ಹೇಳಿದ್ದಾನೆ. ಕುರುಡಕುಂಟರಿಬ್ಬರೂ ಕೂಡಿದರೆ ಮಾತ್ರ ಗಮನಕ್ರಿಯೆಯು ಸುಲಭವಾಗುವುದೆಂಬುದೇ ಅವನ ಮತವು.

ಭೌತಿಕ ಶಾಸ್ತ್ರಜ್ಞರು ಅನುಸರಿಸುವ ಮಾರ್ಗದ ವರ್ಣನೆಯು

ವಿಸ್ತೃತವಾದ, ವಿಶಾಲವಾದ, ಮತ್ತು ಅವಿಶ್ರಾಂತವಾದ ಪರೀಕ್ಷಣೆಯು (observation), ಅಥವಾ ಸಿದ್ಧಾಂತ ತೆಗೆಯಬೇಕಾದ ಸತ್ಯಕ್ಕೆ ಸಂಬಂಧಿಸಿದ ಎಲ್ಲ ಸಂಗತಿಗಳ ಪರಿಶೀಲನೆಯು, ಶಾಸ್ತ್ರೀಯ ಪದ್ಧತಿಯ ಮೊದಲನೆಯ ಮೆಟ್ಟಿಲೆಂದು ಹೇಳಬಹುದು. ಅವುಗಳನ್ನೆಲ್ಲ ಸುವ್ಯವಸ್ಥಿತವಾಗಿ ಏಕೀಕರಿಸಿ ಸಾಮ್ಯಾಸಾಮ್ಯಗಳನ್ನು ಲಕ್ಷ್ಯಗೊಟ್ಟು ನೋಡಿ, ಅವುಗಳ ಶಾಸ್ತ್ರೀಯ ವಿಭಜನೆಯನ್ನು ಮಾಡಿ, ಯುಕ್ತವಾದ ವರ್ಣನೆಯನ್ನು ಬರೆದಿಡುವುದು ಎರಡನೆಯ ಮೆಟ್ಟಿಲು. (classification and description). ಆ ಮೇಲೆ ಅಲ್ಲಿಯ ವರೆಗೆ ನೋಡಿದ ವಿವಿಧ ಸಂಗತಿಗಳೆಲ್ಲ ಒಂದು ಅಥವಾ ಹಲವು ಕಟ್ಟು, ನಿಯಮ, ಅಥವಾ ಧರ್ಮಗಳ (laws) ಪ್ರತಿಫಲವೇ ಮಾತ್ರವೆಂಬುದನ್ನು ತೋರಿಸಿಕೊಡುವುದು ಮೂರನೆಯ ಮೆಟ್ಟಿಲು. (ಉದಾ: ಗ್ರಹಗಳ ಗತಿಗಳನ್ನೆಲ್ಲ ಪರಿಶೀಲಿಸಿ ಅವು ಆಕರ್ಷಣ ಶಕ್ತಿಯೆಂಬ ಒಂದೇ ನಿಯಮದ ಫಲವೆಂದು ನಿಶ್ಚಯಿಸುವುದು.) ಇದರ ಸಂಗಡಲೇ ನೋಡಿದ ಸಂಗತಿಗಳಲ್ಲಿ ಅವಶ್ಯವಾದ ಕೆಲವು ಕೃತ್ರಿಮ ಮಾರ್ಪಾಟುಗಳನ್ನು ಮಾಡಿಕೊಂಡು ಇಂತಹ ಮಾರ್ಪಾಟುಗಳಿಂದ ಫಲದಲ್ಲಿ ಏನು ಹೆಚ್ಚುಕಡಿಮೆಗಳಾಗುವವೆಂಬುದನ್ನು ಪರಿಕಿಸುವುದೇ ಶಾಸ್ತ್ರೀಯ ಪ್ರಯೋಗವೆಂದು ಕರೆಯಲ್ಪಡುತ್ತದೆ. ಈ ಪ್ರಕಾರವಾಗಿ ಕಂಡುಹಿಡಿಯಲ್ಪಟ್ಟ ವಿವಿಧ ಕಟ್ಟಳೆಗಳೂ (laws) ಕೂಡ, ಬೇರೊಂದು ಹೆಚ್ಚು ವಿಶಾಲವಾದ ಧರ್ಮಕ್ಕೆ (a wider law) ಅಧೀನವಾಗಿವೆಯೆಂದು ತೋರಿಸುವುದು ಅದರ ಮುಂದಿನ ಮೆಟ್ಟಿಲು. ಹೀಗೆಯೇ ಶಾಸ್ತ್ರದ ಅಂತಿಮ ಧ್ಯೇಯವೆಂದರೆ ಒಂದೇ ಒಂದಾದ, ಸುಸ್ಪಷ್ಟವಾದ ಮತ್ತು ಸ್ವತಃಸಿದ್ಧವಾದ ಧರ್ಮವನ್ನು ಕಂಡುಹಿಡಿದು, ಅದಕ್ಕನುಸಾರವಾಗಿಯೇ ಇಡೀ ಬ್ರಹ್ಮಾಂಡದ ವಿಸ್ತಾರವೆಲ್ಲ ನಡೆದಿರುವುದೆಂದು ತೋರಿಸುವುದೇ ಸರಿಯೆಂದು ಹೇಳಬಹುದು. ಇಂತಹ

ಹೆಚ್ಚೆಚ್ಚು ವಿಸ್ತಾರವಾದ ಕಟ್ಟುಗಳು ಸಿಗದಂತಾಗಲು, ಮನುಷ್ಯನು ತಾನು ಪಡೆದ ಅನುಭವದ ಮೇಲಿಂದಲೂ, ಎರಡನೆಯು ಶಾಸ್ತ್ರಜ್ಞರು ಮಾಡಿದ ಶೋಧಗಳ ಬಲದಿಂದಲೂ, ತನ್ನ ಬುದ್ಧಿಶಕ್ತಿಯ ಪ್ರಾಬಲ್ಯದಿಂದಲೂ, ಕೆಲವೊಂದು ನಿಯಮವು ಅಥವಾ ಧರ್ಮವು ಸೃಷ್ಟಿಯಲ್ಲಿರಬೇಕೆಂದು ಊಹಿಸುವನು. ಪ್ರಸಿದ್ಧ ಗಣಿತಜ್ಞನಾದ ನ್ಯೂಟನ್ನನು ಗುರುತ್ವಾಕರ್ಷಣದ ನಿಯಮವನ್ನು ಕಂಡುಹಿಡಿದುದು ಈ ಪ್ರಕಾರವಾದ ಊಹೆಗಳಿಂದಲೇ. ಮತ್ತು ಮುಂದೆ, ನೋಡಿದ ಸಂಗತಿಗಳೆಲ್ಲ ಆ ಒಂದೇ ನಿಯಮದ ಫಲವಿರಬೇಕೆಂದೂ ಹೇಳಲ್ಪಡುವುದು. (Formulation of Hypotheses). ಇವಕ್ಕೆ hypotheses ಎಂದರೆ ಶಾಸ್ತ್ರೀಯ ಕಲ್ಪನೆಗಳೆಂದು ಕರೆಯುತ್ತಾರೆ. ಆದರೆ ಇಷ್ಟಕ್ಕೇ ನಿಲ್ಲದೆ, ಆ ಊಹಿಸಲ್ಪಟ್ಟ ನಿಯಮವು ನಿಜವಿದ್ದರೆ ಅದರಿಂದ ತರ್ಕಶಾಸ್ತ್ರಕ್ಕನುಸರಿಸಿ ಹೊರಡಬೇಕಾದ ಸಂಗತಿಗಳು (deductions) ಸೃಷ್ಟಿಯಲ್ಲಿ ಪ್ರತ್ಯಕ್ಷ ನಿದರ್ಶನಕ್ಕೆ ಬರುವವೇ ಹೇಗೆಂಬುದನ್ನು ಪ್ರಮಾಣಿಸಿ ನೋಡಬೇಕಾಗುವುದು. ಅದು ಈ ತರದ ಪ್ರಮಾಣಗಳಿಂದ ಸಿದ್ಧವಾದರೆ, ಅದನ್ನು ಸಿದ್ಧಾಂತವೆಂದು ಎಲ್ಲರೂ ಒಪ್ಪಿಕೊಳ್ಳಬೇಕಾಗುವುದು. ಹಾಗೆ ಸಿದ್ಧವಾಗದಿದ್ದರೆ, ಆ ಕಲ್ಪಿತ ಊಹೆಯು ಸುಳ್ಳೆಂದು ತಿಳಿದು ಬೇರೊಂದು ಕಲ್ಪನೆಯನ್ನು ಊಹಿಸಬೇಕು. ಇದಕ್ಕೆ ಇಂಗ್ಲಿಷದಲ್ಲಿ Verification ಎನ್ನುವರು. ಅದನ್ನೇ ನಾವು ಕನ್ನಡವಲ್ಲಿ "ತಾಳೆ ನೋಡುವುದು" ಅಥವಾ ಸತ್ಯಸ್ಥಾಪನೆಯೆಂದು ಭಾಷಾಂತರಮಾಡಬಹುದು.

ಇದು ಎಲ್ಲ ಭೌತಿಕ ಶಾಸ್ತ್ರಗಳಿಗೂ ಸಾಮಾನ್ಯವಾದ ವಿವೇಚನೆಯಾಯ್ತು. ಇನ್ನು ವಿಕಾಸವಾದಿಗಳ ವಿಶಿಷ್ಟ ಸಾಧನಗಳಾವುವೆಂಬುದನ್ನಿಷ್ಟು ನೋಡುವುದು ಅವಶ್ಯವು.

ಪ್ರಕಾಶ ಪೃಥಕ್ಕರಣ ಯಂತ್ರ.

ಇವುಗಳಲ್ಲಿ ಪ್ರಕಾಶ ಪೃಥಕ್ಕರಣ ಯಂತ್ರವು ಮೊದಲನೆಯದು. ಇದರಿಂದ ದೃಶ್ಯವಿಶ್ವದೊಳಗಿನ ವಸ್ತುಗಳೆಲ್ಲ ಒಂದೇ ದ್ರವ್ಯದಿಂದ ಮಾಡಲ್ಪಟ್ಟಿವೆಯೆಂದು ಸಿದ್ಧವಾಗಿದೆ. ಇದಿಲ್ಲದಿದ್ದರೆ ಸ್ಪೆನ್ಸರ ಸಾಹೇಬರ ವಿಕಾಸವಾದವು ಎಂದೂ ಇಷ್ಟು ಮುಂದಕ್ಕೆ ಬರುತ್ತಿದ್ದಿಲ್ಲವೆಂದು ಹೇಳಬಹುದು. ಈ ಬ್ರಹ್ಮಾಂಡದಲ್ಲಿ ನಮ್ಮ ಪೃಥ್ವಿಯಂತಹ, ಭಿನ್ನಭಿನ್ನ ಆಕಾರದ ಅನಂತಖಗೋಳಗಳು ಇರುವ

ವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಅವುಗಳಲ್ಲಿ ಕೆಲವು ಸ್ವಪ್ರಕಾಶಿತವಾಗಿಯೂ, ಕೆಲವು ಪರಪ್ರಕಾಶಿತವಾಗಿಯೂ ಇವೆಯಷ್ಟೆ ? ಮತ್ತು ಅವುಗಳಿಂದ ಹೊರಡುವ ಪ್ರಕಾಶವು ದಶದಿಕ್ಕುಗಳಲ್ಲಿಯೂ ವ್ಯಾಪಿಸುವುದೆಂಬ ಮಾತಂತೂ ಸ್ಪಷ್ಟವಿದೆ. ಇದೇ ರೀತಿಯಿಂದ ಪೃಥ್ವಿಯ ಮೇಲೆ ಬಂದು ಬೀಳುವ ಈ ಖಗೋಳಗಳ ಪ್ರಕಾಶವನ್ನು ಲೋಲಕದೊಳಗಿಂದ ಹಾಯಿಸಿ, ಕೆಲವು ವಿಶಿಷ್ಟ ಪ್ರಯೋಗಗಳ ಸಹಾಯದಿಂದ ಆ ಪ್ರಕಾಶದ ಪೃಥಕ್ಕರಣವನ್ನು ಮಾಡುವರು. ಈ ತರದ ವಿಭಜನೆಯಿಂದ ಆ ಪ್ರಕಾಶವು ಯಾವ ಧಾತುಗಳಿಂದ ಹೊರಟಿರಬೇಕೆಂಬುದು ನಿಶ್ಚಿತವಾಗುತ್ತದೆ. ಹೀಗೆ ಆ ಪ್ರಕಾಶದ ಸಂಪೂರ್ಣ ಅಭ್ಯಾಸದಿಂದ ಆ ಆ ಖಗೋಳಗಳಲ್ಲಿರುವ ಧಾತುಗಳೆಲ್ಲ ಗೊತ್ತಾಗುತ್ತವೆ. ಭೌತಿಕ ಶಾಸ್ತ್ರಜ್ಞರು ಈ ಈ ಬಣ್ಣಗಳ ಪ್ರಕಾಶದಿಂದ ಈ ಈ ಧಾತುಗಳನ್ನು ಊಹಿಸಬೇಕೆಂದು ಪ್ರತ್ಯಕ್ಷ ಪ್ರಮಾಣದಿಂದ ಸಿದ್ಧಪಡಿಸಿಕೊಂಡು, ಈ ಪ್ರಯೋಗಗಳನ್ನು ಮಾಡುತ್ತಾರೆ. ಹೀಗೆ ಸೂರ್ಯ, ಚಂದ್ರ, ಗುರು, ಶನಿ, ಮಂಗಳ, ಮತ್ತು ಉಳಿದ ಎಲ್ಲ ನಕ್ಷತ್ರಗಳು ಮೊದಲಾದ ವಿಶ್ವದೊಳಗಿನ ಸಮಸ್ತ ಖಗೋಳಗಳೊಳಗೆ ಪೃಥ್ವಿಯಿಂದ ಭಿನ್ನವಾದ ಯಾವೇ ಘಟಕದ್ರವ್ಯಗಳು ಸಿಗಲಾರವೆಂಬುದು ಇವೇ ಪ್ರಯೋಗಗಳಿಂದ ಸಿದ್ಧವಾಗಿದೆ. ಇದರ ಮೇಲಿಂದ ಈ ವಿಶ್ವವೆಲ್ಲ ಪ್ರಾರಂಭದಲ್ಲಿ ಒಂದೇ ಆಗಿರಬೇಕೆಂದೂ, ಅದರೊಳಗೆ ಮುಂದೆ ಚಲನವಲನಗಳುಂಟಾಗಿ ಸದ್ಯಕ್ಕಿನ ಮಾರ್ಪಾಟುಗಳುಂಟಾದುವೆಂದೂ ಅವರು ಊಹಿಸಿದ್ದಾರೆ. ಇರಲಿ, ಇದೆಲ್ಲ ಮುಂದೆ ಬಂದೇ ಬರುವುದಾದುದರಿಂದ ಇಲ್ಲಿ ಹೆಚ್ಚು ವಿಸ್ತಾರವನ್ನು ಮಾಡುವುದಿಲ್ಲ.

ಎರಡನೆಯ ಪ್ರಬಲವಾದ ಸಹಾಯಕವೆಂದರೆ ಭೂಗರ್ಭಶಾಸ್ತ್ರವೆಂದು ಹೇಳಬಹುದು. ಆಧುನಿಕರ ಆಕಾಶವೆಂದರೆ ದಿಕ್ಕಲ್ಪನೆಯು, ಪದಾರ್ಥವಿಜ್ಞಾನಶಾಸ್ತ್ರ ಮತ್ತು ಜ್ಯೋತಿಃಶಾಸ್ತ್ರಗಳಿಂದ ಹೆಚ್ಚು ವಿಸ್ತಾರವಾದಂತೆ, ಅವರ ಕಾಲಕಲ್ಪನೆಯು ಭೂಗರ್ಭಶಾಸ್ತ್ರದಿಂದ ಬಹಳೇ ವಿಸ್ತಾರವನ್ನು ಹೊಂದಿದೆ. ಹಾಗಾದರೆ ಭೂಗರ್ಭಶಾಸ್ತ್ರವೆಂದರೇನು ? ನಾವಿರುವ ಪೃಥ್ವಿಯು ಸುಮಾರು ೮೦೦೦ ಮೈಲು ವ್ಯಾಸವುಳ್ಳ ಒಂದು ಗೋಳವಿರುವುದಷ್ಟೆ ? ಎಂದರೆ ಅದರ ತ್ರಿಜ್ಯವು ಸುಮಾರು ೪೦೦೦ ಮೈಲುಗಳಿರುವುದೆಂದಂತಾಯಿತು. ನಾವಿರುವ ಯಾವುದೇ

ಎರಡನೆಯ ಸಾಧನ
ಭೂಗರ್ಭಶಾಸ್ತ್ರ.

ಬಿಂದುವಿನಿಂದ ನೆಟ್ಟಗೆ ಪೃಥ್ವಿಯ ಮಧ್ಯಬಿಂದುವಿನ ವರೆಗೆ ೪೦೦೦ ಮೈಲುಗಳ ಅಂತರವಿರುವುದೆಂದು ಇದರ ಅರ್ಥವು. ಇನ್ನು, ನಾವಿರುವ ಬಿಂದುವನ್ನು ಇಳಿಸುತ್ತ ಇಳಿಸುತ್ತ ಆ ಬಿಂದುವಿನ ಕಡೆಗೆ ಹೋಗಹತ್ತಿದೆವೆಂದರೆ ದಾರಿಯಲ್ಲಿ ನಮಗೆ ಏನೇನು ಹತ್ತಬಹುದು ? ಬಾವಿ ಕೆರೆಗಳನ್ನು ಕಡಿಸುವಾಗ ಈ ಮಾತು ಎಲ್ಲರ ಅನುಭವಕ್ಕೂ ಬಂದಿರಲಿಕ್ಕೆ ಬೇಕು. ಕೆಲವು ಮೊಳಗಳ ಕೆಳಗೆ ಬೇರೆ ಬೇರೆ ತರದ ನೆಲಗಳು ಹತ್ತುತ್ತ ಹೋಗುತ್ತವೆಂದು ನಾವು ಹೇಳುತ್ತೇವೆ. ಒಮ್ಮೆ ಮಟ್ಟಿಯು ಹತ್ತಿತೆಂದರೆ, ಮತ್ತೊಮ್ಮೆ ಕರೇಮಣ್ಣು, ಆ ಮೇಲೆ ಮುಸಾರಿ, ಆ ಮೇಲೆ ಕಟಿಕು, ಕಲ್ಲು, ಮೊದಲಾದ ನಾನಾತರದ "ಪದರು" ಗಳು ನಮ್ಮ ಕಣ್ಣಿಗೆ ಬೀಳುವವಷ್ಟೆ ? ಹೀಗೆಯೇ ನಾವು ಒಳವೊಳಕ್ಕೆ ಹೋದ ಹೋದಂತೆ ಒಮ್ಮೆ ಖಡು, ಒಮ್ಮೆ ಸುಣ್ಣ, ಮೊದಲಾದ ತರಗಳೂ ಬಹು ದಪ್ಪಾಗಿ ಬಿದ್ದಿರುವವೆಂದು ನಮಗೆ ತೋರಿಬರದಿರಲಾರವು. ನಾವು ಹೀಗೆಯೇ ಎಷ್ಟು ದೂರದ ವರೆಗೆ ಹೋಗಬಹುದೆಂಬುದು ವಿವಾದಾಸ್ಪದವಾದ ಮಾತು. ಈ ೪೦೦೦ ಮೈಲುಗಳಲ್ಲಿ ಕನಿಷ್ಠಪಕ್ಷಕ್ಕೆ ಮೊದಲಿನ ೬೦ ಮೈಲುಗಳಾದರೂ ಗಟ್ಟಿಯಾದ (Solid) ಭಾಗವಿರಬೇಕೆಂದು ಶಾಸ್ತ್ರಜ್ಞರು ತರ್ಕಿಸಿದ್ದಾರೆ. ಅದಕ್ಕೂ ಕೆಳಗೆ ರಸರೂಪವಸ್ತುವಿರಬೇಕೆಂತಲೂ, ಪೃಥ್ವಿಯ ಮಧ್ಯಬಿಂದುವಿನ ಹತ್ತರ ಯಾವ ಸ್ಥಿತಿಯಿರುವುದೆಂಬುದನ್ನು ನಿಶ್ಚಯಿಸಿ ಹೇಳುವುದು ಕಠಿಣವೆಂತಲೂ ಅವರು ಒಪ್ಪಿಕೊಳ್ಳುತ್ತಾರೆ. ಗಟ್ಟಿಯಾದ ೬೦ ಮೈಲುಗಳಲ್ಲಿ ಕೂಡ, ನಮಗೆ ಗೊತ್ತಿದ್ದುದು ೨೫ ಮೈಲುಗಳು ಮಾತ್ರ.

ಇನ್ನು ಈ ತರದ ಪ್ರಸ್ತರೀಭೂತಶಿಲೆಗಳು, ಪಡಿಗಳು ಅಥವಾ ಪದರುಗಳು ಏನನ್ನು ತೋರಿಸುತ್ತವೆ ? ಇದರಿಂದ ತೆಗೆಯಬಹುದಾದ ಮೊದಲನೆಯ ಅನುಮಾನವೇನೆಂದರೆ, ಇದು ನೀರಿನ ಪ್ರವಾಹದಿಂದ ಹರಿದು ಬಂದ ಮಣ್ಣಾಗಿರಬೇಕು. ಯಾಕೆಂದರೆ ನೀರಿನ ಹೊರತು ಬೇರೆ ಯಾವ ವಸ್ತುವಾದರೂ ಈ ತೆರನಾಗಿ ವಸ್ತುಗಳನ್ನು ವಿಂಗಡಿಸಿ, ಅಡ್ಡವಾಗಿ ಎಂದರೆ ನೆಲಸಮಾನವಾಗಿ (Horizontally) ಪದರು ಪದರಾಗಿ ಬೀಳುವಂತೆ ಮಾಡುವುದು ಶಕ್ಯವಿಲ್ಲ. ಆದರೆ ಈಗೂ ಕೂಡ ನೀರು ಮಾತ್ರ ಈ ಕೆಲಸವನ್ನು ಎಡೆಬಿಡದೆ ಮಾಡುತ್ತಿರುತ್ತದೆ. ಗಂಗಾನದಿಯ ಪ್ರವಾಹ ಮುಖವಾಗಿ

ಇದರಿಂದ ತೆಗೆಯಬಹುದಾದ ಮೂರು ಅನುಮಾನಗಳು.

ಪ್ರತಿವರುಷ ಎಷ್ಟೋ ಮಣ್ಣು ಹರಿದು ಹೋಗಿ ಸಮುದ್ರ ತಳದಲ್ಲಿ ಪದರು-ಪದರಾಗಿ ಕೂಡುವುದೆಂಬ ಮಾತು ಎಲ್ಲರಿಗೂ ತಿಳಿಯುವಂತಿದೆ. ಎರಡನೆಯ ಅನುಮಾನವೇನೆಂದರೆ, ಹೀಗೆ ನೀರಿನ ತಳಕ್ಕೆ ಶಿಲೀಭೂತವಾಗಿ ಬೀಳುತ್ತಿರುವ ವಸ್ತುಗಳಷ್ಟು ನೆಲವು, ಬೇರೆ ಕಡೆಗೆ ಮೊದಲೇ ಇದ್ದ ಭೂಭಾಗದಿಂದ ಹರಿದು ಬಂದಿರಲಿಕ್ಕೆ ಬೇಕು. ಎಂದರೆ ಇಲ್ಲಿ ಆ ತಳದ ತರವು ದಪ್ಪವಾದಂತೆ ಬೇರೆ ಕಡೆಗಿನ ನೀರಿನ ಮೇಲೆ ಕಾಣಿಸುತ್ತಿರುವ ಭೂಭಾಗವು ಕಡಿಮೆಯಾಗಿರಲಿಕ್ಕೆ ಬೇಕು. ಪರ್ವತ ಶಿಖರಗಳು ಸಣ್ಣಾಗಿ ಸಮುದ್ರತಲಕ್ಕೆ ಬೀಳಹತ್ತುವವೆಂಬುದೇ ಇದೆಲ್ಲದರ ಸಾರಾಂಶವು. ಮತ್ತು ಕಡೆಯ ಮಾತೆಂದರೆ, ಎಲ್ಲ ತರಗಳು ಅಡ್ಡವಾಗಿ (ಪ್ರತ್ಯಕ್ಕಾಗಿ) ಬೀಳುತ್ತ ಹೋಗಿರಲಿಕ್ಕೆ ಬೇಕು. ಎಂದರೆ ಕೆಳಕೆಳಕ್ಕಿನ ತರಗಳು ಮೇಲಿನ ತರಗಳಿಗಿಂತ ಹೆಚ್ಚೆಚ್ಚು ಪ್ರಾಚೀನವಾಗಿರಲಿಕ್ಕೆ ಬೇಕು. ಎಂದರೆ ಸಮುದ್ರದ ನೀರು ಉಗಿಯ ರೂಪದಿಂದ ಮೇಲಕ್ಕೆ ಹೋಗಿ, ಮತ್ತೆ ಪುನಃ ಮೇಘಗಳ ರೂಪದಿಂದ ಭೂಭಾಗದ ಮೇಲೆ ಬಿದ್ದು, ಅಲ್ಲಿಯ ನೆಲವನ್ನು ಕ್ರಮವಾಗಿ ಹರಿಸಿಕೊಂಡು ಬಂದು ಸಮುದ್ರಕ್ಕೆ ಕೂಡಿಸುತ್ತದೆ. ಹಾಗಾದರೆ ಪೃಥ್ವಿಯ ಪೃಷ್ಠಭಾಗದಲ್ಲಿ ಜಲಭಾಗವೇ ಹೆಚ್ಚಾಗಿರುವುದರಿಂದ, ಭೂಭಾಗವೆಲ್ಲ ಕ್ರಮೇಣ ಸವೆಯುತ್ತ ಹೋಗಿ ಕಡೆಗೆ ಪೃಥ್ವಿಯೆಲ್ಲ ಜಲಮಯವೇ ಆಗಬಹುದಲ್ಲವೇ, ಎಂದು ನಮ್ಮ ವಾಚಕರು ಕೇಳುವುದು ಸಹಜವಾಗಿದೆ. ಅಹುದು ಹಾಗಾಗುವುದು ಸಹಜವಿದೆ. ಪೃಥ್ವಿಯ ಪೃಷ್ಠಭಾಗದ ¼ ದಷ್ಟು ಮಾತ್ರ ನೆಲವಾಗಿರುವುದರಿಂದ ಕೆಲವು ವರುಷಗಳಲ್ಲಿಯೆ ಈ ಪೃಥ್ವಿಯು ಜಲವಾಗುವ ಪ್ರಸಂಗವು ಬರಬಹುದಾಗಿತ್ತು. ಆದರೆ ಸೃಷ್ಟಿಕರ್ತನು ಹಾಗಾಗಬಾರದೆಂದು ಕೆಲವೊಂದು ಯುಕ್ತಿಯನ್ನು ಯೋಜಿಸಿದ್ದಾನೆ. ಈ ಕಾರ್ಯದಲ್ಲಿ ಜ್ವಾಲಾಮುಖಿ, ಭೂಕಂಪಗಳು ನಮ್ಮ ಸಹಾಯಕ್ಕೆ ಬರುವ ಮುಖ್ಯ ಕರ್ತೃಗಳು. ಪೃಥ್ವಿಯ ಗರ್ಭದಲ್ಲಿ ತೀರ ಉಷ್ಣಸ್ಥಿತಿಯಲ್ಲಿರುವ ರಸರೂಪ ಪದಾರ್ಥವಿರಬೇಕೆಂದು ಶಾಸ್ತ್ರಜ್ಞರು ನಿರ್ಧರಿಸಿರುವುದನ್ನು ಮೇಲೆಯೇ ಹೇಳಿದ್ದೇವೆ. ಜ್ವಾಲಾಮುಖಿಗಳಿಂದ ಆ ರಸರೂಪ ದ್ರವ್ಯವು ಮೇಲಿಂದ ಮೇಲೆ ಹೊರಕ್ಕೆ ಬಂದು ಪ್ರಾಣಿಗಳ ಜೀವನಕ್ಕಾಗಿ ಹೊಸ ನೆಲವನ್ನು ತಯಾರಿಸಿಕೊಡುತ್ತದೆಂದು ಹೇಳಬಹುದು. ಈ ದೃಷ್ಟಿಯಿಂದ ವಿಚಾರಮಾಡಿದರೆ, ಸಕೃದ್ದರ್ಶನಕ್ಕೆ ಜ್ವಾಲಾಮುಖಿಗಳು ಮನುಷ್ಯನ ನಾಶವನ್ನು ಮಾಡುತ್ತಿರುವಂತೆ ಕಂಡುಬಂದರೂ ಅವುಗಳ ಅಸ್ತಿತ್ವ

ವಿಲ್ಲದಿದ್ದರೆ ಮನುಷ್ಯನು ಬದುಕುವುದೇ ಕಠಿಣವಾಗುತ್ತಿತ್ತೆಂದು ಹೇಳಬಹುದು. ಕಿಂಬಹುನಾ, ಮಾನವ ಜಾತಿಯು ಅಕಾಲ ಮರಣವನ್ನು ತಪ್ಪಿಸುವ ಶ್ರೇಯಸ್ಸು ಈ ಜ್ವಾಲಾಮುಖಿಗಳದೇ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಈ ತರದ ಪದರುಗಳಿಂದ ಪೃಥ್ವಿಯ ಆಯುಷ್ಯವನ್ನು ಹೇಗೆ ಅಳೆಯುವ ರೆಂಬುದನ್ನು ತುಸು ವಿಚಾರಿಸುವಾ. ಬೇರೆ ಬೇರೆ ತರದ ಪದರುಗಳಾಗಲಿಕ್ಕೆ ಬೇರೆ ಬೇರೆ ಕಾಲಾವಧಿಗಳು ಬೇಕೆಂಬುದು ಸಹಜವಿದೆ. ಮಟ್ಟಿಯ ತರಗಳು ಐವತ್ತು ವರುಷಗಳಲ್ಲಿ ಒಂದು ಇಂಚು ದಪ್ಪಾಗಿ ಬೀಳುವವೆಂದು ತಿಳಿದರೆ, ಕಟಿಕಿನ ತರಗಳಿಗೆ ನೂರಾರು ವರುಷಗಳು ಬೇಕಾಗಬಹದು. ಈ ಬೇರೆ ಬೇರೆ ತರದ ಪದರುಗಳ ಪ್ರಮಾಣವನ್ನು ಬೇರೆ ಬೇರೆ ನದಿಗಳ ಪ್ರವಾಹದಿಂದ ಬೇರೆ ಬೇರೆ ಯಾಗಿ ನಿಶ್ಚಯಿಸಿರುವರು. ಸದ್ಯಕ್ಕೆ ನೈಲನದಿಯು ಪ್ರವಾಹದಿಂದ ಸುಮಾರು ನೂರು ವರ್ಷಗಳಲ್ಲಿ ೩ ಇಂಚು ದಪ್ಪಾದ ಪದರುಗಳು ಬೀಳುವವೆಂದು ಲೆಕ್ಕ ಮಾಡಿದ್ದಾರೆ. ಅದರಂತೆಯೇ ಗಂಗಾನದಿಯು ಪ್ರತಿ ವರುಷ ಸಮುದ್ರಕ್ಕೆ ಒಯ್ಯುವ ಕೆಸರಿನ ಲೆಕ್ಕವನ್ನು ಹಾಕಬಹುದು. ಅದರ ಮೇಲಿಂದ ಇಷ್ಟು ( ಉದಾ : ೧೦೦ ಚೌ. ಮೈಲು ) ವಿಸ್ತಾರವಾದ ನೆಲವನ್ನು ಇಷ್ಟು ( ಉದಾ : ೧ ಇಂಚು ) ಎತ್ತರವಾಗಿ ಪದರುಬೀಳುವಂತೆ ಮಾಡಬೇಕಾದರೆ ಇಷ್ಟು ವರುಷ ಗಳು ಹಿಡಿಯುವವೆಂದು ಸಹಜವಾಗಿಯೇ ಹೇಳಬಹುದು. ಈ ತೆರನಾಗಿ ಭೂಗರ್ಭಶಾಸ್ತ್ರದಿಂದ ಪೃಥ್ವಿಯ ಗತಾಯುಷ್ಯವನ್ನೆಲ್ಲ ನಿಶ್ಚಯಿಸಬಹುದೆಂದು ಶಾಸ್ತ್ರಜ್ಞರ ಮತವಿದೆ. ಆದರೆ ಈ ಪದರುಗಳೆಲ್ಲ ಒಂದೇ ಕಡೆಗೆ ನಮಗೆ ಸಿಗುವ ವೆಂದು ತಿಳಿಯುವುದು ಮಾತ್ರ ತಪ್ಪಾಗದಿರದು. ಹೀಗೆ ಬಿದ್ದಿರುವ ಪದರುಗಳು ಜ್ವಾಲಾಮುಖಿ, ಭೂಕಂಪಗಳಿಂದ ಅಸ್ತಾವ್ಯಸ್ತವಾಗಿ, ಕ್ರಮವಿಲ್ಲದೆ ಅವ್ಯವಸ್ಥಿತ ವಾಗಿ ಬಿದ್ದಿರುವವೆಂಬುದು ಸ್ಪಷ್ಟವಿದೆ. ಎಂತೆಯೇ ಒಬ್ಬ ಗ್ರಂಥಕಾರನು ಈ ವಿಷಯವನ್ನು ಚರ್ಚಿಸುವಾಗ, ಭೂಗರ್ಭಶಾಸ್ತ್ರದ ಪದರುಗಳು ಹರಿದುಹೋದ ಒಂದು ಪುಸ್ತಕದ ಪುಟಗಳಂತಿರುವವೆಂದು ಯಥಾರ್ಥವಾಗಿ ಬರೆದಿದ್ದಾನೆ. ಸಿಕ್ಕ ಸಿಕ್ಕೆಡೆಗೆ ಹಂಚಿಹೋದ, ಹುಳತಿಂದು ಅರ್ಧ ನಾಶವಾದ, ಆ ಪುಸ್ತಕದ ಪುಟ ಗಳನ್ನು ಕ್ರಮವಾಗಿ ಕೂಡಿಸಿ ಮುಂಚಿನಂತೆ ಏಕಗ್ರಂಥವನ್ನು ಸಿದ್ಧಪಡಿಸುವುದು ಎಷ್ಟು ಕಷ್ಟವೋ, ಅಷ್ಟೇ ಕಷ್ಟವು ಪೃಥ್ವಿಯ ಆಯುಷ್ಯವನ್ನು ಅಳೆಯುವವರಿಗೆ

ಪೃಥ್ವಿಯ ಆಯುಷ್ಯವನ್ನು ಹೇಗೆ ಅಳೆಯುವರು ?

ಆಗುತ್ತದೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಅಮೇರಿಕೆಯಲ್ಲಿ ಬಂಡೆಗಲ್ಲಿನ ತರಗಳು ಅವ್ಯಾಹತವಾಗಿ ಮೈಲುಗಟ್ಟಲೆ ದಪ್ಪಾಗಿ ಬಿದ್ದಿರುವವು. ಅದರ ಮೇಲಿನ ತರಗಳು ಮತ್ತೊಂದು ದೇಶದಲ್ಲಿ ಎಂದರೆ ಪೃಥ್ವಿಯ ಗರ್ಭದೊಳಗಿನ ಮತ್ತೊಂದು ಭಾಗದಲ್ಲಿ ಸಿಕ್ಕುವವು. ಅದಕ್ಕೂ ಮೇಲಿನ ತರಗಳು ಬೇರೊಂದು ಪ್ರದೇಶದಲ್ಲಿ ಸಿಕ್ಕಬಹುದು. ಆದರೆ ಅವನ್ನೆಲ್ಲ ಹೊಂದಿಕೆಯಾಗುವಂತೆ ಕೂಡಿಸುವುದು ಶಾಸ್ತ್ರಜ್ಞರ ಕಠಿಣವಾದ ಕೆಲಸವು.

ಈ ಪ್ರಸ್ತರೀಭೂತ ಶಿಲೆಗಳಲ್ಲಿ ಬೇರೆ ಬೇರೆ ತರದ ಪ್ರಾಣಿವರ್ಗಗಳ ಅಸ್ಥಿಪಂಜರ ಮೊದಲಾದ ಅವಶೇಷಗಳು ಸಿಕ್ಕುವವು. ಈ ರೀತಿಯಿಂದ ವಿಶಿಷ್ಟವಾದ ಪದರುಗಳಲ್ಲಿ ವಿಶಿಷ್ಟವಾದ ಅಸ್ಥಿಗಳು ಸಿಕ್ಕವೆಂದರೆ, ಅದರ ಮೇಲಿಂದ ಆ ಪದರುಗಳು ಎಷ್ಟು ವರುಷಗಳ ಹಿಂದೆ ಇದ್ದವೆಂಬುದನ್ನು ಲೆಕ್ಕ ಮಾಡಿ ನಿಶ್ಚಯಿಸಬಹುದು. ಎಂದರೆ ಆ ಆ ಪ್ರಾಣಿವರ್ಗಗಳು ಎಷ್ಟು ವರುಷಗಳ ಹಿಂದೆ ಅಸ್ತಿತ್ವದಲ್ಲಿ ಬಂದವು, ಅವುಗಳ ಆಕಾರವೇನಿತ್ತು, ಅವುಗಳ ದೇಹರಚನೆಯಲ್ಲಿ ಕಾಲಾಂತರದಿಂದ ಯಾವ ತರದ ಬದಲಾವಣೆಗಳಾಗುತ್ತ ಹೋಗಿರಬಹುದು, ಎಂಬಿವೇ ಮೊದಲಾದ ಪ್ರಶ್ನೆಗಳಿಗೆ ಉತ್ತರವನ್ನರಿಯುವುದು ಸುಲಭವಾಗುವುದು. ಇದರ ಮೇಲಿಂದಲೇ ಕ್ರಮೇಣವಾಗಿ ಯಾವಾವ ಪ್ರಾಣಿಗಳು ಈ ಜಗತ್ತಿನಲ್ಲಿ ಉದಯವಾಗುತ್ತ ಬಂದವೆಂಬುದೂ ತಿಳಿಯುವಂತಿದೆ. ಹಾಗೆಯೇ ಜೀವವು ಎಷ್ಟು ವರುಷಗಳ ಹಿಂದೆ ಪೃಥ್ವಿಯ ಮೇಲೆ ಪ್ರಕಟವಾಗಿರಬೇಕೆಂಬುದೂ ಇದರಿಂದಲೇ ತಿಳಿಯುವಂತಿದೆ. ಎಂದರೆ ಯಾವ ಪದರುಗಳಿಂದ ಪ್ರಾಣಿಗಳ ಕುರುಹುಗಳು ಕಂಡುಬರುತ್ತವೆಯೋ, ಅಲ್ಲಿಂದಲೇ ಜೀವವು ಉದಯಕ್ಕೆ ಬಂದಿರಬೇಕೆಂಬುದು ಸ್ಪಷ್ಟವಿದೆ. ಇರಲಿ, ಸದ್ಯಕ್ಕಿಷ್ಟು ಸಾಕು. ಇದರ ಮೇಲಿಂದ ಸಾಧಾರಣ ಜ್ಞಾನವಾಗುವಂತಿರುವುದರಿಂದ, ಇನ್ನೂ ಹೆಚ್ಚಾಗಿ ಬೆಳೆಸುವ ಕಾರಣವಿಲ್ಲ. ( ಇದೆಲ್ಲ ವಿಷಯಕ್ಕಾಗಿ "ಆಧುನಿಕ(ಭೌತಿಕ)ಶಾಸ್ತ್ರವೂ ವಿಚಾರವೂ" ಎಂಬ ಪುಸ್ತಕದ ೮-೧೪ ಪುಟಗಳನ್ನು ಬೇಕಾದವರು ನೋಡಿಕೊಳ್ಳಬಹುದು. )

ಪ್ರಾಣಿಗಳ ಆಯುಷ್ಯವನ್ನೂ ಇದೇ ರೀತಿಯಿಂದ ನಿಶ್ಚಯಿಸುವರು.

ವಿಕಾಸವಾದಿಗಳ ಮೂರನೆಯ ಸಾಧನವೆಂದರೆ Biology ಎಂದರೆ ಜೀವಶಾಸ್ತ್ರವೆಂದು ಹೇಳಬಹುದು. ಇದರಲ್ಲಿ ಎರಡು ಭಾಗಗಳಿರುವವು; ಒಂದು

ಪ್ರಾಣಿಶಾಸ್ತ್ರವೆಂದು (Zoology) ಕರೆಯಲ್ಪಡುತ್ತದೆ; ಮತ್ತೊಂದನ್ನು Botany ಎಂದರೆ ವನಸ್ಪತಿಶಾಸ್ತ್ರವೆಂದು ಕರೆಯುತ್ತಾರೆ. ವಿಕಾಸವಾದದ ಜನಕನೆಂದು ತಿಳಿಯಲ್ಪಡುವ ಚಾರ್ಲಸ ಡಾರ್ವಿನ್ನನ ಶೋಧಗಳೆಲ್ಲ ಇವೆರಡು ಶಾಸ್ತ್ರಗಳಲ್ಲಿ ಮಾತ್ರ ಅಡಕವಾಗಿವೆಯೆಂದು ಹೇಳಬಹುದು. ಎಂದರೆ ಅವನು ಜೀವಿಗಳ ರಾಜ್ಯದಲ್ಲಿ ಮಾತ್ರ ಕ್ರಮೇಣವಾಗಿ ವಿಕಾಸವು ಸಂಭವಿಸಿರಬೇಕೆಂಬುದನ್ನು ಪ್ರತ್ಯಕ್ಷ ಪ್ರಮಾಣಗಳಿಂದ ಸಿದ್ಧಮಾಡಿ ತೋರಿಸಿದನು. ಅವನು ಸುಮಾರು ೨೦-೨೫ ವರ್ಷಗಳವರೆಗೆ ಅಖಂಡವಾಗಿ ಪರಿಶ್ರಮಮಾಡಿ "ಪ್ರಾಣಿವರ್ಗಗಳ ಉತ್ಪತ್ತಿ"ಯೆಂಬ ಕ್ರಾಂತಿಕಾರಕ ಪುಸ್ತಕವನ್ನು ಕ್ರಿ. ಶ. ೧೮೫೯ನೆಯ ವರುಷ ಪ್ರಸಿದ್ಧಪಡಿಸಿದನು. ಈ ಪುಸ್ತಕವೆಂದರೆ ಅವನ ಅಮೋಘವಾದ, ಅವಿಶ್ರಾಂತವಾದ, ತೀಕ್ಷ್ಣವಾದ, ದೀರ್ಘೋದ್ಯೋಗದ ಫಲವೆಂದೇ ಹೇಳಬೇಕಾಗುವುದು. ಸಣ್ಣ ಸಣ್ಣ ಪ್ರಾಣಿಗಳನ್ನು ಸಾಕುವುದು, ಅವುಗಳ ಮೇಲೆ ಪ್ರಯೋಗಮಾಡುವುದು, ಅವುಗಳ ಅಂಗಾಂಗಗಳನ್ನು ಸೂಕ್ಷ್ಮವಾಗಿ ನಿರೀಕ್ಷಣೆಮಾಡಿ ಸಾಮ್ಯಾಸಾಮ್ಯಗಳನ್ನು ಪರಿಕಿಸುವುದು, ಬೇರೆ ಬೇರೆ ವರ್ಗದ ಪಶುಪಕ್ಷಿಗಳ ಸಮ್ಮಿಶ್ರಣದಿಂದ ಬೇರೊಂದು ಭಿನ್ನವರ್ಗದ ಪ್ರಾಣಿಗಳನ್ನು ಹುಟ್ಟಿಸುವುದು— ಇವೇ ಮೊದಲಾದ ಕೆಲಸಗಳನ್ನು ಪ್ರತಿಫಲದ ಆಶೆಯನ್ನೇನೂ ಹಿಡಿಯದೆ ಡಾರ್ವಿನ್ನನು ಮಾಡಿರುವುದನ್ನು ನೋಡಿದರೆ, ಪಾಶ್ಚಿಮಾತ್ಯರ "ಜ್ಞಾನಕ್ಕಾಗಿ ಜ್ಞಾನ"ವೆಂಬ ತತ್ತ್ವಪ್ರೀತಿಯು ಮನದಟ್ಟಾಗದಿರದು. ವಾಲೇಸನೆಂಬ ಪಂಡಿತನೂ ಬೇರೊಂದು ದಾರಿಯಿಂದ ಡಾರ್ವಿನ್ನನ ನಿರ್ಣಯಗಳಿಗೇ ಬಂದುಮುಟ್ಟಿದನು. ಅವರು ತಮ್ಮ ಶೋಧಗಳಿಂದ ಸಿದ್ಧಮಾಡಿದುದೇನೆಂದರೆ: ಪ್ರಾಣಿಗಳ ವರ್ಗಗಳು ಅಥವಾ ಜಾತಿಗಳು ಅನಾದಿಕಾಲದಿಂದಲೂ ಈಗಿದ್ದ ಸ್ಥಿತಿಯಲ್ಲಿಯೇ ಇರದೆ, ಒಂದು ಜಾತಿಯಿಂದ ಮತ್ತೊಂದು ಬೇರೆ ಜಾತಿಯ ಪ್ರಾಣಿಗಳು ಸ್ವಾಭಾವಿಕವಾಗಿಯೇ ಸೃಷ್ಟಿಕ್ರಮಕ್ಕನುಸರಿಸಿ ಜನಿಸಿರುವವು. ಇಷ್ಟೇ ಅಲ್ಲ; ಈ ರೀತಿಯಿಂದ ಈಗಿರುವ ಪ್ರಾಣಿವರ್ಗಗಳೆಲ್ಲವೂ ಒಂದೇ ಜಾತಿಯ ಪ್ರಾಣಿಗಳಿಂದ ಹುಟ್ಟಿರಬಹುದೆಂಬುದನ್ನು ಪ್ರತ್ಯಕ್ಷ ಪ್ರಯೋಗಗಳಿಂದ ಪ್ರಮಾಣಿಸಿಕೊಟ್ಟರು. ಅದೇಕೆ? ವನಸ್ಪತಿವರ್ಗವೂ ಪ್ರಾಣಿವರ್ಗವೂ ಒಂದೇ ಜೀವರಾಶಿಯಿಂದ ಹುಟ್ಟಿರುವವೆಂದು

ಜೀವಶಾಸ್ತ್ರವೇ ಮೂರನೆಯ ಸಾಧನವು

ಡಾರ್ವಿನ್ನನು ಅಭಿಪ್ರಾಯಪಟ್ಟಿರುವನು. ( ಈಗ ಈ ಮಾತು ಸಿದ್ಧಾಂತವಾಗಿ ಹೋಗಿದೆ. ಹಿಂದೂ ದೇವಿಯ ಸತ್ಪುತ್ರರಾದ ಸರ ಜಗದೀಶಚಂದ್ರ ಭೋಸರು ತಮ್ಮ ಅಮೋಘವಾದ ಶೋಧಗಳಿಂದ ಈ ಮಾತನ್ನು ಸ್ಪಷ್ಟೀಕರಿಸಿದ್ದಾರೆ. ) ಆದುದರಿಂದ ನಾವೀ ಪುಸ್ತಕದಲ್ಲಿ ಚರ್ಚಿಸಿರುವ ವಿಕಾಸವಾದದ ನಿಜವಾದ ಜನಕನು ಡಾರ್ವಿನ್ನನಲ್ಲವೆಂಬುದು ಸಿದ್ಧವಾಗುವಂತಿದೆ. ಜೀವಜಡಗಳನ್ನೊಳಕೊಂಡ ವಿಸ್ತಾರವಾದ ವಿಕಾಸವಾದವನ್ನು ಬ್ರಹ್ಮಚಾರಿಯಾದ ಹರ್ಬರ್ಟ ಸ್ಪೆನ್ಸರನು, ಅಖಂಡವಾಗಿ ೫೭ ವರುಷಗಳ ವರೆಗೆ ದಾವತಿಪಟ್ಟು, ಸಿದ್ಧಮಾಡಿ ತೋರಿಸಿದನು. ಮತ್ತು ಡಾರ್ವಿನ್ನನಿಗಿಂತ ಕೆಲವು ತಿಂಗಳ ಮೊದಲೇ ವಿಶ್ವಕ್ಕೆಲ್ಲ ಸಂಬಂಧಿಸಿರುವ ವಿಕಾಸವಾದವನ್ನು ಪ್ರಸಿದ್ಧಪಡಿಸಿದನು.

ವಿಕಾಸವಾದಿಗಳಿಗೆ ಸಹಾಯಕರವಾಗಿರುವ ಜೀವಶಾಸ್ತ್ರದೊಳಗಿನ ಮುಖ್ಯವಾದ ಮೂರು ಮಾತುಗಳು

" ಜೀವಶಾಸ್ತ್ರದೊಳಗಿನ ಸಮಸ್ತ ಸಂಗತಿಗಳೆಲ್ಲ ಉತ್ಕ್ರಾಂತಿಯನ್ನೇ ಸಿದ್ಧಮಾಡುವವೆಂದು ಕಾಂಕಲಿನ್ ( Conklin ) ನೆಂಬ ಪಂಡಿತನು ಹೇಳುತ್ತಾನೆ. ಆದರೂ ಅದರೊಳಗೆ ಮುಖ್ಯವಾದ ಮೂರು ಮಾತುಗಳನ್ನು ಮಾತ್ರ ನಾವಿಲ್ಲಿ ಗಮನಿಸುವೆವು; ಒಂದು ತುಲನಾತ್ಮಕ ಶಾರೀರಶಾಸ್ತ್ರ ( Comparative Anatomy ), ಎರಡನೆಯದು ಸದ್ಯಕ್ಕೆ ನಿರುಪಯುಕ್ತವಾದರೂ ಹಿಂದಿನ ಕಾಲದ ಹೆಗ್ಗುರುತಾಗಿ ಉಳಿದ ಅವಯವಗಳ ಅವಶೇಷಗಳು ( Vestigial structures ), ಮೂರನೆಯದು ಪಿಂಡಶಾಸ್ತ್ರ ( Embryology ), ಎಂದರೆ ಬೇರೆ ಬೇರೆ ಪ್ರಾಣಿವರ್ಗಗಳ ದೇಹರಚನೆಯನ್ನು ತುಲನಾತ್ಮಕರೀತಿಯಿಂದ ಪರೀಕ್ಷಿಸಿ, ಅವುಗಳಲ್ಲಿಯ ಸಾಮ್ಯಾಸಾಮ್ಯಗಳನ್ನು ನೋಡಿ, ಆ ಆ ಅವಯವಗಳು ಕ್ರಮವಾಗಿ ಬೆಳೆಯುತ್ತ ಬಂದಿರಬೇಕೆಂದು ಹೇಳುವುದು. ಪಾದದ ರಚನೆಯನ್ನೂ, ಅದರ ಬೆರಳುಗಳನ್ನೂ, ಬೇರೆ ಬೇರೆ ಪ್ರಾಣಿಗಳಲ್ಲಿ ಲಕ್ಷ್ಯಗೊಟ್ಟು ನೋಡಿದರೆ, ಆ ಅವಯವದಲ್ಲಿ ಸ್ಪಷ್ಟವಾದ ವಿಕಾಸವಾಗುತ್ತ ಬಂದಿದೆಯೆಂಬುದು ಸಹಜವಾಗಿಯೇ ತಿಳಿಯುವುದು. ಹಾಗೆಯೇ ನಮ್ಮ ಸದ್ಯಕ್ಕಿನ ಶರೀರದಲ್ಲಿ ಕೆಲವು ಅವಯವಗಳು ನಿರುಪಯುಕ್ತವಾಗಿವೆಯೆಂದು ಹೇಳಬಹುದು. ಉದಾ: ಗಂಡಸರ ಎದೆಯಮೇಲಿರುವ ಮೊಲೆಗಳು, ಅಥವಾ ಬೆನ್ನೆಲುವಿನ ತುದಿಗಿರುವ ಬಾಲದ ಬೊಡ್ಡಿಯು. ಆದರೆ ಒಂದಾನೊಂದು

ಕಾಲದಲ್ಲಿ ಮನುಷ್ಯನಿಗೆ ಆ ಅವಯವಗಳ ಅತ್ಯಾವಶ್ಯಕತೆಯಿರಬೇಕೆಂಬುದು, ಅವನ ಹಿಂದಿನ ಕೆಲವು ವರ್ಗದ ಪ್ರಾಣಿಗಳನ್ನು ನೋಡುತ್ತ ಹೋದರೆ ತಿಳಿಯು ವಂತಿದೆ. "ಉಪಯೋಗದಲ್ಲಿದ್ದ ಕೀಲಿಯಕೈಯು ಯಾವಾಗಾದರೂ ಹೊಳೆಯು ತ್ತಿರುವುದು" ಎಂಬುದೊಂದು ಇಂಗ್ಲಿಷ ಗಾದೆಯುಂಟು. ಆ ರೀತಿಯಿಂದ ಅವಶ್ಯ ವಿದ್ದಾಗ ಮಾತ್ರ ಆ ಅವಯವಗಳ ಉತ್ಪತ್ತಿಯಾಗಿ, ಮುಂದೆ ಅವುಗಳನ್ನು ಉಪಯೋಗಿಸುವುದು ಕಡಿಮೆಯಾದಂತೆ ಅವು ವಿಕೃತರೂಪವನ್ನು ಹೊಂದಿರ ಬಹುದು. ಉಪಯೋಗ ಮತ್ತು ನಿರುಪಯೋಗಗಳಿಂದ (use and disuse) ಅವಯವಗಳ ಜನನ ಮರಣಗಳಾಗುವವೆಂದು ಹೇಳಿರುವುದರ ಅರ್ಥವಾದರೂ ಇದೇ. ಇರಲಿ, ಪಿಂಡಶಾಸ್ತ್ರವೆಂದರೆ ಪ್ರಾಣಿಗಳು ಗರ್ಭಾವಸ್ಥೆಯಲ್ಲಿರುವಾಗ ಕಾಲಕಾಲಕ್ಕೆ ಹೊಂದುತ್ತಿರುವ ಸ್ಥಿತ್ಯಂತರಗಳನ್ನು ವರ್ಣಿಸುವ ಶಾಸ್ತ್ರವು. ಮನುಷ್ಯನ ಪಿಂಡವು ತನ್ನ ಕ್ರಮೇಣವಾದ ಬೆಳೆವಣಿಗೆಯಲ್ಲಿ ಮಾನವಜಾತಿಯ ಇತಿಹಾಸವನ್ನೇ ಸೂಚಿಸುತ್ತಿದೆಯೆಂದು ಶಾಸ್ತ್ರಜ್ಞರು ನಿರ್ಧರಿಸಿದ್ದಾರೆ. ಎಂದರೆ ಪಿಂಡದ ಬೇರೆ ಬೇರೆ ಅವಸ್ಥೆಗಳು ಮಾನವಜಾತಿಯ ಆ ಆ ಕಾಲದ ಅವಸ್ಥೆಯನ್ನು ತಪ್ಪದೇ ತೋರಿಸುವವೆಂದು ಅವರ ಮತವು. ಎಂದರೆ ಮನುಷ್ಯಪ್ರಾಣಿಯು ಈ ಪೃಥ್ವಿಯ ಮೇಲೆ ಪ್ರಕಟವಾಗುವ ಮೊದಲು ಆವಾವ ಸ್ಥಿತ್ಯಂತರಗಳಲ್ಲಿ ದಾಟಬರಬೇಕಾಯಿತೊ, ಆ ಸ್ಥಿತ್ಯಂತರಗಳೆಲ್ಲ ಪಿಂಡದ ಬೆಳೆವಣಿಗೆಯಲ್ಲಿ ಅದೇ ಕ್ರಮದಿಂದ ಕಾಣಿಸಿಕೊಳ್ಳುವವೆಂದು ಈಗಿನವರು ನಿರ್ಣಯಿಸಿದ್ದಾರೆ. ಇವೆಲ್ಲವು ಗಳ ಮೇಲಿಂದಲೂ ಪ್ರಾಣಿಗಳ ದೇಹರಚನೆಯಲ್ಲಿ ಕ್ರಮವಾಗಿ ಉತ್ಕ್ರಾಂತಿ ಯಾಗಿರುವುದೆಂಬುದು ಸಿದ್ಧವಾಗುವುದೆಂದು, ಆ ತತ್ತ್ವಾಭಿಮಾನಿಗಳು ಅಭಿ ಪ್ರಾಯಬಡುತ್ತಾರೆ.

ಕೆಲವು ಶಾಸ್ತ್ರಜ್ಞರು ಇನ್ನೊಂದು ಸಂಗತಿಯ ಮೇಲಿಂದ ವಿಕಾಸವಾದ ವನ್ನು ಸಿದ್ಧಮಾಡಲೆಣಿಸಿದ್ದಾರೆ. ಪ್ರಾಣಿಗಳ ಬೇರೆ ಬೇರೆ ವರ್ಗಗಳು ಬೇರೆ ಬೇರೆ ದೇಶಗಳಲ್ಲಿರುವವಷ್ಟೆ! ಈ ಸಂಗತಿಯು ಹೀಗೆಯೇ ಏಕಾಗಿರಬೇಕೆಂಬುದಕ್ಕೆ ಉತ್ಕ್ರಾಂತಿವಾದದ ವಿನಹ ಬೇರೆ ಉತ್ತರವೇ ಇಲ್ಲ. ಉದಾ: ಕೆಲವು ಶತಮಾನ ಗಳ ಹಿಂದೆ ಸ್ಪೇನದ ಜನರು ಅಮೇರಿಕಾಖಂಡದ ಮೇಲೆ ಕಾಲಿಟ್ಟಾಗ, ಅಲ್ಲಿ ಒಂದಾದರೂ ಕುದುರೆಯಿರಲಿಲ್ಲ. ಆದರೆ ಅಮೇರಿಕಾ

ವಿಕಾಸವಾದಿಗಳ ನಾಲ್ಕನೆಯ ಸಾಧನ, ಪ್ರಾಣಿವರ್ಗಗಳ ವಾಸ್ತವ್ಯ.

ದೇಶದ ಗರ್ಭದಲ್ಲಿ ಮಾತ್ರ ಕುದುರೆಯ ಅಸ್ಥಿಗಳು ಹೇರಳವಾಗಿ ಸಿಕ್ಕುವವು. ಮತ್ತು ಉಳಿದ ಯಾವುದೇ ದೇಶದಲ್ಲಿ ಅಷ್ಟು ಪ್ರಾಚೀನ ಅವಶೇಷಗಳು ಇನ್ನೂ ವರೆಗೆ ಸಿಕ್ಕಿಲ್ಲ. ಎಂದ ಮೇಲೆ ಇದರ ಅರ್ಥವೇನು ? ಒಂದು ಕಾಲಕ್ಕೆ ಅಮೇರಿಕೆಯೂ, ಉಳಿದ ಖಂಡಗಳೂ, ಕೂಡಿಕೊಂಡಿದ್ದುವು. ಅಮೇರಿಕೆ ಯಲ್ಲಿಯೇ ಪ್ರಥಮತಃ ಕುದುರೆಗಳ ಉತ್ಪತ್ತಿಯಾಗಿ ಉಳಿದ ದೇಶಗಳ ಕಡೆಗೆ ಅಲ್ಲಿಂದಲೇ ಅವು ಹೋಗಿರಬೇಕು. ಆದರೆ ಜ್ವಾಲಾಮುಖಿಗಳ ಹೊಡೆತಕ್ಕೆ ಸಿಕ್ಕು ಅಮೇರಿಕಾಖಂಡವು ಉಳಿದ ದೇಶಗಳಿಂದ ಬೇರೆಯಾಗಿ ಹೋಗಿರಬೇಕು. ಮುಂದೆ ಕುದುರೆಯು ಬದುಕಲಾರದಂತಹ ಸ್ಥಿತಿಯು ಅಮೇರಿಕೆಯಲ್ಲುಂಟಾ ದುದರಿಂದ ಅಲ್ಲಿಯ ಜೀವಂತ ಕುದುರೆಗಳೆಲ್ಲ ನಾಶವಾಗಿ ಹೋಗಿರಬಹುದು. ಅದರಂತೆಯೇ ಮತ್ತೊಮ್ಮೆ ಮನುಷ್ಯನು ಆಸ್ಟ್ರೇಲಿಯಾಖಂಡಕ್ಕೆ ಹೋದಾಗ, ಅಲ್ಲಿಯ ತೀರ ದೊಡ್ಡ ಪ್ರಾಣಿಯೆಂದರೆ ಉಡವು (lizard) ಮಾತ್ರ. ಆದರೆ ಆ ಪ್ರಾಣಿಯ ಅಸ್ಥಿಗಳಾದರೋ ದಕ್ಷಿಣ ಅಮೇರಿಕೆಯ ಹೊರತು ಬೇರೆ ಎಲ್ಲಿಯೂ ಸಿಕ್ಕಲಾರವು. ಎಂದ ಮೇಲೆ ಇದರರ್ಥವೇನಿರಬೇಕು ? ಬಹು ಪ್ರಾಚೀನ ಕಾಲದಲ್ಲಿ ಏಶಿಯಾಖಂಡದ ದಕ್ಷಿಣಭಾಗವು, ಆಸ್ಟ್ರೇಲಿಯಾ, ದಕ್ಷಿಣ ಆಫ್ರಿಕಾ, ಮತ್ತು ದಕ್ಷಿಣ ಅಮೇರಿಕೆಗಳು ಕೂಡಿಯೇ ಇದ್ದವು. ಅಮೇರಿಕೆಯಿಂದ ಆ ಪ್ರಾಣಿಯು ಸರಿಯುತ್ತ, ಸರಿಯುತ್ತ ನ್ಯೂಝೀಲಂಡಕ್ಕೆ ಹೋಯಿತು. ಆದರೆ ಮುಂದೆ ಅವೆಲ್ಲ ಬೇರೆಬೇರೆಯಾದುದರಿಂದ, ಹೆಚ್ಚಿನ ತರಗತಿಯ ಯಾವ ಪ್ರಾಣಿಯೂ ಮುಂದೆ ನ್ಯೂಝೀಲಂಡಕ್ಕೆ ಹೋಗಲಿಲ್ಲವೆಂದು ಉತ್ಕ್ರಾಂತಿವಾದಿ ಗಳು ಎಲ್ಲವನ್ನೂ ಹೊಂದಿಕೆಯಾಗುವಂತೆ ತಿಳಿಸಿಹೇಳುವ ಹಾಗೆ ಬೇರೆ ಯಾರು ಹೇಳುವುದು ಶಕ್ಯವಿದೆ ? ಇವೆಲ್ಲ ಸಂಗತಿಗಳ ಮೇಲಿಂದಲೂ ಉತ್ಕ್ರಾಂತಿವಾದವು ಸಿದ್ಧವಾಗುವುದೆಂದು ಜೊಸೆಫ್ ಮ್ಯಾಕ್ಕಾಬೀ ಎಂಬವರು “ ಉತ್ಕ್ರಾಂತಿವಾದವು ಸತ್ಯವೇ ? ” ಎಂಬ ಪುಸ್ತಕದಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಇದೇ ತರದ ಯುಕ್ತಿವಾದವನ್ನೇ ಹಕ್‌ಸಲೇಯಾದರೂ ಉತ್ಕ್ರಾಂತಿವಾದಗಳ ಮೇಲಿನ ತನ್ನ ಪ್ರವಚನಗಳಲ್ಲಿ ಮುಂದೆ ಮಾಡಿದ್ದಾನೆ.

ಇದೆಲ್ಲದರ ಸಾರಾಂಶವು ಇಷ್ಟೆ. ಪದಾರ್ಥವಿಜ್ಞಾನಶಾಸ್ತ್ರ, ಜ್ಯೋತಿಶ್ಶಾಸ್ತ್ರ, ಭೂಗರ್ಭಶಾಸ್ತ್ರ, ಮತ್ತು ಜೀವಶಾಸ್ತ್ರಗಳೇ ವಿಕಾಸವಾದಿಗಳ ದುರ್ಗರೂಪ ವಾಗಿರುವವೆಂದು ಹೇಳಬಹುದು. ಅದರಲ್ಲಿಯೂ ಅವರು ಪ್ರಾಮುಖ್ಯವಾಗಿ ಜೀವಶಾಸ್ತ್ರದ ಮೇಲೆಯೇ

ಸಾರಾಂಶ

ಹೆಚ್ಚಾಗಿ ಅವಲಂಬಿಸುವರೆಂಬುದನ್ನು ಲಕ್ಷ್ಯದಲ್ಲಿಡತಕ್ಕದ್ದು. ಉತ್ಕ್ರಾಂತಿವಾದವನ್ನು ಸಿದ್ಧಮಾಡಲಿಕ್ಕೆ ಅವರು ಐದು ಉಪಪತ್ತಿಗಳನ್ನು ಹೇಳುವರೆಂದು ಮೇಲೆ ಹೇಳಿದ್ದೇವೆ. ಆದರೆ ವಿಕಾಸವಾದವು ಕೇವಲ ಪ್ರಯೋಗಗಳ ಮೇಲೆಯೇ ಹೆಚ್ಚಾಗಿ ಅವಲಂಬಿಸಿರುವುದೆಂದು ಹಕ್ಸಲೀ ಸಾಹೇಬರು ಹೇಳಿರುವುದರಿಂದ, ನಾವಿಲ್ಲಿ ಚರ್ಚಿಸಿರುವುದೇ ಉತ್ಕ್ರಾಂತಿವಾದಿಗಳ ಸಾರಸರ್ವಸ್ವವೆಂದು ತಿಳಿಯುವುದು ತಪ್ಪಾಗದಿರದು. ನಾವು ಮೇಲೆ ಹೇಳಿದ ಐದು ಉಪಪತ್ತಿಗಳಲ್ಲಿ ಒಂದು ಭೂಗರ್ಭಶಾಸ್ತ್ರದ ಮೇಲೆ ಅವಲಂಬಿಸಿದೆ. ಇದನ್ನು ಇಂಗ್ಲಿಷದಲ್ಲಿ "Record of the Rocks" ಎಂದರೆ ಶಿಲಾಸಾಕ್ಷಿಯೆಂದು ಕರೆಯುವರು. ಮೂರು ಜೀವಶಾಸ್ತ್ರದ ಮೇಲೆ ಅವಲಂಬಿಸಿವೆ. ಐದನೆಯದು ಭೂಗೋಲದ ಭಾಗದಲ್ಲಿ ಬರುವುದು. ಇದಕ್ಕೆ ಇಂಗ್ಲಿಷದಲ್ಲಿ "Geographical Distribution of Animals" ಎಂದು ಹೆಸರು. ಪ್ರಾಣಿಗಳ ಸ್ಥಾನಾಂತರ ಅಥವಾ ವಾಸ್ತವ್ಯಕ್ರಮವೆಂದು ಅದರ ಅರ್ಥವಾಗುವುದೆಂದು ಹೇಳಬಹುದು.

ಇವೆಲ್ಲ ಉಪಪತ್ತಿಗಳಿಂದ ವಿಕಾಸವಾದವು ಸಿದ್ಧವಾಗುವುದೆ ? ಈ ಪ್ರಶ್ನೆಯನ್ನು ವಾಚಕರು ತಾವಾಗಿಯೇ ಬಿಡಿಸಲು ಯತ್ನಿಸಬೇಕು. ಮೇಲೆ ಕಾಣುವಷ್ಟು ತಥ್ಯವು ಅವುಗಳಲ್ಲಿಲ್ಲವೆಂದು ಹೇಳುವ ವಿರುದ್ಧಪಕ್ಷದವರ ಅಂಬೋಣವನ್ನು ಮುಂದೆ ನಾವು ಸ್ವಲ್ಪದರಲ್ಲಿಯೇ ತೋರಿಸುವವರಿರುವೆವಾದುದರಿಂದ ಅದನ್ನಿಲ್ಲಿ ಹೆಚ್ಚಾಗಿ ಬೆಳಿಸುವ ಆವಶ್ಯಕತೆಯಿಲ್ಲ.

---

೩

# ಮೂಲತತ್ತ್ವಗಳು

## ಮತ್ತು

# ಉತ್ಕ್ರಾಂತಿಯ ನಿಯಮ

ಭೌತಿಕಶಾಸ್ತ್ರಗಳ ಪ್ರಗತಿಯಿಂದುಂಟಾದ ಈ ನವೀನಯುಗದಲ್ಲಿ ವಿಕಾಸವಾದಕ್ಕೆ ಎಷ್ಟು ಮಹತ್ತ್ವಬಂದಿದೆಯೆಂಬುದನ್ನು ಮೊದಲನೆಯ ಭಾಗದಲ್ಲಿ ತೋರಿಸಿ, ಹೋದ ಪ್ರಕರಣದಲ್ಲಿ ಅದರ ಅನುಯಾಯಿಗಳು ಅನುಸರಿಸುವ ವಿಚಾರಪದ್ಧತಿಗಳನ್ನು ವಿವರಿಸಿದೆವು. ಇನ್ನು ಇಲ್ಲಿಂದ ಮುಂದೆ ವಿಕಾಸವಾದದ ಪ್ರತ್ಯಕ್ಷ ರೂಪರೇಷೆಗಳನ್ನು ವಾಚಕರಿಗೆ ಸಮರ್ಪಿಸಬೇಕೆಂದು ಮಾಡಿರುವೆವು. ವಿಶ್ವದೊಳಗಿನ ಯಾವುದೇ ಕಾಲದ ಯಾವುದೇ ಸಂಗತಿಯನ್ನು ತೆಗೆದುಕೊಂಡರೂ, ಅದನ್ನು ನಾವು ಯಾಂತ್ರಿಕರೀತಿಯಿಂದಾದರೂ ಮನಸ್ಸೊಪ್ಪುವಂತೆ ಹೊಂದಿಕೆಯಾಗಿ ತಿಳಿಸಿಕೊಡುವೆವೆಂದು ವಿಕಾಸವಾದಿಗಳು ಹೇಳುತ್ತಾರಷ್ಟೇ ? ಎಂದ ಮೇಲೆ ನಮ್ಮ ಸದ್ಯಕ್ಕಿನ ಮಾನವ ಜಗತ್ತು ಹೇಗೆ ಹುಟ್ಟಿರುವುದು, ಎಂದು ಕೇಳಿದರೆ, ವಿಕಾಸವಾದಿಗಳು ಏನು ಉತ್ತರ ಕೊಡುವರೆಂಬುದನ್ನು ನೋಡುವ.

ಈ ಪ್ರಕರಣದಲ್ಲಿ ಚರ್ಚಿಸಿರುವ ವಿಷಯ

ಸ್ಪೆನ್ಸರ ಸಾಹೇಬರ ಈ ಅಭಿಪ್ರಾಯಗಳನ್ನು ತಿಳಿದುಕೊಳ್ಳಬೇಕಾದರೆ, ವಾಚಕರಿಗೆ ಪರಿಚಯವಿದ್ದ ವೇದಾಂತದ ಕಲ್ಪನೆಯಿಂದ ಹೊರಡುವುದು ಸರಲತರವಾದ ಮಾರ್ಗವೆನಿಸಬಹುದು. ಸತ್ಯಾಸತ್ಯತೆಯ ತೊಡಕನ್ನು ಬಿಡಿಸಲೆಂದೇ ವೇದಾಂತವಾದರೂ ಹೊರಟಿರುವುದೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಯಾಕೆಂದರೆ ನಿಜವಾದ, ಶಾಶ್ವತವಾದ ಸುಖವು ಸಿಗಬೇಕಾದರೆ, ಸತ್ಯವಸ್ತುವಿನ ವಾಸ್ತವಿಕ ಜ್ಞಾನದ ಹೊರತು ಎರಡನೆಯ ಮಾರ್ಗವೇ ಸಿಗಲಾರದೆಂದು ವೇದಾಂತಿಗಳ ವಿಶ್ವಾಸವಿದೆ ( **नान्यः पन्था विद्यतेऽयनाय ।** ). ಅದು ಸತ್ತತ್ತ್ವವನ್ನು ಬ್ರಹ್ಮನೆಂದು ಸಂಬೋಧಿಸುತ್ತದೆ. ಎಂತೆಯೇ ಪ್ರಸ್ಥಾನತ್ರಯಗಳಲ್ಲಿ ಒಂದಾದ ಬ್ರಹ್ಮ

ವೇದಾಂತಿಗಳ ದ್ವಿವಿಧಬ್ರಹ್ಮಕಲ್ಪನೆಯು

ಸೂತ್ರದ ಆರಂಭದಲ್ಲಿಯೇ **अथतो ब्रह्मजिज्ञासा** । ಎಂಬ ಸೂತ್ರದಿಂದ ಬ್ರಹ್ಮ ಜ್ಞಾನಕ್ಕೆ ಪೀಠಿಕೆಯನ್ನು ಬರೆದಿಟ್ಟಿದ್ದಾರೆ. ಇರಲಿ, ಈ ಬ್ರಹ್ಮವನ್ನು ಎರಡು ರೀತಿಯಿಂದ ವಿಚಾರಿಸಬಹುದೆಂದು ವೇದಾಂತಿಗಳು ತಿಳಿಯುತ್ತಾರೆ. "ಬ್ರಹ್ಮವು ದ್ವಿರೂಪವಾಗಿದೆಯೆಂದು ವೇದಾಂತದಿಂದ ಸ್ಪಷ್ಟವಾಗುವಂತಿದೆ. ನಾಮರೂಪಗ ಳಿಂದ ನಿರ್ಮಿತವಾದ ವಿಕಾರಗಳೆಂಬ ಭೇದೋಪಾಧಿಯಿಂದ ಯುಕ್ತವಾದುದು ಸವಿಶೇಷ ಬ್ರಹ್ಮವು; ಮತ್ತು ಅದಕ್ಕೆ ವಿಪರೀತವಾಗಿ ಸರ್ವೋಪಾಧಿರಹಿತವಾ ದುದು ನಿರ್ವಿಶೇಷ ಬ್ರಹ್ಮವು." (ಬ್ರ. ಸೂ. ಭಾ. ೧.೧-೧೨) ಇವುಗಳಲ್ಲಿ ಒಂದರ ಜ್ಞಾನಕ್ಕೆ ಪರಾವಿದ್ಯೆಯೆಂತಲೂ, ಇನ್ನೊಂದಕ್ಕೆ ಅಪರಾವಿದ್ಯೆಯೆಂತಲೂ ಹೆಸರು. ವೇದಪುರಾಣೇತಿಹಾಸಾದಿಗಳೆಲ್ಲವೂ ಅಪರಾವಿದ್ಯೆಯೊಳಗಿನವು, ಎಂದರೆ ಗೌಣ ವಾದವು. ಪರಾವಿದ್ಯೆಯಿಂದ ಎಂದರೆ ಉಪನಿಷತ್ತುಗಳಲ್ಲಿ ವರ್ಣಿಸಿರುವ ಜ್ಞಾನ ದಿಂದಲೇ ಆ " ಅಕ್ಷರವು " ಸಿಗುವುದೆಂದು ಅವರು ಹೇಳುತ್ತಾರೆ. ಸವಿಶೇಷ ಬ್ರಹ್ಮವೆಂದರೆ ಸಾಕಾರಬ್ರಹ್ಮವು; ಎಂದರೆ ಪ್ರತ್ಯಕ್ಷ ಇಂದ್ರಿಯಗಳಿಗೆ ಗೋಚರ ವಾಗಬಹುದಾದ ರೂಪುಗಳನ್ನು ಧರಿಸಿರುವ ಸದ್ವಸ್ತುವು. ಉದಾ: ಚತುರ್ಬಾಹು ವಾಗಿ ಶಂಖ-ಚಕ್ರ-ಗದಾ ಪದ್ಮಾದಿಗಳಿಂದ ಯುಕ್ತವಾಗಿ ತೋರುವ ವಿಷ್ಣುರೂಪವು. ಅವೇಕೆ ? ಕಣ್ಣಿಗೆ ಕಾಣುವ ಸಂಸಾರವೆಂದು ಕರೆಯಲ್ಪಡುವ ದೃಶ್ಯಜಾತವೆಲ್ಲ ಸಾಕಾರಬ್ರಹ್ಮನ ರಾಜ್ಯದೊಳಗಿನದೇ. ಇದೆಲ್ಲ ಕಲ್ಪಿತವಿರುವುದರಿಂದ ನಿಜವಾದ ವಸ್ತುವಾಗಲಾರದು. ಆದರೆ ಇಂತಹ ಕಲ್ಪನೆಗಳಿಗೆಲ್ಲ ಮೂಲಾಧಾರವಾಗಿ ನಿಂತ ವಸ್ತುವೊಂದಿರಬೇಕಲ್ಲವೆ ? ಅದಕ್ಕೇ ವೇದಾಂತಿಗಳು ನಿರಾಕಾರಬ್ರಹ್ಮವೆಂದು ಹೆಸರು ಕೊಡುತ್ತಾರೆ. ವಸ್ತುತಃ ಸಾಕಾರಜ್ಞಾನವೇ ನಮಗೆಲ್ಲರಿಗೂ ಸಾಧ್ಯ ವಾಗಿರುವದು. ನಿರಾಕಾರವಸ್ತುವನ್ನು ಪಡೆದು ಧನ್ಯರಾಗುವವರು ಕ್ವಚಿತ್ತಾಗಿ ಸಿಕ್ಕುವರು. ಮತ್ತು ಅದನ್ನು ವರ್ಣನೆಮಾಡುವ ಸರಿಯಾದ ಕ್ರಮವೆಂದರೆ "ನೇತಿ, ನೇತಿ" ಎಂತಲೇ ಹೇಳಬಹುದು. ಈ ನಿರಾಕಾರಬ್ರಹ್ಮವು ಹೀಗೆಯೇ ಇದೆಯೆಂದು ವರ್ಣಿಸಲಸಾಧ್ಯವು. ಅದು ಇರುವುದೆಂಬುದರಲ್ಲಿ ಮಾತ್ರ ಸಂದೇಹ ವಿಲ್ಲ. ಸಾಕಾರಬ್ರಹ್ಮದ ಕಲ್ಪನೆಗಳಿಗೆಲ್ಲ ಅಧಿಷ್ಠಾನವಾಗಿ ನಿರಾಕಾರವಸ್ತುವೊಂದು ಇರಲೇಬೇಕೆಂಬುದು ಸ್ಪಷ್ಟವಿದೆಯೆಂದು ಅವರು ಹೇಳುತ್ತಾರೆ.

ಸ್ಪೆನ್ಸರ ಸಾಹೇಬರಾದರೂ ಇಂತಹ ದ್ವಿವಿಧಕಲ್ಪನೆಯಿಂದಲೇ ಹೊರಡು ತ್ತಾರೆ. ಸತ್ತತ್ತ್ವವನ್ನು ಎರಡು ಬೇರೆ ಬೇರೆ ದೃಷ್ಟಿಕೋನಗಳಿಂದ ವಿಚಾರ

ಮಾಡಬಹುದು. ಒಂದಕ್ಕೆ ಅಜ್ಞೇಯವೆಂತಲೂ, ಇನ್ನೊಂದಕ್ಕೆ ಜ್ಞೇಯವೆಂತಲೂ ಹೆಸರು ಕೊಡಬಹುದು. ನಮಗೆಂದಿಗೂ ಗೊತ್ತಾಗದ ಈ ಅಜ್ಞೇಯ ಶಕ್ತಿಯು ನಮ್ಮ ತತ್ತ್ವಜ್ಞಾನದ ವಿಷಯವೇ ಅಲ್ಲೆಂದು ಅವರು ನಿರಭಿಮಾನದಿಂದ ಸ್ಪಷ್ಟವಾಗಿ ಒಪ್ಪಿಕೊಳ್ಳುತ್ತಾರೆ. ನಮಗೆ ಗೊತ್ತಾಗಬಹುದಾದ ವಿಷಯಗಳೆಲ್ಲ ಆ ಮೂಲಶಕ್ತಿಯ "ಜ್ಞೇಯ"ಭಾಗಕ್ಕೆ ಮಾತ್ರ ಹತ್ತುವವು. ಈ ಜ್ಞೇಯ ತತ್ತ್ವಕ್ಕೆ ಮೂಲಾಧಾರವಾಗಿರುವ ಏಕಮಾತ್ರವಸ್ತುವೆಂದರೆ ಈ ಅಜ್ಞೇಯ ಶಕ್ತಿಯೇ. ಮತ್ತು ಈ ಅಜ್ಞಾತ ತತ್ತ್ವವೇ ಧಾರ್ಮಿಕಪಂಥಗಳು ಹೇಳುತ್ತಿರುವ ದೇವರಾಗಿರಬೇಕೆಂದೂ ಅವರ ಅಂಬೋಣವಿದೆ. ವಿಶ್ವದ ಕಟ್ಟಕಡೆಯ ಪ್ರಶ್ನೆಗಳೆಲ್ಲ ಈ ತತ್ತ್ವದ ಮೇಲೆಯೇ ಅವಲಂಬಿಸಿರಬೇಕೆಂಬುದಂತೂ ತೀರ ಸ್ಪಷ್ಟವಿದೆ. ಈ ವಿಶ್ವವು ಎಲ್ಲಿಂದ ಬಂತು, ಯಾಕೆ ಬಂತು, ಯಾವ ರೀತಿಯಿಂದ ಬಂತು, ಅದರ ಉದ್ದೇಶವೇನು. ಅದು ಎತ್ತಕಡೆಗೆ ಹೊರಟಿರುವುದು, ಇವೇ ಮೊದಲಾದ ಪ್ರಶ್ನೆಗಳನ್ನು ನಾವು ಚರ್ಚಿಸುವುದೇ ಶಕ್ಯವಿಲ್ಲೆಂದು ಸ್ಪೆನ್ಸರ ಸಾಹೇಬರು ಒಪ್ಪಿಕೊಳ್ಳುವರಲ್ಲದೆ, ಇವೆಲ್ಲ ಆ ಅಜ್ಞೇಯಶಕ್ತಿಯ ಮೇಲೆಯೇ ಅವಲಂಬಿಸಿರುವವೆಂದೂ ಸ್ಪಷ್ಟವಾಗಿ ಒಡಂಬಡುವರು. ಕೇವಲ ಬಾಹ್ಯದೃಷ್ಟಿಯನ್ನೆ ಸಾಧನವನ್ನಾಗಿ ಮಾಡಿಕೊಂಡ ಸಾಹೇಬರಿಗೆ ಈ ಮಾತುಗಳು ಕಡೆಗೂ ಅಜ್ಞೇಯವೇ ಆಗಿ ತೋರಿದ್ದರೆ ಆಶ್ಚರ್ಯವೇನು ? ಸೂರ್ಯನ ಕಡೆಗೆ ಬೆನ್ನುಮಾಡಿ ನಿಂತು, ಸೂರ್ಯನೆಲ್ಲಿರುವನೆಂದು ಕೇಳುವವರ ಗತಿಯೇ ಇಂಥ ಜನರದಾಗುವದೆಂಬುದನ್ನು ಚಾಣಾಕ್ಷರಾದ ವಾಚಕರಿಗೆ ಬೇರೆ ಹೇಳಬೇಕಾಗಿಲ್ಲ. ಆದರೆ ಸತ್ಯಪ್ರಿಯರಾದ ಸ್ಪೆನ್ಸರ ಸಾಹೇಬರೂ ಕೂಡ ಇಲ್ಲದ ಆಗ್ರಹವನ್ನು ಹಿಡಿಯದೆ, ಪ್ರಾಂಜಲ ಮನಸ್ಸಿನಿಂದ ನಮಗದು ತಿಳಿಯಲಾರದೆಂಬುದನ್ನು ಸರ್ವಥೈವ ಒಪ್ಪಿಕೊಳ್ಳುವುದನ್ನು ನೋಡಿದರೆ ಯಾರಿಗಾದರೂ ಸಂತೋಷವಾಗದೆ ಇರದು. ಇಷ್ಟೇ ಅಲ್ಲ; ಧಾರ್ಮಿಕರು ವರ್ಣಿಸುತ್ತಿರುವ ದೇವರೇ ಆ ಅಜ್ಞೇಯ ಶಕ್ತಿಯಿರಬೇಕೆಂದು ಹೇಳಿರುವುದರಿಂದ, ನಿಜವಾಗಿ ನೋಡಿದರೆ ಧರ್ಮಶಾಸ್ತ್ರಕ್ಕೂ ಭೌತಿಕಸಿದ್ಧಾಂತಗಳಿಗೂ ವಿರೋಧವಿರುವ ಕಾರಣವಿಲ್ಲೆಂದು ಅವರೇ ಮುಂದೆ ವಿವರಿಸಿದ್ದಾರೆ.

ಸ್ಪೆನ್ಸರ ಸಾಹೇಬರ ದ್ವಿರೂಪ ಸದ್ವಸ್ತು.

"ಮೂಲತತ್ತ್ವಗಳೆ"ಂಬ (First principles) ಪುಸ್ತಕದ§ ೪೫ರಲ್ಲಿ ಸ್ಪೆನ್ಸರನು ಬರೆಯುವುದೇನೆಂದರೆ ಅಜ್ಞೇಯವಾದುದೊಂದು ಶಕ್ತಿಯು ಎಲ್ಲದರ

ಮೂಲದಲ್ಲಿಯೂ ಇರಲಿಕ್ಕೆ ಬೇಕು. ಆಶಕ್ತಿಯು ತೋರಿಕೆ ಅಥವಾ ಪ್ರಕಟಣೆಗಳಲ್ಲಿ ಎಂದರೆ ನಾಮರೂಪಾತ್ಮಕ ವಿಷಯುಗಳಲ್ಲಿ, ಜ್ಞೇಯವಾದ ಸಾಮ್ಯವೈಷಮ್ಯಗಳಿರುವವು. ಆ ತೋರಿಕೆಗಳನ್ನೇ ಆತ್ಮವೆಂತಲೂ ಅನಾತ್ಮವೆಂತಲೂ ಎರಡುತೆರನಾಗಿ ವಿಭಾಗಿಸಬಹುದು. ಎಂದರೆ ಒಂದು "ನಾನು" ಎಂದು ಕರೆಯುಲಿಕ್ಕೆ ಯೋಗ್ಯವಾದುದೂ, ಮತ್ತೊಂದು "ನೀನು" ಅಥವಾ "ಇದು, ಅದು" ಎಂದು ಕರೆಸಿಕೊಳ್ಳಲ್ಪಡುವಂತಹದೂ ಆಗುವದೆಂದು ಇದರ ಅರ್ಥವು. ("subject and object") ಇದರ ಮೇಲಿಂದ ಆ ಅಜ್ಞೇಯು ವಸ್ತುವು "ನಾನು" ಮತ್ತು "ಅದು" ಎಂಬ ಭೇದಗಳನ್ನು ದಾಟಿಹೋದ ಸದ್ವಸ್ತುವಾಗಿರಬೇಕೆಂಬುದನ್ನು ಸ್ಪೆನ್ಸರನು ಒಪ್ಪಿಕೊಂಡಂತಾಗುವದಿಲ್ಲವೇ? ಇರಲಿ, ಮುಂದೆ ಹೀಗೆಯೇ ದಿಕ್, ಕಾಲ, ಜಡ, ಅದರ ಗತಿ, ಶಕ್ತಿ, ಅವಿನಾಶಿತ್ವ ಮೊದಲಾದ ಪ್ರಶ್ನೆಗಳನ್ನೆಲ್ಲ ಚರ್ಚಿಸುತ್ತಹೋಗಿ, ಅವನು ತೆಗೆಯುವ ಕಡೆಯ ಸಿದ್ಧಾಂತವೇನೆಂದರೆ "ವಿಶ್ವದೊಳಗಿನ ಮೂಲಶಕ್ತಿಯು ತ್ರಿಕಾಲಾಬಾಧಿತವು. ಅನಾದಿಯಾಗಿರುವುದರಿಂದ ಅದು ಅನಂತವಾಗಿದೆ. ಪೂರ್ಣವಾಗಿರುವುದರಿಂದ ಅದಕ್ಕೆ ಯಾತರ ಕೊರತೆಯೂ ಇರಲಾರದು. ಅದನ್ನು ನಾಶಪಡಿಸುವ, ಅಥವಾ ಅದರ ಯೋಗ್ಯತೆಯನ್ನು ಕಡಿಮೆಮಾಡುವಂತಹ ಬೇರೆ ಯಾವ ವಸ್ತುವೂ ಅಸ್ತಿತ್ವದಲ್ಲಿರುವುದು ಶಕ್ಯವಿಲ್ಲ. ಆದರೆ ಇದರ ಅಸ್ತಿತ್ವವು ಮಾತ್ರ ಸ್ವತಃಸಿದ್ಧವಾಗಿದೆ." ಯಾಕೆಂದರೆ ಉಳಿದ ಎಲ್ಲ ವ್ಯಾಪಕನಿಯಮಗಳಿಗೂ (ಎಂದರೆ ವ್ಯಾವಹಾರಿಕ ಸತ್ಯಗಳಿಗೆ) ಅವಶ್ಯವಾಗಿ ಬೇಕಾಗುವ ಗಟ್ಟಿಯಾದ ತಳಹದಿಯೆಂದರೆ ಈ ತತ್ತ್ವವೇ. ಮತ್ತು ಅದು ಅವಿನಾಶಿಯಾದ ಆದಿತತ್ತ್ವವಿರಲೇಬೇಕೆಂಬುದು ಮಾನಸ ಶಾಸ್ತ್ರಕ್ಕೆ ಅತ್ಯಾವಶ್ಯಕವಾದ ಪ್ರಥಮಸಿದ್ಧಾಂತವಾಗಿದೆ. ಎಂದರೆ ಈ ತತ್ತ್ವವನ್ನು ಬೇರೆ ಶಬ್ದಗಳಲ್ಲಿ, ಅನ್ಯವಸ್ತುಗಳ ಸಹಾಯದಿಂದ ವಾಸ್ತವವಾಗಿ ತಿಳಿಸಿಕೊಡುವುದು ಅಶಕ್ಯವಿದ್ದರೂ, ಈ ತತ್ತ್ವವಿದೆಯೆಂಬುದು ಮಾತ್ರ ನಮ್ಮ ಸ್ವಪ್ರಜ್ಞತೆಗೆ, ಎಂದರೆ ಎಲ್ಲ ಅನುಭವಕ್ಕೆ ತೆಗೆದುಹಾಕಲಿಕ್ಕೆ ಬಾರದಂತಹ ಮೂಲವೇ ಆಗಿದೆಯೆಂದು ಹೇಳಬಹುದು. ಎಂದರೆ ಅದರ ಅಸ್ತಿತ್ವವನ್ನು ಒಪ್ಪಿಕೊಳ್ಳದಿದ್ದರೆ, ನಮ್ಮ ಮನೋವ್ಯಾಪಾರಗಳ ಅರ್ಥವನ್ನೆ ನಾವು ಹಚ್ಚಲಸಮರ್ಥರಾಗುವೆವು. ಮತ್ತು ಪ್ರಜ್ಞೆಯೆಂದರೆ ಮನೋವ್ಯಾಪಾರವೇ ಎಲ್ಲ ಜ್ಞಾನಕ್ಕೂ

ಈ ಅಜ್ಞೇಯು ವಸ್ತುವಿನ ಅಸ್ತಿತ್ವವು ಸ್ವತಃಸಿದ್ಧವಾಗಿದೆ.

ಮೂಲವಾಗಿರುವುದರಿಂದ, ಈ ತತ್ತ್ವವು ಎಲ್ಲ ಶಾಸ್ತ್ರಗಳ ಅಡಿಗಲ್ಲಾಗಿದೆಯೆಂದರೆ ತಪ್ಪಾಗದು. "ಎಲ್ಲ ಅನುಭವಕ್ಕೆ ಮೂಲವಾದರೂ, ಆ ಅನುಭವಕ್ಕೇ ಅಗೋಚರವಾದ ಒಂದೇ ಒಂದು ಮುಖ್ಯ ತತ್ತ್ವವಾವುದೆಂದರೆ ತ್ರಿಕಾಲಾಬಾಧಿತವಾದ ಇಂತಹದೊಂದು ಶಕ್ತಿಯ ಅಸ್ತಿತ್ವವು. ಈ ತತ್ತ್ವವು ಎಲ್ಲ (ಮಾನವ) ಅನುಭವಕ್ಕೇ ಮೂಲವಾಗಿರುವುದರಿಂದ, ಆ ಅನುಭವಗಳನ್ನು ಸರಿಯಾಗಿ ಶಾಸ್ತ್ರೀಯ ಪದ್ಧತಿಯಿಂದ ಮೇಳಹಾಕಿ, ಅವಕ್ಕೆಲ್ಲ ಯೋಗ್ಯವಾದ ಅರ್ಥವನ್ನು ಹಚ್ಚುವ ಪ್ರಯತ್ನಗಳಿಗಾದರೂ, ಅದೇ ಮೂಲವಾಗುವುದೆಂಬುದು ಸ್ಪಷ್ಟವಿದೆ. ವಿಚಾರಪೂರಿತವಾದ ಶಾಸ್ತ್ರೀಯ ವಿಭಜನೆಯಿಂದ ಹೊರಡುವ ಅಂತಿಮಸಿದ್ಧಾಂತವೆಂದರೆ ಇದೇ. ಆದುದರಿಂದ ಈ ಸಿದ್ಧಾಂತದ ಮೇಲೆಯೇ ಸುವಿಚಾರಯುಕ್ತವಾದ ತತ್ತ್ವಜ್ಞಾನಮಂದಿರವನ್ನು ರಚಿಸಬೇಕಾಗುವುದು." ( ಮೂಲ ತತ್ತ್ವಗಳು § ೬೨ ). ಇನ್ನು ತ್ರಿಕಾಲಾಬಾಧಿತವಾದ ಶಕ್ತಿಯೆಂದರೇನು ? ಎಂದು ಕೇಳಿದರೆ ಅದರ ನಿಜವಾದ ಅರ್ಥವು "ನಮ್ಮ ಜ್ಞಾನದ ಕೊನೆಯನ್ನು ಮೀರಿದ, ಮತ್ತು (ತರ್ಕಯುಕ್ತವಾದ) ಕಲ್ಪನೆಗಳಿಗೆ ನಿಲುಕದಂತಹ ಯಾವುದೋ ಒಂದು ಅಸ್ಪೃತವಾದ ಮೂಲ ಕಾರಣವೇ ಸರಿ"ಯೆಂದು ಸ್ಪೆನ್ಸರನು ಹೇಳುತ್ತಾನೆ. ಇವೆಲ್ಲ ವರ್ಣನೆಗಳು ನಮ್ಮ ವೇದಾಂತದ ನಿರ್ವಿಶೇಷಬ್ರಹ್ಮನಿಗೆ ಎಷ್ಟರ ಮಟ್ಟಿಗೆ ಹತ್ತುವವೆಂಬುದನ್ನು ನಿರ್ಣಯಿಸುವುದು ಸೂಕ್ಷ್ಮಜ್ಞರಾದ ವಾಚಕರ ಕೆಲಸವು.

ಹೇಕೇಲನ ಮೂಲ ತತ್ತ್ವವು

ಇದನ್ನೇ ಪ್ರಸಿದ್ಧ ನಾಸ್ತಿಕನಾದ ಹೇಕೇಲನು "The Fundamental Cosmic Law of the Persistence of Matter and Energy," ಅಥವಾ ಸ್ವಲ್ಪದರಲ್ಲಿ "The Law of Substance" ಎಂದು ಕರೆದಿದ್ದಾನೆ. ( ವಿಶ್ವಕೂಟ. ಪು. ೧೬೩-೧೯೦ ). ವಿಶ್ವದೊಳಗಿನ ಜಡದ್ರವ್ಯವು ಅವಿನಾಶಿಯೆಂದೂ ( Conservation of Matter ), ಮತ್ತು ಅದರೊಳಗಿನ ಶಕ್ತಿಯು ತ್ರಿಕಾಲಾಬಾಧಿತವೆಂದೂ ( Conservation of Energy ) ಈ ತತ್ತ್ವದ ಅರ್ಥವು. ಭೌತಿಕ ಶಾಸ್ತ್ರಗಳೆಲ್ಲ ಈ ವಿಶ್ವತತ್ತ್ವದ ಮೇಲೆಯೇ ನಿಂತಿರುತ್ತವೆ. ಈ ತತ್ತ್ವಕ್ಕನುಸರಿಸಿ ವಿಶ್ವದೊಳಗಿನ ಜಡವೂ ಶಕ್ತಿಯೂ ಅಬಾಧಿತವಾಗಿ, ಅಖಂಡವಾಗಿ, ನಿತ್ಯವಾಗಿ ಇದ್ದಷ್ಟೇ ಇರುವವು. ಅವು ಬೇರೆ ಬೇರೆ ರೂಪಗಳನ್ನು ಧಾರಣ

ಮಾಡಬಹುದೆಂಬ ಮಾತು ಸತ್ಯವಿದ್ದರೂ ಅವುಗಳ ಪ್ರಮಾಣವು ಮಾತ್ರ ಒಟ್ಟಿನ ಮೇಲೆ ಅವಿಚ್ಛಿನ್ನವಾಗಿಯೇ ಇರುವುದು ಆಧುನಿಕ ಶಾಸ್ತ್ರಗಳ ಮೂಲ ಕಲ್ಪನೆಯು. ಹೆಚ್ಚೇನು ? ಇದು ಆಧುನಿಕರ ತಿರುಳು, ಹುರುಳು, ಜೀವಾಳ, ಜೀವವೇ ಆಗಿದೆಯೆಂದೆನ್ನಬಹುದು.

ಈ ವಿಶ್ವವ್ಯಾಪಕ ಮೂಲ ಸತ್ಯದಿಂದ Uniformity of Law ಎಂದರೆ ಧರ್ಮಸಾದೃಶ್ಯವು ಅಥವಾ ವಿಶ್ವದ ಬದ್ಧಕ್ರಮತೆಯು ತಾನಾಗಿಯೇ ನಿಷ್ಪನ್ನವಾಗುವುದು. ಎಂದರೆ ಆ ಮೂಲ ಶಕ್ತಿಯು ನಿತ್ಯವಾಗಿರುವುದರಿಂದ ಜಗತ್ತಿನೊಳಗೆ ಕಂಡು ಬರುವ ಸಂಗತಿಗಳೆಲ್ಲ ಒಂದೇ ಧರ್ಮದಿಂದ ಬಂಧಿಸಲ್ಪಟ್ಟಿರುವವು. ಅವುಗಳೊಳಗೆಲ್ಲ ಒಂದು ತರದ ಕ್ರಮವು ಅಥವಾ ವ್ಯವಸ್ಥೆಯು ಅವ್ಯಾಹತವಾಗಿ ಸ್ಥಿತವಾಗಿರುವುದೆಂದು ಕಂಡುಬರುತ್ತದೆ. ಬೆಂಕಿಯು ಸುಡುತ್ತದೆಂಬ ಮಾತು ಕೆಲವು ಕಾಲದ ವರೆಗೆ ಮಾತ್ರ, ಮಾನವಜಾತಿಯ ಕೆಲವೊಂದು ವರ್ಗದವರಿಗೆ ಸತ್ಯವಾಗಿ ಕಾಣಲಾರದೆಂಬುದೇ ಈ ಬದ್ಧಕ್ರಮತ್ವದ ಅರ್ಥವು. ಬೆಂಕಿಯು ಯಾವ ಕಾಲದಲ್ಲಾದರೂ, ಯಾರನ್ನಾದರೂ ಸುಡತಕ್ಕಂತಹ ವಸ್ತುವೆ. ಇಂತಹ ಬದ್ಧಕ್ರಮವು ಇಲ್ಲದಿದ್ದರೆ ನಾಳೆ ಏನಾಗುತ್ತಿತ್ತೊ, ಯಾರಿಗೆ ಗೊತ್ತು ? ನಾಳಿನ ದಿವಸ ಮುಂಜಾನೆ ಸೂರ್ಯನು ಕೂಡ ಉದಯವಾಗುತ್ತಿದ್ದನೋ ಇಲ್ಲವೊ ! ಆದರೆ ಎಲ್ಲೆಲ್ಲಿ ನೋಡಿದರೂ ಈ ಕ್ರಮವೊಂದು ಎಲ್ಲ ವಸ್ತುಗಳನ್ನು ವ್ಯಾಪಿಸಿಬಿಟ್ಟಿರುವುದರಿಂದ ಆ ತರದ ಅಂಜಿಕೆಗಳಿಗೆ ಅವಕಾಶವೇ ಇರುವುದಿಲ್ಲ. ಮುಂದೆ ಇದೇ ಸಿದ್ಧಾಂತದಿಂದ ಎರಡು ಉಪಸಿದ್ಧಾಂತಗಳು ಹೊರಡುವವು. (೧) ವಿಶ್ವದೊಳಗಿನ ಶಕ್ತಿಯು ಅವ್ಯಾಹತವಾಗಿ ಬೇರೆ ಬೇರೆ ರೂಪಗಳನ್ನು ಧಾರಣಮಾಡುತ್ತಿರುತ್ತದೆ; ಎಂದರೆ ಅದು ಒಂದೇ ಸಮನೆ ಪಲ್ಲಟಿಸುತ್ತಿರುವುದು. ಆದರೂ ಒಂದೆಡೆಗೆ ಎಷ್ಟು ಶಕ್ತಿಯು ಕಡಿಮೆಯಾಗಿದೆಯೆಂದು ತೋರುವುದೋ ಅಷ್ಟೇ ಶಕ್ತಿಯು ಬೇರೊಂದೆಡೆಗೆ ಹೆಚ್ಚಾಗಿದೆಯೆಂದು ಕಾಣಿಸುತ್ತದೆ. (೨) ಅದರಂತೆಯೇ ತಾಲಯುಕ್ತವಾದ ಗತಿಯಾದರೂ (Motion) ಇದರಿಂದಲೇ ಸಿದ್ಧವಾಗುವುದು. ಯಾಕೆಂದರೆ ಗುಪ್ತ ಮತ್ತು ಪ್ರತ್ಯಕ್ಷ (latent and actual) ಶಕ್ತಿಗಳೆಂಬ ವಿರುದ್ಧ ವಸ್ತುಗಳು ಕೂಡಿದಾಗೆಲ್ಲ ಈ ತರದ ತಾಲಯುಕ್ತ (ಕ್ರಮವಿಶಿಷ್ಟ)ವಾದ ಗತಿಯು ಸಂಭವಿ

ಇದರಿಂದ ಹೊರಡುವ ಧರ್ಮಸಾದೃಶ್ಯವು

ಸಲೇಬೇಕೆನ್ನುವುದು ಸಹಜವಿದೆ. ಇದೆಲ್ಲದರ ಸಾರಾಂಶವೇನೆಂಬುದನ್ನು ಸ್ಪೆನ್ಸರ ಸಾಹೇಬರ ಶಬ್ದಗಳಲ್ಲಿಯೇ ಹೇಳಬಹುದು. " ಜಡವು ಅವಿನಾಶಿ, ಗತಿಯು ಅಖಂಡ, ಶಕ್ತಿಯು ಅವಿಚ್ಛಿನ್ನವಾಗಿದೆಯೆಂಬುವದನ್ನು ನಾವು ಈ ವರೆಗೆ ನೋಡಿದೆವು. ಎಂದರೆ ಶಕ್ತಿಯು ವಾಸಸ್ಥಾನಗಳು ಒಂದೇ ಸವನೆ ಬದಲಾಗುತ್ತಿರುವವು. ಮತ್ತು ಗತಿಯು ಯಾವಾಗಾದರೂ ತನಗೆ ಸುಲಭವಾದ ಮಾರ್ಗವನ್ನೇ ಅನುಸರಿಸುವುದಾದುದರಿಂದ, ಅದು ನಿತ್ಯ ತಾಲಬದ್ಧವಾಗಿರುವುದು, ಎಂಬ ಮಾತನ್ನು ಕಂಡುಹಿಡಿದೆವು. ಇನ್ನು ಮುಂದೆ, ಹೀಗೆ ಬೇರೆ ಬೇರೆಯಾಗಿ ಹೇಳಿದ ಕಾರ್ಯಗಳು ಒಂದೇ ಕಡೆಗೆ ಕೂಡುವುದರಿಂದ ಯಾವ ತರದ ಫಲಗಳು ಪರಿಣಮಿಸುವವೆಂಬುದನ್ನು ನಾವು ನೋಡಬೇಕಾಗಿದೆ. "

ಗತಿಯು ಏರಿಳಿತಗಳು

ಈ ಪ್ರಕಾರವಾಗಿ ಜಡದ್ರವ್ಯವೂ, ಅದರ ಗತಿಯೂ ಅಖಂಡವಾಗಿ ವಿಧ ವಿಧದ ರೂಪಗಳನ್ನು ಸರ್ವಕಾಲದಲ್ಲಿಯೂ ಹೊಂದುತ್ತ ನಡೆದಿರುವವೆಂಬ ಮಾತು ಸಿದ್ಧವಾಯಿತಷ್ಟೆ. ಇದು ದೊಡ್ಡ ಪ್ರಮಾಣದಲ್ಲಿ ಮಾತ್ರ ನಡೆದಿರುವುದೆಂದಲ್ಲ; ನಮಗೆ ಗೊತ್ತಿದ್ದ ಸೂರ್ಯನ ಕೋಟ್ಯಾವಧಿ ಪಾಲು ದೊಡ್ಡವಾದ ತೇಜೋಮೇಘಗಳಲ್ಲಿಯೂ, ನಾವು ವಾಸಿಸುತ್ತಿದ್ದ ಪೃಥ್ವಿಯ ಮೇಲೂ, ಕಿಂಬಹುನಾ, ಕ್ಷುಲ್ಲಕವಾದ ಪರಮಾಣುಗಳಲ್ಲಿ ಕೂಡ ಈ ತರದ ಪಲ್ಲಟನೆಯು ಒಂದೇ ಸವನೆ ನಡೆದಿರುವುದು. ಇಂದ್ರಿಯ ಗೋಚರವಾದ ಎಲ್ಲ ವಸ್ತುಗಳೂ ಅದೃಶ್ಯದೊಳಗಿಂದಲೇ ಹೊರಬಿದ್ದು, ತಮ್ಮ ನಾಟಕವನ್ನಾಡಿ ತೋರಿಸಿ, ಮತ್ತೆ ಆ ಅದೃಶ್ಯದೊಳಗೇ ಕೂಡಿಕೊಂಡು ಅಲ್ಲಿಯೇ ಲಯವಾಗುವವು. "ಅದರ್ಶನದಿಂದ ಹೊರಟು ಮತ್ತೆ ಪುನಃ ಅದರ್ಶನಕ್ಕೆ ಹೋಗಿ ನಾವೆಲ್ಲರೂ ಮುಟ್ಟುವೆವೆ"ಂದು ಶ್ರೀಮನ್ಮಹಾಭಾರತದಲ್ಲಿ ಹೇಳಿದ್ದು ಇಲ್ಲಿ ಅಕ್ಷರಶಃ ಹತ್ತುವಂತಿದೆ. ಇನ್ನು, ಅದೃಶ್ಯದೊಳಗಿಂದ ಈ ಜಗತ್ತನ್ನು ಹುಟ್ಟಿಸಿ, ನಮ್ಮೆಲ್ಲರ ಕಣ್ಣಿಗೆ ಗೋಚರಗೊಳಿಸಿ, ಮತ್ತೆ ತಿರುಗಿ ಆ ಅದೃಶ್ಯಕ್ಕೇ ಒಯ್ದು ಮುಟ್ಟಿಸುವ ಮುಖ್ಯವಾದ ಕರ್ತೃವೆಂದರೆ ಮೇಲೆ ವಿವರಿಸಿದ ದ್ರವ್ಯಗತಿಗಳ ನಾನಾತ್ವವೇ ಸರಿ. ಈ ರೀತಿಯಿಂದ ಅದೃಶ್ಯದೊಳಗಿಂದ ಹೊರಬಿದ್ದು, ತಿರುಗಿ ಅಲ್ಲಿಯೇ ಹೋಗಿ ಲಯವಾಗಬೇಕಾದರೆ ಎರಡು ವಿರುದ್ಧವಾದ ಕಾರ್ಯಕ್ರಮಗಳು ಸಂಭವಿಸುತ್ತವೆ. ದ್ರವ್ಯದ ಸಂಯೋಗವೂ ( ಎಂದರೆ ಗಟ್ಟಿಯಾಗುವುದು; ಅಥವಾ ವಾಯುರೂಪದಿಂದ

ಪ್ರವಾಹರೂಪವನ್ನು ಹೊಂದುವುದು, ಅಥವಾ ಪ್ರವಾಹರೂಪದಿಂದ ಘನ ರೂಪವನ್ನು ಹೊಂದುವುದು. ಇದಕ್ಕೇ ಘನೀಭವನ ಕ್ರಿಯೆಯೆಂದೂ ಬೇಕಾದವರು ಹೆಸರು ಕೊಡಬಹುದು.) ಮತ್ತು ಅದರಿಂದಲೇ ಉಂಟಾದ ಗತಿಯ ಚದರಿಕೆಯೂ (Integration of matter and Consequent dissipation of Motion) ಮೊದಲನೆಯದು, ತದ್ವಿರುದ್ಧವಾಗಿ ಗತಿಯನ್ನು ಹೀರಿಕೊಳ್ಳುವುದೂ ಮತ್ತು ಅದರಿಂದಲೇ ಉಂಟಾದ ದ್ರವ್ಯದ ವಿಯೋಗವೂ ಎರಡನೆಯದು. ಮೊದಲನೆಯದರಿಂದ ಐಕ್ಯತೆಯೂ ಸ್ಪಷ್ಟತೆಯೂ ಉಂಟಾದರೆ ಎರಡನೆಯದರಿಂದ ವಿಸ್ತಾರವೂ ವೈಪರೀತ್ಯವೂ ಹೆಚ್ಚಾಗುವವು. ಒಂದರಿಂದ ವಸ್ತುಗಳು ಹೆಚ್ಚೆಚ್ಚು ಸಮೀಪಕ್ಕೆ ಬಂದು ಅವುಗಳೊಳಗಿನ ಪರಸ್ಪರ ಸಂಬಂಧವು ಹೆಚ್ಚಾದರೆ, ಮತ್ತೊಂದರಿಂದ ಅವು ಹೆಚ್ಚೆಚ್ಚು ಚದರಿಹೋಗಿ ಅವುಗಳೊಳಗಿನ ತಾಳವು ತಪ್ಪಿಹೋಗುತ್ತಿದೆ. ಒಂದರಿಂದ ಹೊಂದಿಕೆಯೂ ಅನ್ವಯವೂ ಬೆಳೆಯುತ್ತಹೋದರೆ, ಬೇರೊಂದರಿಂದ ವಿಪರೀತವಾದ ಪರಿಣಾಮಗಳುಂಟಾಗುತ್ತವೆ. ವಿಶ್ವವ್ಯಾಪಿಯಾದ ಈ ವಿರುದ್ಧ ಕಾರ್ಯಕ್ರಮಗಳೇ ಉತ್ಕ್ರಾಂತ್ಯವಕ್ರಾಂತಿಗಳೆಂದು ಕರೆಯಲ್ಪಡುತ್ತವೆ. ಎಂದರೆ ಇಡೀ ಜಗತ್ತೇ ಪ್ರತಿಕ್ಷಣಕ್ಕೂ ಬದಲಾಗುತ್ತಿರುವುದು; ಬೇರೆ ಬೇರೆ ಬದಲಾವಣೆಗಳನ್ನು ಹೊಂದುತ್ತಿರುವುದು; ನಾನಾತರದ ಮಾರ್ಪಾಟುಗಳನ್ನು ಧರಿಸುತ್ತಿರುವುದು; ಮತ್ತು ಅಖಂಡವಾದ ಪಲ್ಲಟವನ್ನು ಹೊಂದುತ್ತಿರುವುದು. ಹಾಗೂ ಈ ತರದ ಕಾರ್ಯಕ್ರಮಗಳಿಂದಲೇ (Processes) ಜಗತ್ತಿನೊಳಗಿನ ಎಲ್ಲ ವೈವಿಧ್ಯಗಳ ಅರ್ಥವನ್ನು—ಅವು ದೊಡ್ಡವಿರಲಿ, ಸಣ್ಣವಿರಲಿ; ಜಡಕ್ಕೆ ಸಂಬಂಧಿಸಿರಲಿ, ಜೀವಕ್ಕೆ ಸಂಬಂಧಿಸಿರಲಿ; ಭೌತಿಕವಿರಲಿ, ತಾತ್ತ್ವಿಕವಿರಲಿ; ಮಾನಸಿಕವಿರಲಿ; ಅಥವಾ ಸಾಮಾಜಿಕವಿರಲಿ—ಸರಿಯಾಗಿ ಹಚ್ಚಿ ತೋರಿಸಬಹುದು. ಸ್ಪೆನ್ಸರ ಸಾಹೇಬರ ಶಬ್ದಗಳಲ್ಲಿಯೇ ಹೇಳಬೇಕೆಂದರೆ "ಈ ಉತ್ಕ್ರಾಂತ್ಯವಕ್ರಾಂತಿಗಳ ಏರಿಳಿತವು, ಸಣ್ಣ ಸಮೂಹಗಳಲ್ಲಿ (ವಸ್ತುಸಂಚಯಗಳಲ್ಲಿ) ಅಲ್ಪಕಾಲಾವಧಿಯಲ್ಲಿಯೂ, ಮತ್ತು ಅನಂತ ದಿಙ್ಮಂಡಲವ್ಯಾಪಕವಾದ ಸಮೂಹಗಳಲ್ಲಿ ಮಾನವನ ಬುದ್ಧಿಗೆ ತೋಚದಂತಹ ಕಾಲಾವಧಿಗಳಲ್ಲೂ, ತಪ್ಪದೆ ನಡೆದೇ ಇರುವುದು. ನಮಗೆ ಗೊತ್ತಿದ್ದಮಟ್ಟಿಗೆ ಈ ಏರಿಳಿತವು ಸರ್ವವ್ಯಾಪಿಯಾಗಿ ನಿತ್ಯವಾಗಿರುವುದೆಂದೂ, ಮತ್ತು ಅದರ ಏರಿಳಿತಗಳು ಅಲ್ಲಲ್ಲಿಯ ಸ್ಥಿತಿಗತಿಗಳಿಗನುಸರಿಸಿ ಒಮ್ಮೆ ದಿಙ್ಮಂಡಲದ ಈ ಭಾಗದಲ್ಲಿ,

ಮತ್ತೊಮ್ಮೆ ಮತ್ತೊಂದು ಭಾಗದಲ್ಲಿ ನಡೆಯುವವೆಂದೂ ಹೇಳಬಹುದು. ಇವೆಲ್ಲ ಸಂಗತಿಗಳು, ಅವುಗಳ ಬಾಹ್ಯರೂಪರೇಷೆಗಳನ್ನು ಹಿಡಿದು ಸಣ್ಣ ಸಣ್ಣ ಅಂತ ರ್ಭಾಗಗಳ ವರೆಗೆ ಎಲ್ಲವೂ ಅಪವಾದರಹಿತವಾಗಿ, ದ್ರವ್ಯಗತಿಗಳನ್ನೊಳಗೊಂಡ ತ್ರಿಕಾಲಾಬಾಧಿತವಾದ ಆ ಸಚ್ಛಕ್ತಿಯ ಅಸ್ತಿತ್ವದಿಂದ ಅವಶ್ಯವಾಗಿ ಜರುಗಲೇ ಬೇಕಾದ ಪರಿಣಾಮ ವಿಶೇಷಗಳೇ ಸರಿ. ಈ ದ್ರವ್ಯಗತಿಗಳು ಆಕಾಶವನ್ನು ವ್ಯಾಪಿಸಿ ಬಿಟ್ಟಿರುವವೆಂದೂ, ಅವುಗಳ ಪರಿಮಾಣವು ಆಯವ್ಯಯರಹಿತವಾಗಿರುವುದರಿಂದ ಯಾವಾಗಲೂ ಅಷ್ಟೇ ಇರುವುದೆಂದೂ ಒಮ್ಮೆ ನಾವು ಒಪ್ಪಿಕೊಂಡರೆ, ಉತ್ಕ್ರಾಂತ್ಯ ವಕ್ರಾಂತಿ ರೂಪಗಳಾದ ಅಖಂಡ ನಾನಾತ್ವಗಳೂ, ಅವುಗಳ ಸಂಗಡಲೇ ಮೇಲೆ ವಿವರಿಸಿದ ಕೆಲವು ಚಿಕ್ಕ ವಿಶಿಷ್ಟ ಸಂಗತಿಗಳೂ ಸಂಭವಿಸಲೇ ಬೇಕೆಂಬುವುದು ಸ್ಪಷ್ಟವಿದೆ. ಪರಿಮಾಣದಲ್ಲಿ ಬದಲಾವಣೆಗಳನ್ನು ಹೊಂದದಿರುವ ನಿತ್ಯವಾದ ಈ ವಸ್ತುವು ತನ್ನ ಬಾಹ್ಯರೂಪುಗಳನ್ನು ನಿತ್ಯಶಃ ಮಾರ್ಪಡಿಸುತ್ತಿರುತ್ತದೆ. ಇಂದ್ರಿಯ ಗೋಚರವಾದ ಈ ಮಾರ್ಪಾಟುಗಳೇ ಉತ್ಕ್ರಾಂತ್ಯವಕ್ರಾಂತಿಗಳ ರೂಪದಿಂದ ವಿಶ್ವದಲ್ಲಿ ನಮಗೆ ಕಂಡುಬರುವವು. ಆದರೆ ಇವೆಲ್ಲವುಗಳ ಹಿಂದೆ ಇರುವ ಆ ನಿತ್ಯ ವಸ್ತುವು ಮಾತ್ರ ಮಾನವನ ಬುದ್ಧಿಗೂ ಕಲ್ಪನೆಗೂ ನಿಲುಕದ ಮಾತು. ಅದು ಅಜ್ಞಾತವೂ ಅಜ್ಞೇಯವೂ ಆಗಿರುವುದು. ಆದರೆ ದಿಕ್ಕಾಲಗಳ ಕಲ್ಪನೆಗೆ ಸಿಲು ಕದೆ ಅನಾದ್ಯನಂತವಾದ ವಸ್ತುವದಿರಬೇಕೆಂಬುದನ್ನು ಮಾತ್ರ ನಾವು ಒಪ್ಪಿ ಕೊಳ್ಳುವ ಹೊರತು ನಡೆಯುವಂತಿಲ್ಲ. "

ಇನ್ನು ಉತ್ಕ್ರಾಂತಿವಾದದ ನಿಯಮವೊಂದನ್ನು ಚರ್ಚಿಸಿ ಈ ಪ್ರಕರಣ ವನ್ನು ಮುಗಿಸುತ್ತೇವೆ.

ವಸ್ತುಗಳ ಸಂಯೋಗವೂ ಮತ್ತು ಅದರಿಂದಲೇ ಉಂಟಾದ ಗತಿಯ ಚೆದರಿಕೆಯೂ ಕೂಡಿ ಉತ್ಕ್ರಾಂತಿಯಾಗುವುದೆಂದು ಮೇಲೆ ಹೇಳಿದ್ದೇವೆ. ಆದರೆ

ಉತ್ಕ್ರಾಂತಿಯ ನಿಯಮವು ಅದರ ವಿಶಾಂಗೀಣ ಚರ್ಚೆಯು

ಇಷ್ಟರಿಂದಲೇ ಉತ್ಕ್ರಾಂತಿಯ ನಿಯಮವು ಸಿಕ್ಕಂತಾ ಗಲಾರದು. ಸ್ಪೆನ್ಸರ ಸಾಹೇಬರ "ಪ್ರಗತಿ, ಅದರ ಕಾರಣ ಹಾಗೂ ನಿಯಮಗಳು" ಎಂಬ ಪುಸ್ತಕದಲ್ಲಿ ಈ ನಿಯಮದ ಬಗ್ಗೆ ಮಾಡಿದ ಉಲ್ಲೇಖವೇನೆಂದರೆ: "ಸಜಾತೀಯ ವಸ್ತುಗಳು ವಿಜಾತೀಯವಾಗುವ ಕ್ರಮಕ್ಕೆ ಉತ್ಕ್ರಾಂತಿಯೆಂದು ಹೆಸರು ಕೊಡಬಹುದು. ಅಥವಾ ಸ್ವಲ್ಪದರಲ್ಲಿ ಹೇಳಬೇಕಾದರೆ, ಸಾದೃಶ್ಯದಿಂದ ವಿಸಾದೃಶ್ಯೋತ್ಪತ್ತಿಯೇ

ಉತ್ಕ್ರಾಂತಿಯೆಂದು ಹೇಳಬಹುದು. ಅಥವಾ ಏಕತ್ವದಿಂದ ಬಹುತ್ವವಾಗುವ ವ್ಯಾಪಾರವೇ ವಿಕಾಸವೆಂದು ವಿವರಿಸಬಹುದು." ಜರ್ಮನಿಯವರಿಂದ ಕೊಲರಿಜ್ ಕವಿಯು ತೆಗೆದುಕೊಂಡ "A Tendency towards Individuation" ಎಂದರೆ "ಭಿನ್ನತೆ ಅಥವಾ ವೈಶಿಷ್ಟ್ಯದ ಕಡೆಯ ಒಲವೇ" ವಿಕಾಸದ ನಿಯಮವೆಂದು Social Statics" ಎಂಬ ತನ್ನ ಪುಸ್ತಕದಲ್ಲಿ (೩೨ನೆಯ ಪ್ರಕರಣ § ೧೨) ಸ್ಪೆನ್ಸರನು ಬರೆದಿದ್ದಾನೆ. ಆದರೆ ಈ ವರ್ಣನೆಯೆಲ್ಲ ಏಕಾಂಗೀಣವಾದ ನಿಯಮವೆಂಬುದು ಅವನಿಗೆ ಹಿಂದಿನಿಂದ ತಿಳಿಯಿತು. ಮತ್ತು ಅವನು ಈ ಮಾತನ್ನು "ಮೂಲತತ್ತ್ವಗಳೆಂಬ" ಪುಸ್ತಕದ § ೧೫೯ರ ಮೇಲೆ ಬರೆದ ಟಿಪ್ಪಣಿಯಲ್ಲಿ ಸ್ಪಷ್ಟವಾಗಿ ಒಪ್ಪಿಕೊಂಡಿದ್ದಾನೆ. "ಹೆಚ್ಚೆಚ್ಚಾದ ವಿಸಾದೃಶ್ಯತೆಯು ಅಥವಾ ವಿವಿಧತ್ವವು ಆಗುತ್ತಹೋಗಿದೆಯೆಂಬುವ ಮಾತಿನಿಂದಲೇ ಪ್ರಗತಿಯಾಗಿದೆಯೆಂದು ಹೇಳುವುದು ತಪ್ಪಾಗದಿರದು. ಯಾಕೆಂದರೆ ಇಂತಹ ಎಷ್ಟೋ ಮಾರ್ಪಾಟುಗಳು ಉತ್ಕ್ರಾಂತಿಯ ಬದಲು ಅವಕ್ರಾಂತಿಯನ್ನು ಸೂಚಿಸುವುದು ಶಕ್ಯವಿದೆ. ಉದಾಹರಣೆಗಾಗಿ ಆವುದೊಂದು ಪ್ರಾಣಿಯ ದೇಹವನ್ನು ತೆಗೆದುಕೊಳ್ಳುವ. ಅದರ ದೇಹದ ವೈವಿಧ್ಯವು ಒಮ್ಮೊಮ್ಮೆ ಆ ಪ್ರಾಣಿಯ ಹಿತವನ್ನು ಸಾಧಿಸುವ ಬದಲು, ಅದರ ನಾಶಕ್ಕೆ ಕಾರಣವಾಗಬಹುದು. ಯಾವುದಾದರೊಂದು ಅವಯವಕ್ಕೆ ಗಾಯವಾಯಿತೆಂದರೆ, ಆ ಗಾಯದಿಂದ ಆ ಪ್ರಾಣಿಯ ದೇಹವೈವಿಧ್ಯವು ಹೆಚ್ಚುವುದು ಶಕ್ಯವಿದೆ. ಅದರಂತೆಯೇ ಸಮಾಜದಲ್ಲಿ ಅರಾಜಕತೆಯು ಬೆಳೆಯಿತೆಂದರೆ ಅವರ ವಿಸದೃಶತೆಯು ಬೆಳೆಯದಿರಲಾರದು. ಆದರೂ ಈ ಮಾರ್ಪಾಟುಗಳು ಪ್ರಗತಿಯ ಸೂಚಕವಾಗಿರುವವೆಂದು ನಾವು ಎಂದೂ ಹೇಳುವುದಿಲ್ಲ. ಇಷ್ಟೇ ಅಲ್ಲ; ಅವು ನಾಶದ ಸಾಧನಗಳೆಂದು ನಾವು ಸಹಸಾ ತಿಳಿಯುತ್ತೇವೆ."

ವಿಕಾಸದ ಸರ್ವಾಂಗೀಣ ನಿಯಮವು

ಹಾಗಾದರೆ ವಿಕಾಸವಾದದ ನಿಜವಾದ ನಿಯಮವಾವುದು ? ಮೇಲೆ ಹೇಳಿದ ನಿಯಮವು ಆ ವಾದದ ಒಂದು ಭಾಗ ಮಾತ್ರವಾಗಿರುವುದೆಂಬುದು ಮೇಲಿನ ವಿವರಣೆಯಿಂದ ಸ್ಪಷ್ಟವಾಗಿದೆ. ಅದನ್ನು ಪೂರ್ಣಮಾಡಲಿಕ್ಕೆ ಬೇಕಾದ ಇನ್ನೊಂದು ನಿಯಮವೇನೆಂದರೆ ವಿವಿಧತೆಯನ್ನು ಹೆಚ್ಚಿಸುವ ಮಾರ್ಪಾಟುಗಳ ಸಂಗಡಲೇ ಹೆಚ್ಚೆಚ್ಚಾದ ಹೊಂದಿಕೆಯೂ ಆ ವಿವಿಧ ಭಾಗಗಳಲ್ಲಿ ಬೆಳೆಯಬೇಕು.

ಎಂದರೆ ಮಾತ್ರ ಆ ಮಾರ್ಪಾಟುಗಳು ವಿಕಾಸವನ್ನು ಸೂಚಿಸುವವೆಂದು ಹೇಳಬಹುದು. ಸಾದೃಶ್ಯದಿಂದ ಅಸಾದೃಶ್ಯವೂ, ಸರಲತೆಯಿಂದ ಸಂಕೀರ್ಣತೆಯೂ, ಏಕತ್ವದಿಂದ ಬಹುತ್ವವೂ ಹುಟ್ಟಿದಾಕ್ಷಣಕ್ಕೆ ಪ್ರಗತಿಯಾಯಿತೆನ್ನುವುದು ತಪ್ಪು. ಆ ಅಸಾದೃಶ್ಯ, ಸಂಕೀರ್ಣತೆ, ಬಹುತ್ವದ ಕೂಡ, ಆ ವಸ್ತುವಿನ ಬೇರೆ ಬೇರೆ ಭಾಗಗಳಲ್ಲಿ ಹೊಂದಿಕೆ, ಸಂಬಂಧ, ಸ್ನಿಗ್ಧತೆ, ಅಥವಾ ಸ್ನೇಹವು ಹೆಚ್ಚೆಚ್ಚಾಗಿ ಬೆಳೆಯುತ್ತ ಹೋಗಬೇಕು. ಸ್ವಲ್ಪದರಲ್ಲಿ ಹೇಳಬೇಕಾದರೆ, ವೈಶೇಷ್ಯ ಹಾಗೂ ಹೊಂದಿಕೆಗಳೇ (Individuation and Coherence) ವಿಕಾಸವಾದದ ನಿಯಮವೆಂದು ಹೇಳಬಹುದು. ಉದಾಹರಣೆಗಾಗಿ ಮನುಷ್ಯನನ್ನು ತೆಗೆದುಕೊಳ್ಳುವ. ಪಶುಗಳ ದೇಹ ರಚನೆಗಿಂತ, ನಮ್ಮ ದೇಹ ರಚನೆಯು ಹೆಚ್ಚು ಸಂಕೀರ್ಣವಾಗಿರುವುದೆಂಬುದು ಎಲ್ಲರೂ ಒಡಂಬಡಬೇಕಾದ ಮಾತು. ಎಂದರೆ ನಮ್ಮ ದೇಹರಚನೆಯು ಹೆಚ್ಚು ಗೊಂದಲದ್ದು, ಅಥವಾ ತೊಡಕಾದದ್ದು ಎಂದು ಹೇಳಬಹುದು. ಮನುಷ್ಯನ ದೇಹದಲ್ಲಿ ಪಶುದೇಹಕ್ಕಿಂತ ಹೆಚ್ಚಾದ ಅವಯವಗಳೂ ದೇಹಭಾಗಗಳೂ ಕಂಡುಬರುತ್ತವೆ. ಆದರೆ ಅವನ ಅವಯವಗಳಲ್ಲಿ ಪಶುದೇಹಕ್ಕಿಂತ ಹೆಚ್ಚಾದ ಸಂಬಂಧವೂ, ಏಕತೆಯೂ, ಹೊಂದಿಕೆಯೂ ಕಂಡುಬರುವುದಿಲ್ಲವೇ? ಅವನಲ್ಲಿರುವ ಬುದ್ಧಿಶಕ್ತಿ, ಪರಿಸ್ಥಿತಿಗನುಗುಣವಾಗಿ ತನ್ನ ವೃತ್ತಿಯನ್ನು ಬದಲುಮಾಡಿಕೊಳ್ಳುವ ಜಾಣತನ, ಮತ್ತು ಸ್ವಪ್ರಜ್ಞತೆ ಮೊದಲಾದವುಗಳಿಂದ ಮಾನವದೇಹದ ಏಕತ್ವವು ಪಶುದೇಹಕ್ಕಿಂತ ಹೆಚ್ಚಾಗಿದೆಯೆಂಬುವನ್ನು ಯಾರಿಗೂ ಬೇರೆ ಹೇಳುವ ಕಾರಣವಿಲ್ಲ. (Social statics. Chap. 22, §12)

ಇದೇ ಉತ್ಕ್ರಾಂತಿ ತತ್ವದ ನಿಯಮವು. ಎಲ್ಲಿ ಇವೆರಡು ಲಕ್ಷಣಗಳ ಆವಿರ್ಭಾವವಾಗಿರುವುದೊ ಅಲ್ಲಿ ವಿಕಾಸವಾಗಿದೆಯೆಂದೂ, ತದ್ವಿರುದ್ಧವಾದ ಲಕ್ಷಣಗಳು ತೋರಹತ್ತಿದವೆಂದರೆ ಅವಕ್ರಾಂತಿಯು ಸುರುವಾಯಿತೆಂದೂ ತಿಳಿದುಕೊಳ್ಳಬೇಕು. ಈ ನಿಯಮದ ಅಳತೆಯನ್ನು ಹಚ್ಚಿ ನೋಡಿಯೇ ನಮ್ಮ ಪೃಥ್ವೀತಲವು ಉತ್ಕ್ರಾಂತಿಯ ಫಲವಾಗಿದೆಯೆಂದು ವಿಕಾಸವಾದಿಗಳು ಹೇಳುತ್ತಾರೆ. ಅದು ಹೇಗೆಂಬುದನ್ನು ಮುಂದಿನ ಪ್ರಕರಣದಲ್ಲಿ ವಿಶದಮಾಡಿ ತೋರಿಸುವೆವು. ಆದರೆ ವಾಚಕರಿಗೆ ಸುಲಭವಾಗಬೇಕೆಂದು ಅದರ ಪ್ರಮುಖವಾದ ಚಿತ್ರವೊಂದನ್ನು ಇಲ್ಲಿ ಸಮರ್ಪಿಸುವುದು ವಿಹಿತವೆನಿಸುತ್ತದೆ.

(೧) ಜಗತ್ತಿನೊಳಗಿನ ಜಡವೂ, ಶಕ್ತಿಯೂ ಅವ್ಯಾಹತವಾಗಿ ಅಬಾಧಿತ ವಾಗಿರುತ್ತವೆ. (೨) ಪ್ರಾರಂಭಕ್ಕೆ ತೇಜೋ ಮೇಘಗಳ ವಿನಹ ಬೇರೆ ಏನೂ ಇರಲಿಲ್ಲ. ಈ ತೇಜೋಮೇಘಗಳು ಹೈಡ್ರೋಜನ ಮತ್ತು ಪ್ರಾಣವಾಯುಮಯವಾಗಿದ್ದುವು. (೩) ಆ ಜಡಕ್ಕೆ ಆಕಾರವಿರಲಿಲ್ಲ. ಅದು ಬ್ರಹ್ಮಾಂಡವನ್ನೆಲ್ಲ ಸಂಪೂರ್ಣವಾಗಿ ವ್ಯಾಪಿಸಿಬಿಟ್ಟಿತ್ತು. (೪) ಆ ಅಖಂಡವಾದ ಜಡದೊಳಗೆ ನಿಸರ್ಗಸಿದ್ಧವಾದ ಗತಿಯು ಕಾಣಿಸಿಕೊಂಡಿತು. ಯಾಕೆಂದರೆ ಈ ಜಡವು ಆರಂಭ ದಿಂದಲೇ ಅಸ್ಥಿರವಾಗಿ ಚಂಚಲವಾಗಿತ್ತು. ಅದು ಎಲ್ಲ ಕಡೆಗೂ ಬೇರೆ ಬೇರೆ ವೇಗಗಳಿಂದ ಚಲಿಸುತ್ತಿತ್ತು. (ಇದು ಹೀಗೆಯೇ ಏಕಾಗಬೇಕೆಂಬುದಕ್ಕೆ ವಿಕಾಸ ವಾದಿಗಳು ಏನೊಂದೂ ಉತ್ತರವನ್ನು ಕೊಡಲಾರರು. ಅದು ಅನಾದ್ಯನಂತವೆಂದೇ ಅವರ ನಂಬುಗೆ. ) (೫) ಇದರಿಂದ ಒಂದು ಮಧ್ಯವರ್ತಿ ವಸ್ತುವು ಜನಿಸಿ, ಅದರ ಸುತ್ತಲೂ ವಿಧವಿಧವ ಸ್ಥಿತಿಗಳಲ್ಲಿರುವ ಸೂರ್ಯಮಾಲೆಗಳೂ ಗ್ರಹಮಾಲೆಗಳೂ ಹುಟ್ಟಿದುವು. ಎಂದರೆ ಈ ರೀತಿಯಾಗಿ ವಿಶ್ವದೊಳಗಿನ ಜಡಶಕ್ತಿಗಳು ಒಂದೇಸವನೆ ರೂಪಾಂತರವನ್ನು ಅಥವಾ ಸ್ಥಾನಾಂತರವನ್ನು ಹೊಂದುತ್ತಿದ್ದುವು. ಮತ್ತು ಈ ಜಡದ ಪರಮಾಣುಗಳೇ ಬೇರೆ ಬೇರೆ ರೂಪಗಳನ್ನು ಹೊಂದುತ್ತ ಹೊಂದುತ್ತ, ಆರಂಭಕ್ಕಿದ್ದ ಒಂದೇ ಜಡದಿಂದ ಹಲವು ವಸ್ತುಗಳ ಉತ್ಪತ್ತಿಯಾಯಿತು. ಸಾದೃಶ್ಯ ದಿಂದ ಅಸಾದೃಶ್ಯವೂ, ಸುಲಭತೆಯಿಂದ ಸಂಕೀರ್ಣತೆಯೂ, ಏಕತ್ವದಿಂದ ಬಹು ತ್ವವೂ ಹುಟ್ಟಿದವು (೬) ಆ ಸೂರ್ಯಮಾಲೆಗಳೊಳಗೊಂದರಿಂದ ನಮ್ಮ ಪೃಥ್ವಿಯೂ ನಾವು ನೋಡುವ ಗ್ರಹಗಳೂ ಸಿಡಿದು ಬಿದ್ದವು. (೭) ನಮ್ಮ ಪೃಥ್ವಿಯು ಆಗ ಅತ್ಯುಷ್ಣಸ್ಥಿತಿಯಲ್ಲಿತ್ತು. (೮) ಅದು ಕ್ರಮೇಣ ಆರುತ್ತಾರುತ್ತ ಹೋಗಲು ಅದರಲ್ಲಿ ನೀರಿನ ಉತ್ಪತ್ತಿಯಾಯಿತು. (೯) ಆ ಮೇಲೆ ಆ ನೀರಿನಲ್ಲಿ ಜೀವನಾದಿ ರಸವು ಆವಿರ್ಭವಿಸಿತು. (೧೦) ಈ ರಸದಿಂದ ಜೀವಕೋಶಗಳು (Cells) ಹುಟ್ಟಿದವು. (೧೧) ಇವುಗಳಿಂದಲೇ ಮುಂದೆ ಪ್ರಾಣಿಗಳೂ ವನಸ್ಪತಿ ಗಳೂ ಹುಟ್ಟಿದವು. (೧೨) ಮೊದಲು "ಮಾನೀರಾ" ಎಂಬ ಪ್ರಾಣಿಯೂ, ಆ ಮೇಲೆ "ಜೆಲಿಫಿಶ್" ಎಂಬ ಮೀನವೂ, ಆ ಮೇಲೆ ದ್ವಿಚರ (ಏಡಿ, ಕಪ್ಪೆ ಮೊದ ಲಾದ ) ಪ್ರಾಣಿಗಳೂ ಉದಯಕ್ಕೆ ಬಂದವು. (೧೩) ಅವುಗಳಿಂದ ಉರಗ ಮನವೆಂದರೆ ಹಾವಿನ ಜಾತಿಯ ಪ್ರಾಣಿಗಳೂ, ಅವುಗಳಿಂದ ಪಕ್ಷಿಗಳೂ ಬೆನ್ನಿಲು

ಉತ್ಕ್ರಾಂತಿಯ ರೂಪರೇಷೆಗಳು

ಬುಳ್ಳ ಪ್ರಾಣಿಗಳೂ ಜನಿಸಿದವು. ಆ ಮೇಲೆ ಸಸ್ತನ ಪ್ರಾಣಿಗಳೂ ಅವುಗಳಿಂದ ಜರಾಯುಜಗಳೂ, ಅಲ್ಲಿಂದ ಮಾಸ (ಹಡೆದ ನಂತರ ಕೆಲವುಕಾಲದ ಮೇಲೆ ಹೊರಗೆಬರುವ ಒಂದು ಚೀಲ)ವುಳ್ಳ ಪ್ರಾಣಿಗಳೂ ಕ್ರಮವಾಗಿ ಅಸ್ತಿತ್ವದಲ್ಲಿ ಬಂದಿರಬೇಕು. ಆದರೆ ಇವು ಒಂದರಿಂದೊಂದು ಸರಳರೇಷೆಯಲ್ಲಿಯೇ ಹುಟ್ಟುತ್ತ ಹೋದವೆಂದು ತಿಳಿಯುವುದು ತಪ್ಪಾಗದಿರದು. ಇಂತಹ ರೀತಿಯಿಂದಲೇ ಇವು ಬೆಳೆದಿರಬೇಕೆಂಬುದನ್ನು ಯಾವನೂ ನಿರ್ಧರಿಸಿ ಹೇಳಲಾರನು. ಸರ್ವಸಾಧಾರಣವಾಗಿ ಈ ರೀತಿಯಿಂದ ಉತ್ಕ್ರಾಂತಿಯಾಗಿರಬೇಕೆಂದು ತಿಳಿಸುಬಹುದು. (೧೪) ಮನುಷ್ಯನು ಇದೇ ಉತ್ಕ್ರಾಂತಿವೃಕ್ಷದ ಕಡೆಯ ಟೊಂಗೆಯೆಂದು ನಿರ್ಭಯದಿಂದ ಹೇಳಬಹುದು. (೧೫) ಹೀಗೊಮ್ಮೆ ಮನುಷ್ಯನ ಜನನವಾದಮೇಲೆ ಕ್ರಮವಾಗಿ ಅವನ ಶಾರೀರಿಕ, ಮಾನಸಿಕ, ನೈತಿಕ, ಧಾರ್ಮಿಕ, ಆರ್ಥಿಕ, ರಾಜನೈತಿಕ ಮೊದಲಾದ ಹಲವು ತರಪ ಬೆಳೆವಣಿಗೆಯು ಆಗುತ್ತಾಗುತ್ತ, ಅವನು ಸದ್ಯದ ಸ್ಥಿತಿಗೆ ಬಂದು ಮುಟ್ಟಿರುವನು. ಈ ರೀತಿಯಿಂದ ನಮ್ಮ ಪೃಥ್ವಿಯ ಇತಿಹಾಸವು ಯಾಂತ್ರಿಕ ರೀತಿಯಿಂದ ಹೇಳಲ್ಪಟ್ಟದ್ದಾಯಿತು. ವಿಶ್ವದೊಳಗಿನ ಆಧುನಿಕ ಸಂಗತಿಗಳೆಲ್ಲ ಮೂಲತಃ ಏಕಮಾತ್ರವಾದ ತೇಜೋಮೇಘಗಳಿಂದಲೇ ಕ್ರಮಶಃ ಕಾಲಾವಧಿಯಿಂದ ಹುಟ್ಟಿದವೆಂದು ನಿಷ್ಪನ್ನವಾದಂತಾಯಿತು. (೧೬) ಈ ಉತ್ಕ್ರಾಂತಿಯು ಇಲ್ಲಿಗೇ ನಿಲ್ಲಲಾರದು. ಇದು ಹೀಗೆಯೇ ಮುಂದೆ ಸಾಗತಕ್ಕದ್ದು. ಇನ್ನು ಮುಂದೆ ಯಾವ ತರದ ಪ್ರಾಣಿಗಳು ಹುಟ್ಟಬಹುದೆಂಬುದನ್ನು ಇಂದೇ ನಿರ್ಧರಿಸಿ ಹೇಳುವುದು ಶಕ್ಯವಿಲ್ಲ. ಕಾಲಾಂತರದಿಂದ ಮನುಷ್ಯನ ಶರೀರ ರಚನೆಯು ಎಷ್ಟೋ ಅಂಶಗಳಲ್ಲಿ ಭಿನ್ನವಾಗಬಹುದೆಂದೂ, ಅವನ ನೀತಿ, ಧರ್ಮ, ರಾಜಧರ್ಮಶಾಸ್ತ್ರ, ತತ್ವಜ್ಞಾನಗಳಾದರೂ ಅದಕ್ಕನುಸರಿಸಿಯೇ ಭಿನ್ನವಾಗುತ್ತ ಹೋಗುವವೆಂದೂ ಸ್ಪೆನ್ಸರನು ಹೇಳುತ್ತಾನೆ. (೧೭) ಆದರೆ ಪೃಥ್ವಿಯೊಳಗಿನ ಉಷ್ಣತೆಯೆಲ್ಲ ಆರಿಹೋಗಿ, ಅದು ಪೂರಾ ತಣ್ಣಗಾಯಿತೆಂದರೆ ಅದರ ಮೇಲೆ ಪ್ರಾಣಿಗಳು ಬದುಕಿರುವುದು ಶಕ್ಯವಿಲ್ಲದ್ದರಿಂದ, ಜೀವ ಸೃಷ್ಟಿಯು ಸಂಪೂರ್ಣವಾಗಿ ನಾಶವಾಗುವದು ಇಷ್ಟೇ ಅಲ್ಲ; ಅದು ಪೂರ್ವವತ್ ತನ್ನ ಜನಕನಾದ ಸೂರ್ಯನೊಳಗೆ ಕೂಡಿಕೊಂಡು ಲಯವಾಗಿ ಹೋಗುವುದು. ಹೀಗೆ ತಣ್ಣಗಾದ ಖಗೋಲಗಳು ಕೂಡಲಾರಂಭಿಸುವವು. ಆದರೆ ಅವು ಸಂಯೋಗವನ್ನು ಹೊಂದುವಕಾಲಕ್ಕೆ ಭಯಂಕರವಾದ ತಿಕ್ಕಾಟವಾಗಿ, ಅದರಿಂದ ಹೊಸ ಉಷ್ಣತೆಯು ಆವಿರ್ಭವಿಸಿ, ಹೊಸ ಜಗತ್ತು ಸೃಷ್ಟಿಯಾಗಲಿಕ್ಕೆ ಅನುಕೂಲವಾಗುವುದು. ಇದು ನಮ್ಮ ಸೂರ್ಯ

ಮಾಲೆಗಷ್ಟೆ ಸಂಬಂಧಿಸಿದೆಯುಂತಲ್ಲ; ಈ ತರದ ಉತ್ಕ್ರಾಂತ್ಯವಕ್ರಾಂತಿಗಳು ಇಡೀ ಬ್ರಹ್ಮಾಂಡದ ನಿಯಮವೆಂದೇ ಹೇಳಬಹುದು. (೧೮) ಈ ಬ್ರಹ್ಮಾಂಡ ದೊಳಗೆ ನಮ್ಮ ಪೃಥ್ವಿಯ ಮೇಲಿನಂತಹ ಉತ್ಕ್ರಾಂತ್ಯವಕ್ರಾಂತಿಗಳು ಅನಂತ ವಾಗಿರುವವು. ಕಿಂಬಹುನಾ, ಪ್ರತಿಯೊಂದು ಖಗೋಳದ ಮೇಲೆ ಇವುಗಳ ಪರಿ ಣಾಮವಾಗಿರಲೇಬೇಕೆಂದು ತಿಳಿಯಬೇಕಾಗುವುದು. ಮತ್ತು ಅಪಾರವಾದ ಆಕಾಶ ದೊಳಗೆ ನಮ್ಮಂತಹ ಅಸಂಖ್ಯವಾದ ಸೂರ್ಯಮಾಲೆಗಳೂ ಗ್ರಹಮಾಲೆಗಳೂ ಇರುವವೆಂಬುದು ಪ್ರಸಿದ್ಧವೇ ಇದೆ. (೧೯) ಹೀಗೆ ಒಂದು ಭಾಗದಲ್ಲಿ ಉತ್ಕ್ರಾಂತಿ ಯಾಗುತ್ತ ನಡೆದಿದ್ದರೆ, ಮತ್ತೊಂದೆಡೆಗೆ ಅವಕ್ರಾಂತಿಯಾಗುತ್ತಿರಬಹುದು. ಅಥವಾ ಅದರ ವಿರುದ್ಧ ಸ್ಥಿತಿಯು ಅಲ್ಲಿ ಉತ್ಪನ್ನವಾಗಿರಬಹುದು. ಇದರ ಮೇಲಿಂದ ಒಂದೇಕಾಲಕ್ಕೆ ಹಲವು ಉತ್ಕ್ರಾಂತ್ಯವಕ್ರಾಂತಿಗಳು ಈ ಬ್ರಹ್ಮಾಂಡದಲ್ಲಿ ಪ್ರತಿ ಕ್ಷಣಕ್ಕೂ ಆಗುತ್ತಿರುವವೆಂದು ತಿಳಿದರೆ ತಪ್ಪಗಲಾರದು. (೨೦) ಈ ಉತ್ಕ್ರಾಂತ್ಯವ ಕ್ರಾಂತಿಗಳ ನಿಯಮವು ಅನಾದ್ಯನಂತವಾಗಿರುವುದು. ಇದು ಜಡಶಕ್ತಿಗಳ ಗುಣ ಧರ್ಮಗಳ ಪರಿಣಾಮವೆಂದು ಹೇಳಬಹುದು. ಜಡವು ತನ್ನ ಮೂಲಶಕ್ತಿಯಿಂದ ಎಲ್ಲ ಕಡೆಗೂ ಚಲಿಸುತ್ತಿರುವುದು. ಇದರಿಂದ ಜಡದ ಸ್ಥಾನಾಂತರ ರೂಪಾಂತರ ಗಳು ಸಂಭವಿಸುವವು. ಈ ಸ್ಥಾನಾಂತರ ಮತ್ತು ರೂಪಾಂತರಗಳ ಫಲವೆಂದೇ ಉತ್ಕ್ರಾಂತ್ಯವಕ್ರಾಂತಿಗಳು, ಈ ವಿಶ್ವದಲ್ಲಿ ಅನಾದಿಕಾಲದಿಂದಲೂ ಚಕ್ರನೇಮಿ ಕ್ರಮೇಣ ತಿರುಗುತ್ತಿರುತ್ತವೆ. ಇವಕ್ಕೆ ಬೇಕಾದ ಕಾಲಾವಧಿಗಳನ್ನು ಮನುಷ್ಯ ಕಲ್ಪಿತ ಮಾಪುಗಳಿಂದ ಅಳೆಯುವುದು ಅಶಕ್ಯಕೋಟಿಯೊಳಗಿನ ಮಾತೇ ಸರಿ ಯೆಂಬುದು ನಿರ್ವಿವಾದವದೆ. (೨೧) ಇವೆಲ್ಲವುಗಳ ಹಿಂದೆ ಏನಿರುವುದೆಂಬುದು ಮಾತ್ರ ನಮಗೆ ತಿಳಿಯುವುದು ಎಂದಿಗೂ ಶಕ್ಯವಿಲ್ಲ. ಈ ಮೂಲ ಜಡವು ಎಲ್ಲಿಂದ ಬಂತು, ಶಕ್ತಿಯು ಎಲ್ಲಿಂದ ಬಂತು, ಅದನ್ನಾರು ಹುಟ್ಟಿಸಿದರು, ಅದರ ನಿಯಮ ಗಳನ್ನಾರು ವಿಧಿಸಿದರು, ಇತ್ಯಾದಿ ಪ್ರಶ್ನೆಗಳು ನಿರುತ್ತರವಾಗಿರುವವು. ಇವೆಲ್ಲವು ಗಳ ಹಿಂದೆ ಅಜ್ಞೇಯವಾದುದೊಂದು ತತ್ತ್ವವಿರುವುದೆಂದೂ, ಅದೇ ಬಹುಶಃ ಧಾರ್ಮಿಕರ ದೇವರಾಗಿರಬೇಕೆಂದೂ ಸ್ಪೆನ್ಸರ ಸಾಹೇಬರು ಸ್ಪಷ್ಟವಾಗಿ ಒಡಂಬಟ್ಟಿ ದ್ದಾರೆ. ಎಂದಮೇಲೆ ಈ ಸಂಸಾರ ನಾಟಕಕ್ಕೆಲ್ಲ ದೇವಾಧಿದೇವನೇ ಮೂಲನಾಗಿ ರುವನೆಂಬುದನ್ನು ಸ್ಪೆನ್ಸರ ಸಾಹೇಬರೂ ಒಂದು ರೀತಿಯಿಂದ ಒಪ್ಪಿಕೊಂಡಂತಾ ಗುವುದಿಲ್ಲವೇ ?

---

## ೪

# ವಿಶ್ವದ ಉತ್ಪತ್ತಿ

ಈ ವಿಶ್ವದ ಗತಾಯುಷ್ಯದ ಬಗ್ಗೆ ಮೂರು ತರದ ಅಭಿಪ್ರಾಯಗಳು

ಈ ಸೃಷ್ಟಿಯ ಗತಾಯುಷ್ಯದ ಬಗ್ಗೆ ಐತಿಹಾಸಿಕ ಪದ್ಧತಿಯಂತೆ ಚಿಕಿತ್ಸಾಪೂರ್ವಕವಾಗಿ ವಿಚಾರಮಾಡಹತ್ತಿದರೆ, ಒಟ್ಟಿನಮೇಲಿಂದ ಮೂರು ತರದ ಭಿನ್ನಾಭಿಪ್ರಾಯಗಳಿರುವವೆಂದು ಕಂಡುಬರುವುದೆಂದು ಹಕ್ಸಲೀ ಸಾಹೇಬರು ಹೇಳುತ್ತಾರೆ. (Lectures on Evolution New York 1876 ) ಈ ಸೃಷ್ಟಿಯು ವಸ್ತುತಃ ಅಸೃಷ್ಟವಿದ್ದು, ಅನಾದಿಕಾಲದಿಂದಲೂ ಅದು ಹಾಗೆಯೇ ಇರುವುದೆಂದು ಮೊದಲನೆಯ ಪಂಥದವರ ಅಭಿಪ್ರಾಯ. ಎಂದರೆ ಇಂದು ಈ ಜಗತ್ತು ಯಾವ ಪ್ರಕಾರವಾಗಿ ನಮಗೆ ಗೋಚರವಾಗುವುದೋ, ಅದೇ ತರದಿಂದ ಅದು ಅನಂತಕಾಲದಿಂದಲೂ ನಡೆದುಕೊಂಡುಬಂದಿರುವುದು. ಪಶು, ಪಕ್ಷಿ, ಮನುಷ್ಯ ಮೊದಲಾದ ಎಲ್ಲ ಪ್ರಾಣಿವರ್ಗಗಳೂ ಎಂದಿನಿಂದಲೂ ಇದ್ದಕ್ಕಿದ್ದಂತೆಯೇ ಇವೆ. ಆ ಕಾಲದಲ್ಲಿ (ಎಂದರೆ ಪ್ರಾಚೀನಕಾಲದಲ್ಲಿ) ಇದ್ದ ಪ್ರಾಣಿಗಳು ಈಗಿನ ಪ್ರಾಣಿಗಳ ಪೂರ್ವಜರಾಗಿದ್ದು ಅವಾದರೂ ಈಗಿನವುಗಳಂತೆಯೇ ಇದ್ದವೆಂದೆನ್ನಲಿಕ್ಕೆ ಅಡ್ಡಿಯಿಲ್ಲ. ವನಸ್ಪತಿಗಳಾದರೂ ಈ ನಿಯಮಕ್ಕೆ ಅಪವಾದವಲ್ಲ. ಎಂದರೆ ಆಗಿನ ವನಸ್ಪತಿಗಳಾದರೂ ತುಸು ಹೆಚ್ಚುಕಡಿಮೆ ಈಗಿನಂತೆಯೇ ಇದ್ದವು. ಮತ್ತು ಪರ್ವತಗಳೂ, ಬೈಲುಗಳೂ, ನದಿ-ಸಾಗರ ಮೊದಲಾದ ಜಲಾಶಯಗಳೂ ಈಗಿನವುಗಳ ಸ್ಥೂಲ ಆಕಾರವನ್ನೇ ತೋರಿಸಬಹುದಾಗಿತ್ತು. ಈ ದೃಷ್ಟಿಯಿಂದ ನೋಡಿದರೆ ಒಂದು ವರ್ಗದ ಪ್ರಾಣಿಗಳಿಂದ ಬೇರೊಂದು ವರ್ಗದ ಪ್ರಾಣಿಗಳ ಉತ್ಪತ್ತಿಯಾಗಿಲ್ಲ. ಆದರೆ ನದಿ, ಸಮುದ್ರ, ಪರ್ವತ ಮೊದಲಾದವುಗಳಲ್ಲಿ ತಿಲಮಾತ್ರದಷ್ಟು ಬದಲಾವಣೆಗಳಾಗಿಲ್ಲವೆಂದು ಇದರ ಅರ್ಥವಲ್ಲ; ಇಂತಹ ಕಿರುಕುಳ ಹೆಚ್ಚು ಕಡಿಮೆಗಳನ್ನು ಬದಿಗಿರಿಸಿದರೆ ಈ ಜಗತ್ತು ಮೊದಲಿನಿಂದಲೂ ಹಾಗೆಯೇ ಇರುವುದೆಂದು ಹೇಳಬಹುದು. ಮತ್ತು ಸೃಷ್ಟಿಯ ಉತ್ಪತ್ತಿ ಸ್ಥಿತಿ ಲಯಗಳು ಚಕ್ರಾಕಾರದಲ್ಲಿ ಮತ್ತೆ ಮತ್ತೆ ಘಟಿಸುತ್ತವೆಂದೆನ್ನುವ ಜನರ ಪಂಥವನ್ನು ಇದರೊಳಗೇ ಸೇರಿಸಬಹುದು. ಯಾಕೆಂದರೆ ಈ ದೃಷ್ಟಿಯಿಂದಲೂ ಬೈಬಲ್ಲಿನ ಮತವು ಜೊಳ್ಳೆಂದು ಸಿದ್ಧವಾಗುತ್ತಿದ್ದು, ಅಪಾರವಾದ ಕಾಲಚಕ್ರಗಳಲ್ಲಿ

ಸೃಷ್ಟಿಯ ನಾಟಕವು ಮುಗಿಯುವುದೆಂದು ಇದರ ಅರ್ಥವಾಗುವುದು. ಇವರ ಮೇಲಿಂದ, ಹಿಂದೂ ಜನರಲ್ಲಿ ರೂಢವಿದ್ದ ಬ್ರಹ್ಮನ ಕಲ್ಪನೆಯೂ, ಮನ್ವಂತರಗಳ ಕಲ್ಪನೆಯೂ, ಯುಗ ಮಹಾಯುಗಗಳ ಕಲ್ಪನೆಯೂ ಈ ಮೊದಲನೆಯ ಶಾಖೆಯವರಲ್ಲಿಯೇ ಅಂತರ್ಭೂತವಾಗುವವೆಂಬುವುದು ಸ್ಪಷ್ಟವಿದೆ. ಅದ್ವೈತಿಗಳು ಹೇಳುವಂತೆ ಈ ಜಗತ್ತು ವಸ್ತುತಃ ಅಧ್ಯಸ್ತವೇ ಇರಲಿ, ಅಥವಾ ಬೇರೆ ಕೆಲವರು ಹೇಳುವಂತೆ ಅದು ಮೂಲ ವಸ್ತುವಿನ ಪರಿಣಾಮವೇ ಇರಲಿ, ಅಥವಾ ಇನ್ನೂ ಕೆಲವರು ಹೇಳುವಂತೆ ಅದು ಸೃಷ್ಟವೇ ಇರಲಿ, ಇವೆಲ್ಲ ಉಪಶಾಖೆಗಳು ಈ ವಾದದಲ್ಲಿಯೇ ಬರುವವೆಂದೆನ್ನಬಹುದು. ಕ್ರಮೇಣವಾಗಿ ಒಂದೇ ಮೂಲ ಜಡ ದ್ರವ್ಯದಿಂದ ಯಾಂತ್ರಿಕ ರೀತಿಯಲ್ಲಿ ವಿಕಾಸವಾಗುತ್ತಹೋಗಿ ಈಗಿನ ಭವ್ಯವಾದ ಜಗನ್ನಾಟಕವು ಆವಿರ್ಭವಿಸಿರುವುದು ಸುಳ್ಳೆಂದು ಹೇಳುವುದೇ ಇವೆಲ್ಲ ಪಂಥದವರಿಗೆ ಸಾಮಾನ್ಯವಾದ ಮಾತು.

ಬೈಬಲ್ಲಿನ ಅಭಿಪ್ರಾಯವು

ಎರಡನೆಯ ಶಾಖೆಯವರ ಅಭಿಪ್ರಾಯದಂತೆ ಪೃಥ್ವಿಯ ಹುಟ್ಟು ಬಹಳ ಪ್ರಾಚೀನವಲ್ಲ. ಸುಮಾರು ನಾಲ್ಕೆಂಟು ಸಾವಿರ ವರುಷಗಳ ಹಿಂದೆ ಈ ಜಗತ್ತು ಒಮ್ಮೆಲೇ ಅಸ್ತಿತ್ವದಲ್ಲಿ ಬಂತು. ಜಗತ್ತಿನ ಹುಟ್ಟಿಗೂ ಅದರ ಮೊದಲಿನ ಸ್ಥಿತಿಗೂ ಯಾಂತ್ರಿಕತನದ ಕಾರ್ಯ ಕಾರಣ ಸಂಬಂಧವಿಲ್ಲ. (Mechanical Causation) ಎಂದರೆ ದೇವರು ಶೂನ್ಯದೊಳಗಿಂದ ಈ ಜಗತ್ತನ್ನು ತನ್ನ ಸಂಕಲ್ಪ ಮಾತ್ರದಿಂದಲೇ ಹುಟ್ಟಿಸಿದನು. ಅವನು ಸರ್ವತಂತ್ರಸ್ವತಂತ್ರನಿದ್ದುದರಿಂದ ಅವನಿಗೆ ಯಾವ ವಸ್ತುಗಳ ಅವಶ್ಯಕತೆಯೂ ಇರಲಿಲ್ಲ. ಇದನ್ನೆಲ್ಲ ಮನುಷ್ಯನ ಮನಸ್ಸು ಒಪ್ಪುವಂತೆ ಹೇಳಿಕೊಡುವುದು ಕಠಿಣವಾಗುವುದು ಸಹಜವಿದೆ. ಸಾಂತವಾದ ಮಾನವಬುದ್ಧಿಯು ಅನಂತನಾದ ದೇವರ ಲೀಲೆಗಳನ್ನು ಯಥಾರ್ಥವಾಗಿ ತಿಳಿಯಲಾರದೆಂಬುದೇ ಅದಕ್ಕೆ ಕಾರಣವು. ಆದರೂ ಬೈಬಲ್ಲಿನಲ್ಲಿ ಹೇಳಿದ ಸೃಷ್ಟಿಕ್ರಮವು ಸತ್ಯವೆಂದು ವಿಶ್ವಾಸವಿಡಬೇಕು. ಎಂದರೆ ಮಾತ್ರ ನಮಗೆ ಸದ್ಗತಿಯ ಆಸೆಯು! ಇರಲಿ, ಬೈಬಲ್ಲಿನ ಸೃಷ್ಟಿಕ್ರಮವನ್ನೆ ಪ್ರಸಿದ್ಧ ಕವಿಯಾದ ಮಿಲ್ಟನ್ನನು ತನ್ನ ಪ್ರಚಂಡವಾದ "ಸ್ವರ್ಗವನ್ನು ಕಳಕೊಂಡದ್ದು" (Paradise Lost) ಎಂಬ ಕಾವ್ಯದಲ್ಲಿ ಅನುಪಮವಾಗಿ ವರ್ಣಿಸಿದ್ದಾನೆ. ಅವನಿಂದಲೇ ಈ ವಿಚಾರವು ಜನರ ಹೃದಯವನ್ನು ಆಕರ್ಷಿಸಿಕೊಂಡಿತೆಂದೂ ಹೇಳಬಹುದು.

ಬೈಬಲ್ಲಿನ ಪ್ರಾರಂಭದಲ್ಲಿಯೇ "Genesis" ಎಂಬರೆ ಸೃಷ್ಟಿಯೆಂಬುದೊಂದು ಭಾಗವಿದೆ. ಅದರಲ್ಲಿ ಈ ವಿಶ್ವದ ಉತ್ಪತ್ತಿಯು ಹೇಗಾಯಿತೆಂಬುದನ್ನು ವರ್ಣಿಸಿದೆ. ೨೪ ತಾಸಿನ ೬ ದಿವಸಗಳಲ್ಲಿ ಸೃಷ್ಟಿಕಾರ್ಯವೆಲ್ಲ ಮುಗಿಯಿತೆಂದೂ, ಅದು ಒಂದು ಕ್ರಮನಿಶ್ಚಿತವಾದ ಪದ್ಧತಿಯಲ್ಲಿಯೇ ಆಯಿತೆಂದೂ ಅಲ್ಲಿಯೇ ವರ್ಣನೆಯಿದೆ. ಮೊದಲನೆಯ ದಿವಸ ದೇವರು ಪ್ರಕಾಶವನ್ನುಹುಟ್ಟಿಸಿದನು. ಎಲ್ಲ ಕಡೆಗೂ ಕತ್ತಲೆಯು ವ್ಯಾಪಿಸಿದ್ದರಿಂದ ಮೊದಲು ದೇವರು ಪ್ರಕಾಶವನ್ನು ಹುಟ್ಟಿಸಬೇಕಾಯಿತು. ಜಗತ್ತು ಆಗ ಶೂನ್ಯವಾಗಿ ಆಕಾರ ರಹಿತವಾಗಿತ್ತು. ಎರಡನೆಯ ದಿವಸ ಆಕಾಶವನ್ನು ಹುಟ್ಟಿಸಿ, ಅದರಿಂದ ಮೇಲಿನ ಕೆಳಗಿನ ನೀರನ್ನು ವಿಭಾಗಿಸಿದನು. ಮೂರನೆಯ ದಿವಸ ನೀರೆಲ್ಲ ಒಟ್ಟಾರೆಯಾಗಿ ನಿಂತೊಡನೆ ಒಣನೆಲವು ಕಾಣಿಸಿಕೊಂಡಿತು. ದೇವರಪ್ಪಣೆಯಂತೆ ಅದರ ಮೇಲೆ ಹುಲ್ಲೂ, ವನಸ್ಪತಿಗಳೂ, ಹಣ್ಣಿನ ಗಿಡಗಳೂ ತೋರಹತ್ತಿದವು. ಆ ಮೇಲೆ ದೇವರು ನಾಲ್ಕನೆಯ ದಿವಸ ಸೂರ್ಯ ಚಂದ್ರ ನಕ್ಷತ್ರಗಳನ್ನೂ ಗ್ರಹಗಳನ್ನೂ ಹುಟ್ಟಿಸಿ ಹಗಲುರಾತ್ರಿಗಳನ್ನು ಮಾಸ, ಋತು, ಅಯನ, ಸಂವತ್ಸರಗಳನ್ನು ಹುಟ್ಟಿಸಿದನು. ಐದನೆಯ ದಿವಸ ಜಲಚರ ಪ್ರಾಣಿಗಳೂ ಪಕ್ಷಿಗಳೂ ಹುಟ್ಟಿದವು. ಆರನೆಯ ದಿವಸ ದನಕರುಗಳು, ಹರಿದಾಡುವ ಪ್ರಾಣಿಗಳು, ವನ್ಯಪಶುಗಳು, ಮತ್ತು ಸದ್ಯಕ್ಕೆ ಜಗತ್ತಿನ ಮೇಲೆ ಕಂಡು ಬರುವ ಉಳಿದ ಪ್ರಾಣಿಗಳೂ ಜನಿಸಿದವು. ಆಗ ದೇವರು "ನನ್ನ ರೂಪದಂತೆಯೇ ಇರುವ ಮನುಷ್ಯನನ್ನು ಹುಟ್ಟಿಸುವ" ಎಂದು ಸಂಕಲ್ಪಮಾಡಿದನು. ಕೂಡಲೆ ಮಣ್ಣಿನ ಗೊಂಬೆಯೊಂದನ್ನು ಮಾಡಿ ಅದರಲ್ಲಿ ಪ್ರಾಣವನ್ನೂದಿದೊಡನೆ ಮನುಷ್ಯ ಪ್ರಾಣಿಯು ಕಾಣಿಸಿಕೊಂಡಿತು. ಅದಕ್ಕೇ ಕ್ರಿಸ್ತರು "ಆಡಮ್" ಎಂದು ಹೆಸರು ಕೊಟ್ಟಿದ್ದಾರೆ. ಆಡಮ್ಮನದೊಂದು ಪಕ್ಕೆಲುಬಿನಿಂದ ಅವನಿಗೆ ಹೆಂಡತಿಯಾಗ ಬೇಕಾದ "ಈವ್ಹ"ನ್ನು ದೇವರು ಸೃಜಿಸಿದನು. ಆ ಗಂಡಹೆಂಡರಿಗಾಗಿ ದೇವರು "ಈಡನ್" ಎಂಬ ತೋಟವನ್ನು ನಿರ್ಮಾಣಮಾಡಿ ನೀವಿಲ್ಲಿ ವಾಸಿಸಬಹುದೆಂದು ಹೇಳಿದನು. "ನೀವು ಈ ಜಗತ್ತಿನ ಮೇಲಿದ್ದು ಅದನ್ನು ಚೆನ್ನಾಗಿ ಆಳಬೇಕು. ಮತ್ತು ನೀವಿಬ್ಬರೂ ಕೂಡಿ ಮನುಷ್ಯಪ್ರಜೆಯನ್ನೂ ಬೆಳಿಸಬೇಕು. ನಿಮ್ಮ ಸುಖಕ್ಕಾಗಿಯೇ ನಾನು ಎಲ್ಲ ಪ್ರಾಣಿಗಳನ್ನೂ, ವನಸ್ಪತಿ ಮೊದಲಾದವುಗಳನ್ನೂ ಗಿರಿ ಸಮುದ್ರಾದಿಗಳನ್ನೂ ಹುಟ್ಟಿಸಿರುವೆನು. ನೀವೇ ಈ ಜಗತ್ತಿನ ವಸ್ತುಗಳಿಗೆಲ್ಲ ಬೇರೆ ಬೇರೆ ಹೆಸರುಗಳನ್ನು ಕೊಟ್ಟು ನಿಮ್ಮ ವ್ಯವಹಾರವನ್ನು ನಡಿಸಬೇಕು" ಎಂದು ದೇವರೇ ಆಗ ಬೋಧಿಸಿದನು. ಹೀಗೆ ಆರು ದಿವಸಗಳ ವರೆಗೆ ಶ್ರಮಬಟ್ಟ

ಮೇಲೆ ವಿಶ್ವಜನಿಯ ಕಾರ್ಯವು ಮುಗಿದೊಡನೆ ದೇವರಿಗೆ ವಿಶ್ರಾಂತಿಯು ಬೇಕಾದ್ದರಿಂದ, ಏಳನೆಯ ದಿವಸ ದೇವರು ಸುಖವಾಗಿ ವಿಶ್ರಮಿಸಿಕೊಂಡನು. ಎಂತೆಯೇ ನಾವೆಲ್ಲರೂ ರವಿವಾರ ದಿವಸ ರಜೆಯನ್ನನುಭವಿಸುವುದು !

ವಿಕಾಸವಾದವೇ ಮೂರನೆಯ ಅಭಿಪ್ರಾಯವು.

ಮೂರನೆಯ ಅಭಿಪ್ರಾಯವೆಂದರೇ ವಿಕಾಸವಾದವು. ನಾವು ಹಿಂದು ಹಿಂದಿನ ಕಾಲಕ್ಕೆ ಹೋದಹೋದಂತೆ ಸದ್ಯಕ್ಕಿನ ವಸ್ತುಗಳ ಸ್ಥಿತಿಗೆ ತುಸು ತುಸು ಭಿನ್ನವಾದ ವಸ್ತುಸ್ಥಿತಿಯು ಕಾಣುತ್ತ ಹೋಗುತ್ತದೆ. ಮತ್ತು ಈ ಕ್ರಮೇಣವಾದ ಮಾರ್ಪಾಟುಗಳಲ್ಲಿ ಯಾಂತ್ರಿಕತನದ ಕಾರ್ಯಕಾರಣಭಾವವಾದರೂ ತಪ್ಪದೇ ದೃಗ್ಗೋಚರವಾಗುವುದು. ಸೃಷ್ಟಿನಿಯಮಗಳಲ್ಲಿ ಬೇಕುಬೇಕಾದಾಗ ಕೈಹಾಕುವ ಸೃಷ್ಟಿಕರ್ತನ ಕಲ್ಪನೆಯು ಈ ಅಭಿಪ್ರಾಯದವರಿಗೆ ಎಳ್ಳಷ್ಟಾದರೂ ಸರಿಬೀಳದು. ಪರ್ವತಗಳೂ, ನದಿಗಳೂ, ಬೈಲುಗಳೂ, ಸಾಗರಗಳೂ ಹಿಂದು ಹಿಂದಕ್ಕೆ ಹೋದಂತೆ ಬದಲಾಗುತ್ತ ಹೋಗಿ ಕಡೆಗೆ ಅವ್ಯಕ್ತವಾದುದೊಂದು ತೇಜೋಮೇಘಗಳ ಗುಂಪಲ್ಲದೆ ಬೇರೊಂದು ವಸ್ತುವು ಕಾಣಿಸದಂತಾಗುತ್ತದೆ. ಹಿಂದುಹಿಂದಿನ ಜೀವರೂಪಗಳನ್ನು ನೋಡುತ್ತ ಹೋದಂತೆ ಈಗಿನ ಜೀವರೂಪಗಳನ್ನೇ ಕಾಣದೆ ಅವಕ್ಕೆ ತುಲ್ಯವಾದವುಗಳನ್ನು ಮಾತ್ರ ನಾವು ನೋಡಬಹುದು. ಅದಕ್ಕೂ ಹಿಂದೆ ಹೋದೆವೆಂದರೆ ಜೀವರೂಪಗಳು ಬರುಬರುತ್ತ ಸುಲಭರೂಪದವಾಗಿ ಕಟ್ಟಕಡೆಗೆ ವ್ಯಕ್ತವಾದ ಜೀವರೂಪಗಳೆಲ್ಲ ಮಾಯವಾಗಿ ಅವ್ಯಕ್ತವಾದುದೊಂದು ಜೀವನ ರಸವು ಮಾತ್ರ ಕಾಣಹತ್ತುವುದು. ಇವೆಲ್ಲ ಸಂಗತಿಗಳಲ್ಲಿ ಅಖಂಡವಾದ ಕಾರ್ಯಕಾರಣ ಪರಂಪರೆಯಿರುವುದೆಂದೂ, ಅನೈಸರ್ಗಿಕವಾದುದೊಂದಾದರೂ ( Non-natural ) ಸಂಗತಿಯು ಈ ನಿಚ್ಚಣಿಕೆಯ ಮೆಟ್ಟಿಲುಗಳಲ್ಲಿ ಕಾಣಲಾರದೆಂದೂ ಹೇಳಬಹುದು. ಈ ಅಭಿಪ್ರಾಯದವರ ಮೇರೆಗೆ ವಿಶ್ವದ ಸೃಷ್ಟಿಯ ಬಗ್ಗೆ ನಿಶ್ಚಯಿಸಿ ಹೇಳುವ ಪ್ರಯತ್ನವೇ ನಿಷ್ಫಲವೆಂದು ತಿಳಿಯಲ್ಪಡುತ್ತದೆ. ಆದರೆ ಮೊದಲನೆಯ ಅಭಿಪ್ರಾಯದವರಂತೆ ಜಗತ್ತು ಎಂದಾದರೂ ಈಗಿದ್ದಂತೆಯೇ ಇರುವುದೆಂಬುದನ್ನು ಇವರು ಒಪ್ಪಲಾರರು. ಚೇತನಾತ್ಮಕ ಸೃಷ್ಟಿಕರ್ತನೂ ಇವರಿಗೆ ಸಮ್ಮತವಿಲ್ಲ. ಎಲ್ಲೆಲ್ಲಿ ನೋಡಿದರೂ ಯಾಂತ್ರಿಕತನವೇ ತುಂಬಿರುವುದೆಂದು ಇವರ ಅಭಿಪ್ರಾಯವು. ಮತ್ತು ಎರಡನೆಯ ಅಭಿಪ್ರಾಯದವರಂತೆ ಸೃಷ್ಟಿಯ ಅರ್ವಾಚೀನ ಹುಟ್ಟನ್ನು (Recent Creation) ಇವರು ಒಪ್ಪಲಾರರು.

ಈ ಜಗತ್ತಿನ ಹಿಂದಿನ ಆಯುಷ್ಯವು ಯಾವ ತರದ್ದಿದ್ದಿತೆಂಬ ಪ್ರಶ್ನೆಯಂತೂ "ಐತಿಹಾಸಿಕ" (Puraly a question of historical facts) ವೆಂದು ಮೇಲೆ ಹೇಳಿಯೇ ಇದ್ದೇವೆ. ಎಂದರೆ ಎಲ್ಲ ಐತಿಹಾಸಿಕ ಸಂಗತಿಗಳಂತೆಯೇ ಇದಾದರೂ ಇರು

ಇತಿಹಾಸವೆಂದರೇನು?

ವುದು. ಯಾವುದಾವರೊಂದು ಪುಸ್ತಕವನ್ನು ತೆಗೆದುಕೊಂಡೆವೆಂದರೆ ಇದರಲ್ಲಿ "ಐತಿಹಾಸಿಕ" ಸಂಗತಿಯೆಷ್ಟು, "ಕಾಲ್ಪನಿಕಭಾಗ" ವೆಷ್ಟು ಎಂದು ನಾವು ಪ್ರಶ್ನೆಮಾಡುತ್ತೇವೆ. ರಾಮಾಯಣದಲ್ಲಿ ರಾಮನು ಲಂಕೆಗೆ ಹೋಗಿ ರಾಕ್ಷಸ ಕುಲವನ್ನು ಸಂಹರಿಸಿ ಅಯೋಧ್ಯೆಯಲ್ಲಿ ಯೋಗ್ಯರೀತಿಯಿಂದ ರಾಜ್ಯಮಾಡಿದ್ದು "ಐತಿಹಾಸಿಕ"ವೆಂದು ನಾವು ತಿಳಿಯುತ್ತೇವೆ. ಭಾರತದಲ್ಲಿ ಕೌರವ-ಪಾಂಡವರ ಯುದ್ಧವು ಐತಿಹಾಸಿಕವೆಂದೂ ಉಳಿದುದೆಲ್ಲ ಅಷ್ಟು ವಿಶ್ವಸನೀಯವಲ್ಲೆಂದೂ ನಾವು ನಂಬುತ್ತೇವೆ. ಅದರಂತೆಯೇ ಯಾವನಾದರೊಬ್ಬ ಸತ್ಪುರುಷನ ಚರಿತ್ರೆಯನ್ನು ತೆಗೆದುಕೊಂಡೆವೆಂದರೆ ಅದರಲ್ಲಿ ಕೆಲವು ಸಂಗತಿಗಳು ಮಾತ್ರ "ಐತಿಹಾಸಿಕ" ವೆಂದು ನಾವು ಹೇಳುತ್ತೇವೆ. ಎಂದ ಮೇಲೆ "ಐತಿಹಾಸಿಕ" ಶಬ್ದದ ನಿಜವಾದ ಅರ್ಥವೇನು ? ಇತಿಹಾಸವೆಂದರೆ ನಿಜವಾಗಿ ಆಗಿ ಹೋದುದು. ವಸ್ತುತಃ ಸಂಭವಿಸಿರುವ ಸಂಗತಿಯೇ ಇತಿಹಾಸವೆಂದು ಕರೆಯಲ್ಪಡುತ್ತದೆ. ಎಂದರೆ ಲೇಖಕನು ತನ್ನ ಭಾವನೆಗಳಿಗೆ ಅವಕಾಶವನ್ನೀಯದೆ ಆಗಿಹೋದುದನ್ನು ಇದ್ದಕ್ಕಿದ್ದಂತೆ ವರ್ಣಿಸುವುದೇ "ಇತಿಹಾಸ"ವೆಂಬ ಶಬ್ದದ ಅರ್ಥವು. ಆದುದರಿಂದ ಈ ಶಬ್ದದಲ್ಲಿ ಮೂರು ಕಲ್ಪನೆಗಳು ಅಡಕವಾಗಿರುವವೆಂದು ಹೇಳಬಹುದು. (೧) ವರ್ಣಿಸಿದ ಸಂಗತಿಯು ಹಿಂದಿನ ಕಾಲದ್ದಿರಬೇಕು. (೨) ಆ ವರ್ಣನೆಯಲ್ಲಿ ಲೇಖಕನ ಇಚ್ಛೆಗೆ ಅವಕಾಶವು ಸಿಕ್ಕಿರಬಾರದು. [ ಔರಂಗಜೇಬನ ಆಳಿಕೆಯು ಲೇಖಕನ ಮನಸಿಗೆ ಬಂದಿರಲಿ, ಬರದಿರಲಿ, ಅವನು (ಔರಂಗಜೇಬನು) ಏನೇನು ಮಾಡಿದನೆಂಬುದನ್ನು ಅವನು ಯಥಾರ್ಥವಾಗಿ ವರ್ಣಿಸಲೇಬೇಕು.] (೩) ಅದು ನಿಜವಾಗಿಯೂ ಜರುಗಿದ, ಆಗಿಹೋದ, ಸಂಭವಿಸಿದ ಸಂಗತಿಯಿರಬೇಕು. ವಾಚಕರ ಮನಸಿಗೆ ರಂಜನವಾಗಬೇಕೆಂದು ಇಲ್ಲದ ಸಂಗತಿಗಳನ್ನು ಅದರೊಳಗೆ ಹೆಣೆದಿರಬಾರದು. ಇನ್ನು ಈ ರೀತಿಯಿಂದ ಐತಿಹಾಸಿಕ ಸಂಗತಿಗಳನ್ನು ಅಭ್ಯಾಸಮಾಡಬೇಕಾಗಿರುವುದರಿಂದ, ಅಲ್ಲಿ ಕೇವಲ ಕಲ್ಪನೆ ಅಥವಾ ಅನುಮಾನಕ್ಕೆ ಎಳ್ಳಷ್ಟೂ ಆಸ್ಪದವಿರಲಾಗದು. ಹಾಗೆಯೇ ನಮ್ಮ ಧಾರ್ಮಿಕ,

ರಾಜಕೀಯ, ಸಾಮಾಜಿಕ, ಮತ್ತು ಬೇರೆ ವೈಯಕ್ತಿಕ ವಿಚಾರಗಳನ್ನೂ ಬದಿಗಿರಿಸಿ ಇತಿಹಾಸವನ್ನು ಪರಿಕಿಸಬೇಕಾಗುವುದು. ಹೀಗಿರದೆ ತಮ್ಮ ವೈಯಕ್ತಿಕ ವಿಚಾರಗಳನ್ನು ಸೇರಿಸಿ ಅದನ್ನು ಓದಿದವರಿಗೆ ಇತಿಹಾಸದ ಮರ್ಮವೇ ತಿಳಿದಿಲ್ಲೆಂದು ಹೇಳಬಹುದು.

ಇತಿಹಾಸಕ್ಕೆ ಎರಡು ಪ್ರಮಾಣಗಳು.

ಇನ್ನು "ಐತಿಹಾಸಿಕ" ಸಂಗತಿಗಳ ಪುನರ್‌ರಚನೆಗೆ ಬೇಕಾಗುವ ಮುಖ್ಯ ಪ್ರಮಾಣಗಳಾವುವೆಂಬ ಪ್ರಶ್ನೆಯು ಇಲ್ಲಿ ಕ್ರಮಪ್ರಾಪ್ತವಾಗುವದು. ಗತಿಸಿ ಹೋದ ಸಂಗತಿಯನ್ನು ಪ್ರತ್ಯಕ್ಷವಾಗಿ ನೋಡಿದವರಾರಾದರೂ ಸಿಕ್ಕರೆ ಅವರ ಮಾತನ್ನು ನಾವು ಕೇಳಿ ಅವರು ಹೇಳಿದ್ದೇ ಸತ್ಯವೆಂದು ತಿಳಿಯುತ್ತೇವೆ. ಇದನ್ನು "ಮಾನವಸಾಕ್ಷಿ" (Testimonial Evidence) ಅಥವಾ ಮಾನವ ಪ್ರಮಾಣವೆಂದು ಕರೆಯಬಹುದು. ಇದರ ಹೊರತು ಉಳಿದುದೆಲ್ಲ "ವಿದ್ಯಮಾನ ಸಾಕ್ಷಿ" (Circumstantial Evidence) ಅಥವಾ ವಿದ್ಯಮಾನ ಸಂಗತಿಗಳಿಂದ ದೊರೆಯುವ ಪ್ರಮಾಣವೆಂದು ಹೇಳಲ್ಪಡುತ್ತದೆ. "ಬ"ನು "ಕ"ನನ್ನು ಬರ್ಚಿಯಿಂದ ಇರಿದು ಕೊಂದುದನ್ನು ನಾನು ನೋಡಿದೆನೆಂದು "ಅ"ನು ಹೇಳಿದನೆಂದರೆ ಅದಕ್ಕೆ "ಮಾನವಸಾಕ್ಷಿ"ಯೆಂದು ಹೇಳುತ್ತಾರೆ. ಆದರೆ ಆ ವೇಳೆಯಲ್ಲಿ "ಬ"ನು ಅಲ್ಲಿದ್ದನೆಂದೂ "ಬ"ನ ಬರ್ಚಿಯು ಗಾಯವಾದ ಸ್ಥಳದಲ್ಲಿ ಸರಿಯಾಗಿ ಹಾಳತಾಗುವಂತೆ ಸೇರುವುದೆಂದೂ, "ಬ"ನ ಬರ್ಚಿಯ ತುದಿಗೆ ಮಾನವ ರಕ್ತವು ತೊಡೆದುಕೊಂಡಿದೆಯೆಂದೂ ಕಲ್ಪಿಸಿದರೆ ಇವೆಲ್ಲ "ವಿದ್ಯಮಾನ ಸಾಕ್ಷಿ"ಯೆಂದು ಕರೆಯಲ್ಪಡುತ್ತವೆ. ಇಲ್ಲಿ ಪ್ರತ್ಯಕ್ಷವಾಗಿ "ಬ"ನು "ಕ"ನನ್ನು ಕೊಂದ ಸಂಗತಿಯನ್ನು ಯಾರೂ ನೋಡಿಲ್ಲ. ಆದರೆ ಮೇಲೆ ಹೇಳಿದ ವಿದ್ಯಮಾನ ಸಂಗತಿಗಳ ಮೇಲಿಂದ "ಬ"ನ ಬರ್ಚಿಯಿಂದಲೇ "ಕ"ನು ಹತನಾಗಿರಬೇಕೆಂಬುದು ಸ್ಪಷ್ಟವಿದೆ. ಇರಲಿ, ಇವೆರಡರಲ್ಲಿ "ಮಾನವಸಾಕ್ಷಿ"ಯೇ ಹೆಚ್ಚು ಮಹತ್ತ್ವದ್ದೆಂದು ನಾವು ಸರ್ವಸಾಧಾರಣವಾಗಿ ತಿಳಿಯುತ್ತೇವೆಂಬುದು ನಿಜವಿದ್ದರೂ ಅದು ತಪ್ಪು. ವಿದ್ಯಮಾನ ಸಂಗತಿಗಳು ಅಷ್ಟು ಸ್ಪಷ್ಟವಾಗಿ ಸಿಕ್ಕದಿರಲು "ಮಾನವಸಾಕ್ಷಿ"ಯನ್ನೇ ಆಶ್ರಯಿಸಬೇಕಾಗುವುದೆಂಬುದು ನಿಜ. ಆದರೆ ಮೇಲೆ ಹೇಳಿದಂತೆ ವಿದ್ಯಮಾನ ಸಂಗತಿಗಳೇ ಬೇಕಾದಂತೆ ಸಿಕ್ಕುತ್ತಿರಲಾಗಿ ಅವುಗಳ ಬಗ್ಗೆ ಎಳ್ಳಷ್ಟಾದರೂ ಸಂಶಯ ಉಳಿಯುವುದು ಶಕ್ಯವಿಲ್ಲ. ಅಲ್ಲಿ "ಮಾನವ

ಸಾಕ್ಷಿ"ಗಿಂತ "ವಿದ್ಯಮಾನ ಸಾಕ್ಷಿ"ಯೇ ಹೆಚ್ಚು ವಿಶ್ವಸನೀಯವಾದುದೆಂಬುದು ಸ್ಪಷ್ಟವಿದೆ. ಯಾಕೆಂದರೆ ಸಾಕ್ಷಿ ಕೊಡುವ ಮನುಷ್ಯನು ಸುಳ್ಳು ಹೇಳುತ್ತಿರುವನೆಂದು ತರ್ಕಿಸಲಿಕ್ಕೆ ನೂರಾರು ಕಾರಣಗಳುಂಟು. ಅವನು ಭ್ರಮೆಯಿಂದ ತಪ್ಪು ತಿಳಿವಳಿಕೆಯುಳ್ಳವನಾಗಿರಬಹುದು ; ಅಥವಾ ಹೊಟ್ಟೆಕಿಚ್ಚು, ಸ್ವಾರ್ಥ ಮೊದಲಾದವುಗಳಿಂದ ಅವನ ಬುದ್ಧಿಯು ಬೇಕೆಂತಲೇ ಅಡ್ಡದಾರಿಯನ್ನು ಹಿಡಿದಿರಬಹುದು. ಜಾಣರೆಂದು ಪ್ರಸಿದ್ಧರಾದ ಜನರೂ ಕೂಡ ಕೇವಲ ಸತ್ಯವನ್ನು ನುಡಿಯಬೇಕೆಂದೇ ಹೇಳಿದ ಸಾಕ್ಷಿಯು ಸಹಿತ ಎಷ್ಟೋ ಪ್ರಸಂಗಗಳಲ್ಲಿ ಸುಳ್ಳೆಂಬುದನ್ನು "ವಿದ್ಯಮಾನ ಸಾಕ್ಷಿ"ಯ ಸೂಕ್ಷ್ಮನಿರೀಕ್ಷಣೆಯಿಂದ ಹಲವು ಸಾರೆ ಕಂಡುಹಿಡಿದಿದ್ದಾರೆ. ಆದರೆ ವಿದ್ಯಮಾನ ಸಾಕ್ಷಿಯಲ್ಲಿ ಇಂತಹ ಶಂಕಾಸ್ಥಾನಗಳಿಗೆ ಆಸ್ಪದವೇ ಇರುವುದಿಲ್ಲೆಂದು ಬೇರೆ ಹೇಳಬೇಕೇ ?

ಈ ರೀತಿಯಿಂದ ವಿಚಾರಮಾಡಿ ನೋಡಿದರೆ ಯಾವ ಅಭಿಪ್ರಾಯವು ಗ್ರಾಹ್ಯವಾಗಿರುವುದೆಂಬುದು ಸ್ಪಷ್ಟವಾಗದಿರದು. ಈ ಪ್ರಮಾಣಗಳ ಬಲದಿಂದ ಮೊದಲನೆಯ ಶಾಖೆಯವರ ಅಭಿಪ್ರಾಯವನ್ನು ಸುಳ್ಳೆಂದಾಗಲಿ ಸತ್ಯವೆಂದಾಗಲಿ ಸಿದ್ಧಮಾಡಲಿಕ್ಕೆ ಬರುವಂತಿಲ್ಲ. ಮೇಲೆ ವಿವರಿಸಿದ ಎರಡು ಪ್ರಮಾಣಗಳಲ್ಲಿ ಇದಕ್ಕೆ ಯಾವ ಪ್ರಮಾಣವೂ ಹತ್ತುವಂತಿಲ್ಲ. ಅನಾದಿ ಕಾಲದಿಂದಲೂ ಈ ಜಗತ್ತು ಹಾಗೆಯೇ ಇರುವುದೆಂದು ಸಿದ್ಧಮಾಡಬೇಕಾದರೆ ಅನಂತಸಾಕ್ಷೀದಾರರು, ಅಥವಾ ಅನಂತವಿದ್ಯಮಾನ ಸಂಗತಿಗಳು ಬೇಕಾಗುವವು. ಆದರೆ ಇದು ಅಶಕ್ಯವು. ಮತ್ತು ಈ ಪ್ರಮಾಣಗಳು ಕೆಲವೊಂದು ಕಾಲವನ್ನು ಮೀರಿ ಇನ್ನೂ ಹಿಂದಕ್ಕೆ ಹೋಗಲಾರವೆಂಬುದು ಸ್ಪಷ್ಟವಿದೆ. ಬಹಳವಾದರೆ ಈ ಸಿದ್ಧಾಂತಕ್ಕೆ ವಿರೋಧವಾಗುವಂತಹ ಒಂದೂ ಸಂಗತಿಯು ಸಿಕ್ಕುವುದಿಲ್ಲೆಂದು ಬೇಕಾದರೆ ಹೇಳಬಹುದು. "ಮಾನವಸಾಕ್ಷಿ"ಯಂತೂ ಈ ಮಾತಿನಲ್ಲಿ ತೀರ ಕುಂಠಿತವಾಗುತ್ತದೆನ್ನಬಹುದು. ಯಾಕೆಂದರೆ ಅನಂತವಾದ ಪೃಥ್ವಿಯ ಇತಿಹಾಸದಲ್ಲಿ ಮನುಷ್ಯನು ಬಹಳವಾದರೆ ಇತ್ತೀಚೆಯ ಎರಡು ಮೂರು ಲಕ್ಷ ವರುಷಗಳಲ್ಲಿ ತನ್ನ ಅಸ್ತಿತ್ವವನ್ನು ಹೊರಪಡಿಸಿದ್ದಾನೆ. ಆದರೆ "ವಿದ್ಯಮಾನ ಸಾಕ್ಷಿ"ಯನ್ನು ಆಶ್ರಯಿಸಿದರೆ ಮಾತ್ರ ಈ ಸಿದ್ಧಾಂತವು ಪೂರಾ ಜೊಳ್ಳಾಗಿರುವುದೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಈ ಸಾಕ್ಷಿಯಾದರೂ ಸ್ಪಷ್ಟವಾಗಿಯೂ

ಶಿಲಾಸಾಕ್ಷಿಯಿಂದ ಮೊದಲನೆಯ ಅಭಿಪ್ರಾಯವು ಸುಳ್ಳೆಂದು ಸಿದ್ಧವಾಗುವುದು

ಸುಲಭವಾಗಿಯೂ ಇರುವುದರಿಂದ ಇಲ್ಲಿ ಯಾವ ಸಂಶಯಕ್ಕೂ ಆಸ್ಪದವೇ ಇಲ್ಲ. ಎರಡನೆಯ ಪ್ರಕರಣದಲ್ಲಿ ವಿವರಿಸಿದಂತೆ ನಾವು ಪೃಥ್ವಿಯ ಗರ್ಭವನ್ನು ಕ್ರಮ ಕ್ರಮವಾಗಿ ಪರೀಕ್ಷಿಸುತ್ತ ನಡೆದೆವೆಂದರೆ ಬೇರೆ ಬೇರೆ ತರಗಳು ನಮಗೆ ಗೋಚರ ವಾಗುವವು. ಆ ತರಗಳ ಮೇಲಿಂದ ತೆಗೆಯಬಹುದಾದ ಅನುಮಾನಗಳನ್ನೂ ನಾವು ಅಲ್ಲಿ ಹೇಳಿಯೇ ಇರುವೆವು. ಅದರ ಮೇಲಿಂದ ಈಗಿದ್ದ ಜಗತ್ತಿನ ಸ್ಥಿತಿಯೇ ಎಂದಿನಿಂದಲೂ ಇದೆಯೆಂದು ಹೇಳುವುದು ತಪ್ಪಾಗದಿರದು. ಮತ್ತು ಮೊದಲು ಜಗತ್ತು ನಿರ್ಜೀವವಾಗಿದ್ದಿತೆಂದೂ, ಆ ಮೇಲೆ ಎಷ್ಟೋ ಕೋಟಿ ವರುಷಗಳ ಮೇಲೆ ಜೀವವು ಕಾಣಿಸಿಕೊಂಡಿತೆಂದೂ, ಆ ಮೇಲೆ ಜಲಚರ, ದ್ವಿಚರ, ಖೇಚರ, ಭೂಚರ ಮೊದಲಾದ ಪ್ರಾಣಿಗಳು ಲಕ್ಷಾವಧಿ ವರುಷಗಳಾದ ಮೇಲೆ ಪೃಥ್ವಿಯ ಮೇಲೆ ಕ್ರಮೇಣವಾಗಿ ಹುಟ್ಟುತ್ತಬಂದವೆಂದೂ ಸಿದ್ಧವಾಗುವುದ ರಿಂದ ಈ ಅಭಿಪ್ರಾಯವನ್ನು ನಾವಿಲ್ಲಿ ಹೆಚ್ಚಾಗಿ ಗಮನಿಸುವುದು ಯುಕ್ತವಾಗ ಲಾರದು.

ಅದೇ ರೀತಿಯಿಂದ ಬೈಬಲ್ಲಿನಲ್ಲಿ ಹೇಳಿದ ಸಂಗತಿಗಳು ಎಂದು ಮತ್ತು ಯಾವ ಕ್ರಮದಿಂದ ಅಸ್ತಿತ್ವದಲ್ಲಿ ಬಂದವೆಂಬುದನ್ನು ವಿಚಾರಮಾಡಹತ್ತಿದರೆ, ಅದರ ಅಭಿಪ್ರಾಯವೂ ಸುಳ್ಳೆಂದು ನಿರ್ವಿವಾದವಾಗಿ ಸಿದ್ಧವಾಗುವುದು. ಶಿಲಾಸಾಕ್ಷಿಯಿಂದ ಸಿದ್ಧವಾದ ಮಾತುಗಳನ್ನಿಟ್ಟುಕೊಂಡು ನಾವು ಬೈಬಲ್ಲಿನ ಸೃಷ್ಟಿ ಕ್ರಮವನ್ನು ನೋಡಿದೆವೆಂದರೆ ಈ ಮಾತಿನ ಸತ್ಯತೆಯು ಮನದಟ್ಟಾಗುವಂತಿದೆ. ಬೈಬಲ್ಲಿನಲ್ಲಿ ವನಸ್ಪತಿವರ್ಗವೆಲ್ಲ ೩ನೇ ದಿವಸ ಹುಟ್ಟಿದವೆಂದೂ ಮತ್ತು ಐದನೆಯ ದಿವಸಕ್ಕಿಂತ ಮೊದಲು ಯಾವ ಪ್ರಾಣಿಯೂ ಇರಲಿಲ್ಲವೆಂದೂ, ಐದನೆಯ ದಿವಸ ಜಲಚರಪ್ರಾಣಿಗಳೂ ಪಕ್ಷಿಗಳೂ ಹುಟ್ಟಿ, ಉಳಿದ ಪ್ರಾಣಿಗಳೆಲ್ಲ ೬ನೆಯ ದಿವಸ ಹುಟ್ಟಿದವೆಂದೂ ಹೇಳಿದೆ. ಆದರೆ ಶಿಲಾಸಾಕ್ಷಿಯಿಂದ ನೋಡಿದರೆ ವನಸ್ಪತಿ ವರ್ಗವೂ ಪ್ರಾಣಿವರ್ಗವೂ ಕೂಡಿ ಒಂದೇ ಜೀವರಸದಿಂದ ಹುಟ್ಟಿ ಎರಡು ಟೊಂಗೆಗಳಾದವೆಂದು ಸ್ಪಷ್ಟವಾಗುತ್ತದೆ. ಅದರಂತೆಯೇ ಜಲಚರಪ್ರಾಣಿ ಗಳೊಡನೆ ಪಕ್ಷಿಗಳು ಹುಟ್ಟಿದಾಗ ಉಳಿದ ಯಾವ ಪ್ರಾಣಿಗಳೂ ಹುಟ್ಟಿರಲಿಲ್ಲ ವೆಂಬುವುದು ತಪ್ಪು. ಜಲಚರಪ್ರಾಣಿಗಳ ನಂತರ ದ್ವಿಚರಪ್ರಾಣಿಗಳು ಹುಟ್ಟಿ,

ಬಾಯಬಲ್ಲಿನ ಅಭಿಪ್ರಾಯವೂ ಸುಳ್ಳು

ಆ ಮೇಲೆ ಉರಗಮನ ಪ್ರಾಣಿಯಿಂದಲೇ ಪಕ್ಷಿವರ್ಗ ಮತ್ತು ಉಳಿದ ಭೂಚರ ಪ್ರಾಣಿವರ್ಗವೆಂಬ ಎರಡು ಟಿಸಲುಗಳು ಒಡೆದವೆಂದು ಶಿಲಾಸಾಕ್ಷಿಯು ಹೇಳುತ್ತದೆ. ಮತ್ತು ಬೈಬಲ್ಲಿನಲ್ಲಿ ಹೇಳಿದ ಸೃಷ್ಟಿಕಾಲವು ಅರ್ವಾಚೀನವೆಂಬುದೂ ಭೂಗರ್ಭ ಶಾಸ್ತ್ರದಿಂದ ಖಂಡಿತವಾಗುತ್ತದೆ. ಬೈಬಲ್ಲಿನ ಸಿದ್ಧಾಂತಗಳು "ಮಾನುಷಸಾಕ್ಷಿ" ಯಿಂದಂತೂ ಸಿದ್ಧವಾಗುವುದು ಶಕ್ಯವೇ ಇಲ್ಲ. "ವಿದ್ಯಮಾನ ಸಾಕ್ಷಿ"ಯಿಂದ ಅದು ಸುಳ್ಳೆಂದು ಸಿದ್ಧವಾಗುತ್ತದೆ. ಎಂದ ಮೇಲೆ ಬೈಬಲ್ಲಿನ ಸಿದ್ಧಾಂತಗಳನ್ನು ಯಾವ ಆಧಾರದಿಂದ ನಾವು ನಂಬಬೇಕು ?

ಹಾಗಾದರೆ ವಿಕಾಸವಾದವಾದರೂ ಏತರಿಂದ ಸಿದ್ಧವಾಗುತ್ತದೆ ? ಅದಕ್ಕಾದರೂ "ಮಾನವಸಾಕ್ಷಿ"ಯು ಸಿಗಲಾರದೆಂಬುದು ಸ್ಪಷ್ಟವಿದೆ. ಆದರೆ

ವಿಕಾಸವಾದವು

ಶಿಲಾಸಾಕ್ಷಿಯಿಂದ ವಿಕಾಸವಾದವು ಹೇಗೆ ಸಿದ್ಧವಾಗುವುದೆಂಬುದನ್ನು ಈ ಮೊದಲೇ ಎರಡನೆಯ ಪ್ರಕರಣದಲ್ಲಿ ತೋರಿಸಿಕೊಟ್ಟಿರುವೆವು. ಅದನ್ನೆ ಪುನಃ ಇಲ್ಲಿ ಚರ್ವಿತಚರ್ವಣಮಾಡುವುದು ಸರಿಯಾಗಲಾರದು. ಇರಲಿ; ಈ ವಿಶ್ವದ ಸೃಷ್ಟಿಯು ವಿಷಯವಾಗಿ ಶಾಸ್ತ್ರೀಯ ರೀತಿಯಿಂದ ಅರ್ಥಹಚ್ಚಲಿಕ್ಕೆ ಪ್ರಯತ್ನಮಾಡಿದವರಲ್ಲಿ ಜರ್ಮನಿಯ ಪ್ರಸಿದ್ಧ ತತ್ತ್ವಜ್ಞಾನಿಯಾದ ಕಾಂಟನು ಮೊದಲನೆಯವನು. ನ್ಯೂಟನನು ಕಂಡು ಹಿಡಿದ ನಿಯಮಗಳಿಗನುಸರಿಸಿ ಈ ಜಗತ್ತಿನ ರಚನೆಯಿರುವುದೆಂದೂ, ಯಾಂತ್ರಿಕ ರೀತಿಯಿಂದಲೇ ಈ ವಿಶ್ವದ ಉತ್ಪತ್ತಿಯಾಯಿತೆಂದೂ ಕಾಂಟನು ಸನ್ ೧೭೫೫ ನೆಯ ಇಸವಿಯಲ್ಲಿ ಬರೆದದ್ದೊಂದು ಲೇಖನದಲ್ಲಿ ಅಭಿಪ್ರಾಯಪಟ್ಟನು. "ತೇಜೋ ಮೇಘಗಳ ಕಲ್ಪನೆ"ಯನ್ನು (Nebular Hypothesis) ಮತ್ತು ಮೊದಲು ಕಾಂಟನೇ ಜಗತ್ತಿಗೆ ಕೊಟ್ಟನು. ಆದರೆ ಆಗ ಆ ತತ್ತ್ವವನ್ನು ಯಾರೂ ವಿಶೇಷವಾಗಿ ಗಮನಿಸಲಿಲ್ಲ. ಫ್ರೆಂಚ ಪಂಡಿತನಾದ ಲ್ಯಾಪಲೇಸನು ಸನ್ ೧೭೯೬ರಲ್ಲಿ ಸ್ವತಂತ್ರರೀತಿಯಿಂದ ವಿಚಾರಮಾಡಿ ಕಾಂಟನು ವಿವರಿಸಿದ ಸಿದ್ಧಾಂತಗಳಿಗೇ ಬಂದುಮುಟ್ಟಿದನು. ಅವರಿಬ್ಬರೂ ಹೇಳುವುದೇನೆಂದರೆ: ವಿಶ್ವ ದೊಳಗಿರುವ ಖಗೋಳಗಳೆಲ್ಲ ತನ್ನ ಸುತ್ತು ತಾವೇ ತಿರುಗುತ್ತಿರುವ ತೇಜೋ ಮೇಘಗಳಿಂದ ಹುಟ್ಟಿದವು. ಅವು ಬರಬರುತ್ತ ಗಟ್ಟಿಯಾಗುತ್ತ ಹೋದಹಾಗೆ ಸೂರ್ಯಮಾಲೆಗಳೂ, ಗ್ರಹಗಳೂ, ನಕ್ಷತ್ರ ಮೊದಲಾದವುಗಳೂ ಹುಟ್ಟಿದವು. ಇವೆಲ್ಲವುಗಳ ಗತಿಗಳು ಕೆಲವು ವಿಶಿಷ್ಟ ನಿಯಮಗಳಿಗನುಸರಿಸಿ ನಡೆಯುತ್ತವೆ.

ಜಗತ್ತಿನೊಳಗಿನ ಜಡವೂ ಶಕ್ತಿಯೂ ಅವ್ಯಾಹತವಾಗಿ ಅಬಾಧಿತವಾಗಿ ರುತ್ತವೆಂದು ಮೇಲೆಯೇ ಹೇಳಿದ್ದೇವೆ. ಈ ವಿಶ್ವದ ವ್ಯಾಪವು ಅನಂತವಿದ್ದು ಅದಕ್ಕೆ ಯಾವ ಕಡೆಗೂ ಮೇರೆಗಳಿಲ್ಲ. ಅದು ಯಾವ ಭಾಗದಲ್ಲಿಯೂ ಶೂನ್ಯವಾಗಿಲ್ಲ (Empty in no part). ಆದರೆ ಎಲ್ಲೆಡೆಗೂ ಅವಿಚ್ಛಿನ್ನವಾಗಿ ಹಬ್ಬಿ ಕೊಂಡಿರುವುದು. ಈ ವಿಶ್ವದ ಆಯುಷ್ಯವು ಕಾಲಾತೀತವಿದೆಯೆಂದು ಹೇಳ ಬಹುದು. ಅದು ಅನಾದ್ಯನಂತವು. ನಿತ್ಯವು. ದ್ರವ್ಯವು ಎಲ್ಲೆಲ್ಲಿ ನೋಡಿದರೂ ಎಡೆಬಿಡದೆ ಚಲಿಸುತ್ತಿರುವುದು; ಅದರಿಂದಲೇ ಅದು ಪಲ್ಲಟಿಸುತ್ತಿರುವುದು; ಅದಕ್ಕೆ ಎಲ್ಲಿಯೂ ವಿಶ್ರಾಂತಿಯಿಲ್ಲ. ಆದರೆ ಅದರ ಪರಿಣಾಮವಾಗಲಿ ಶಕ್ತಿ ಯಾಗಲಿ ಎಂದೂ ಕಡಿಮೆಯಾಗುವುದಿಲ್ಲ. ಅದರಲ್ಲಿ ಉತ್ಕ್ರಾಂತ್ಯನಕ್ರಾಂತಿಗಳು ಅವ್ಯಾಹತವಾಗಿ ನಡೆದಿವೆ. ಅದರೊಳಗಿನ ಈ ಚಲನವಲನ ಶಕ್ತಿಯು ನೈಸರ್ಗಿಕ ವಾಗಿದೆ. ಈ ಶಕ್ತಿಯು ಅದಕ್ಕೆಲ್ಲಿಂದ ಬಂದಿತೆಂಬು ಕೇಳುವುದು ಹುಚ್ಚುತನವು. ಹೀಗೆ ತಿರುಗುತ್ತಿರುವ ತೇಜೋಮೇಘಗಳಿಂದ ಹೊಸ ಹೊಸ ಖಗೋಳಗಳು ಆಕಾಶದ ಒಂದು ಭಾಗದಲ್ಲಿ ಹುಟ್ಟುತ್ತಿದ್ದರೆ, ಬೇರೊಂದೆಡೆಗೆ ಆರಿ ತಣ್ಣಗಾದ ಸೂರ್ಯಮಾಲೆಗಳು ಒಂದರ ಮೇಲೊಂದು ಬಂದು ಅಪ್ಪಳಿಸುವವು. ಅದರಿಂದ ಮತ್ತೆ ಉಷ್ಣತೆಯು ಹುಟ್ಟಿ ಆ ಖಗೋಳಗಳು ಮೊದಲಿನಂತೆ ತೇಜೋಮೇಘ ಗಳ ರೂಪವನ್ನು ಹೊಂದುವವು.

ಶಕ್ತಿಯುತವಾದ ಜಡವು

ಇಂತಹ ತೇಜೋಮೇಘಗಳ ವಿನಹ ವಿಶ್ವದಲ್ಲಿ ಬೇರೆ ಏನೂ ಇಲ್ಲ. ಅವು ಮುಖ್ಯವಾಗಿ ಹೈಡ್ರೋಜನ್ ಮತ್ತು ಆಕ್ಸಿಜನ್‌ನಿಂದ ತುಂಬಿಕೊಂಡಿದ್ದವು. ಅವುಗಳ ಗುಂಪಿಗೆ ಆಕಾರವಿರಲಿಲ್ಲ. ಅದು ಸಂಪೂರ್ಣ ವಾಗಿ ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿಬಿಟ್ಟಿತ್ತು. ತಿರುಗು ತ್ತಿರುವ ಇಂತಹದೊಂದು ತೇಜೋಮೇಘದಲ್ಲಿ ಘನೀಭವನಕ್ರಿಯೆಯು (Condensation) ಸುರುವಾಯಿತು. ಮತ್ತು ಹೀಗಾಗುವುದು ಸಹಜವೇ ಇದೆ. ತೀರ ಹಗುರಾದ ವಸ್ತುವು ಗರಗರನೆ ತಿರುಗಲಾರಂಭಿಸಿತೆಂದರೆ ಅದು ಕ್ರಮೇಣವಾಗಿ ಗಟ್ಟಿಯಾಗುತ್ತ ನಡೆಯುವುದು. ಎಂದರೆ ಅದರ ವ್ಯಾಪಕತ್ವವು (extent) ಕಡಿಮೆಯಾಗುವುದು. ಹೀಗೆ ಒಂದು ತೇಜೋಮೇಘವು ಘನ ವಾಗುತ್ತ ನಡೆದಿರಲು, ಈಗಿನ ಸೂರ್ಯಮಾಲೆಯೊಳಗಿನ ಎಲ್ಲ ಗ್ರಹಗಳನ್ನೂ ಕೆ

ತೇಜೋಮೇಘಗಳು

ಗೊಂಡ ಸೂರ್ಯಬಿಂಬವು ಅದರಿಂದಲೇ ಅಸ್ತಿತ್ವದಲ್ಲಿ ಬಂತು. ಆ ಕಾಲದಲ್ಲಿ ನಮ್ಮ ಪೃಥ್ವಿಯೂ ಉಳಿದ ಎಲ್ಲ ಗ್ರಹಗಳೂ ಸೂರ್ಯನೊಡನೆ ಕೂಡಿಕೊಂಡು ಆಕಾಶದಲ್ಲಿ ತಿರುಗುತ್ತಿರುವುದೊಂದು ವ್ಯಾಪಕದ್ರವ್ಯದ ನಾಗಮುರಿಯಾಗಿರಬೇಕು. ಮುಂದೆ ಘನೀಭವನಕ್ರಿಯೆಯು ಹೆಚ್ಚುತ್ತ ನಡೆದಂತೆ ಈ ಗ್ರಹಗಳೆಲ್ಲ ಬೇರೆ ಬೇರೆಯಾಗಿ ವ್ಯಕ್ತವಾಗಹತ್ತಿದವು. ಆದರೆ ಆಗ ಅವು ಸೂರ್ಯನಿಗೆ ತೀರ ಸಮೀಪವಾಗಿದ್ದವು. ಮತ್ತು ಈಗಿನಕ್ಕಿಂತಲೂ ಹೆಚ್ಚು ವೇಗದಿಂದ ಸೂರ್ಯನ ಸುತ್ತಲೂ ತಿರುಗುತ್ತಿದ್ದವು. ಆಗ ಅವು ಬಹುಶಃ ಅಗ್ನಿಮಯವಾಗಿರಬೇಕು; ಮೇಲ್ಭಾಗವಂತೂ ಎಸರಾದ ದ್ರವ್ಯಗಳಿಂದ ಕುದಿಯುತ್ತಿರಬಹುದು. ಬರಬರುತ್ತ ಅವು ಸೂರ್ಯನಿಂದ ದೂರ ಸರಿಯಹತ್ತಿದವು; ಅವುಗಳ ವೇಗವಾದರೂ ಕಡಿಮೆಯಾಗಹತ್ತಿತು. ಮತ್ತು ಆ ಆ ಗ್ರಹಗಳ ಸುತ್ತು ತಿರುಗುವ ಚಂದ್ರಾದಿಗಳೂ ಅಸ್ತಿತ್ವದಲ್ಲಿ ಬಂದವು. ಸೂರ್ಯನಿಂದ ಪೃಥ್ವಿಯು ಬೇರೆಯಾಗಿ ಏನಿಲ್ಲೆಂದರೂ ೨೦೦ ಕೋಟಿ ವರುಷಗಳಾಗಿರಬೇಕೆಂದು ತರ್ಕಮಾಡಲ್ಪಟ್ಟಿದೆ.

ಭೂಮಿಯು ಹುಟ್ಟು

ಪೃಥ್ವಿಯು ಹುಟ್ಟಿ ೨ ಅಬ್ಜ ವರುಷಗಳಾದರೂ ಪೃಥ್ವಿಯ ಮೇಲೆ ಜೀವವು ಹುಟ್ಟಿ ಬಹಳೇ ಸ್ವಲ್ಪ ವರುಷಗಳಾದವು. ಭೂದೇವಿಯು ಕನ್ಯಾವಸ್ಥೆಯಲ್ಲಿಯೇ ಬಸುರಾಗಿ ಹಡೆಯುವುದು ಶಕ್ಯವಿರಲಿಲ್ಲ. ಅಂತಹ ಕಲ್ಪನಾತೀತವಾದ ಉಷ್ಣಸ್ಥಿತಿಯಲ್ಲಿರುವ ಭೂದೇವಿಯು ಆಶ್ರಯದಲ್ಲಿ ಯಾವ ಜೀವಿಯೂ ಬದುಕಿರುವುದು ಶಕ್ಯವಿದ್ದಿಲ್ಲ. ಆಗ ಈಗಿನಂತೆ ಗಟ್ಟಿಯಾದ ನೆಲವಂತೂ ಇರಲೇ ಇಲ್ಲ. ಕಿಂಬಹುನಾ, ಈಗಿನಂತೆ ನೀರೂ ಕೂಡ ಆಗ ವ್ಯ[illegible]ಲ್ಲೆಂದು ಹೇಳಬಹುದು. ಘನೀಭವನ ಕ್ರಿಯೆಯು ಹಾಗೆಯೇ ಕೋ[illegible] ವರುಷಗಳ ವರೆಗೆ ಎಡೆಬಿಡದೆ ನಡೆಯಿತು. ಆ ಮೇಲೆ ಪೃಥ್ವಿಯ ಮೇಲ್ಭಾಗವು ಜಲಮಯವಾಯಿತು. ಎಷ್ಟೋ ವರ್ಷಗಳಾದ ಮೇಲೆ ಕಲ್ಲುಬಂಡೆಗಳೂ ಅಲ್ಲಲ್ಲಿಗೆ ಕಾಣಹತ್ತಿದವು. ಈಗಿನಂತೆ ನೀರು ಕಾಯ್ದು ಉಗಿಯಾಗಿ, ಮೋಡಗಳ ರೂಪದಿಂದ ಮೇಲಕ್ಕೆ ಹೋಗಿ, ಕಲ್ಬಂಡೆಗಳ ಮೇಲೆ ಮಳೆಯನ್ನು ಸುರಿಸಿ, ಅಲ್ಲಿಂದ ಮಣ್ಣು ಹರಿಸಿಕೊಂಡು ಬಂದು ನೀರಿನ ತಳದಲ್ಲಿ ಕೂಡಹಾಕಹತ್ತಿತು. ಇದೇ ಕ್ರಮವು ಕ್ರಮೇಣವಾಗಿ ನಡೆದು ಸದ್ಯಕ್ಕಿನ ಸ್ಥಿತಿಯು ಪ್ರಾಪ್ತವಾಯಿತು. ಭೂಗರ್ಭಶಾಸ್ತ್ರದ ಮೇಲಿಂದ ಪೃಥ್ವಿಯು ಈ ಸ್ಥಿತಿಗೆ ಬಂದು ಮುಟ್ಟಬೇಕಾದರೆ ೧೬೦ ಕೋಟಿ

ವರುಷಗಳು ಬೇಕಾಗಿರಬಹುದೆಂದು ಶಾಸ್ತ್ರಜ್ಞರು ನಿರ್ಣಯಿಸಿದ್ದಾರೆ. ಎಲ್ಲಕ್ಕೂ ಕೆಳಗಿರುವ ಕಲ್ಲಿನ ತರಗಳಿಗೆ ಜೀವರಹಿತವಾದ ( azoic ) ಬಂಡೆಗಳೆಂದು ಕರೆಯುವ ವಾಡಿಕೆಯುಂಟು. ಯಾಕೆಂದರೆ ಅವುಗಳಲ್ಲಿ ಜೀವದ ಕುರುಹುಗಳು ಕಂಡುಬರುವುದಿಲ್ಲ. ಈ ೧೬೦ ಕೋಟಿ ವರುಷಗಳಲ್ಲಿ ಮೊದಲಿನ ೮೦ ಕೋಟಿ ವರುಷಗಳ ವರೆಗೆ ನಮ್ಮ ಪೃಥ್ವೀತಲದ ಮೇಲೆ ಜೀವದ ಸುಳಿವೇ ಇರಲಿಲ್ಲ! ಹಾಗಾದರೆ ಜೀವವು ಮತ್ತಮೊದಲು ಹೇಗೆ ಪ್ರಾರಂಭವಾಯಿತೆಂಬುದನ್ನು ಮುಂದಿನ ಪ್ರಕರಣದಲ್ಲಿ ನೋಡುವ.



## ೫

# ಜೀವದ ಉತ್ಪತ್ತಿಯೂ ಅದರ ಗುಣಧರ್ಮಗಳೂ

ಜೀವಜಡಗಳ ಕಲ್ಪನೆಯೇ ಒಗಟುಗಳ ಒಗಟವೆಂದು ಹೇಳಬಹುದು. ಇದೇ ಎಲ್ಲ ಭೌತಿಕಶಾಸ್ತ್ರಗಳ ಹಿರಿದಾದ ವೈರಿಯು, ತತ್ತ್ವಜ್ಞಾನಿಗಳ ಬೆನ್ನೆಲುಬು, ಧಾರ್ಮಿಕರ ಜೀವಾಳವು ಎಂದು ವರ್ಣಿಸಿದರೆ ಅದರಲ್ಲಿ ಅತಿಶಯೋಕ್ತಿಯ ದೋಷವು ನಮಗೆ ಎಳ್ಳಷ್ಟೂ ತಗಲಲಾರದು. ಈ ತೊಡಕನ್ನು ಬಿಡಿಸಿದರೆ, ಮುಂದೆ ತತ್ತ್ವಜ್ಞಾನದ ಕೆಲಸವೇ ಮುಗಿದಂತಾಗುವುದೆಂದು ಹೇಳಬಹುದು. ಆದರೂ ಜೀವಜಡಗಳೆಂಬ ತೀರ ವಿರುದ್ಧವಾದ ಎರಡು ತರದ ವಸ್ತುಗಳು ಇರುವುದನ್ನಂತೂ ಯಾರೂ ಅಲ್ಲಗಳೆಯಲಾರರು. ಬ್ರಹ್ಮಸೂತ್ರಭಾಷ್ಯದ ಆರಂಭದಲ್ಲಿಯೇ ಕತ್ತಲೆ ಬೆಳಕುಗಳಂತೆ ತೀರ ವಿರುದ್ಧಧರ್ಮಿಗಳಾದ ವಸ್ತುಗಳೇ ಜೀವಜಡಗಳಾಗಿರುವವೆಂದು ಶ್ರೀಶಂಕರಾಚಾರ್ಯರು ಹೇಳಿದ್ದಾರೆ. ಎಂದರೆ ಜಡವೆಂಬುದು ಜೀವವೆಂಬ ವಸ್ತುವಿನಿಂದ ಎಲ್ಲರೀತಿಯಿಂದಲೂ ಭಿನ್ನವಾಗಿರುವುದು. ನಮ್ಮೆಲ್ಲರ ಮನದಲ್ಲಿ ಈ ಮಾತು ಎಷ್ಟು ಮನದಟ್ಟಾಗಿದೆಯೆಂಬುದನ್ನು ನೋಡಬೇಕಾದರೆ, ವೇದಾಂತಿಗಳ ಚೇತನವಾದವು ನಮಗೆ ಸಹಜವಾಗಿಯೇ ತಿಳಿಯುವುದೇ ಹೇಗೆಂಬುದನ್ನು ತುಸು ಶ್ರಮಬಟ್ಟು ನೋಡಬೇಕು. ಬ್ರಹ್ಮಸೂತ್ರದಲ್ಲಿ (೨-೧-೪-೧೨) "ನವಿಲಕ್ಷಣತ್ವಾಧಿಕರಣ"ವನ್ನು ಓದಹತ್ತಿದರೆ, ಈ ಪ್ರಶ್ನೆಯು ವೇದಾಂತದಲ್ಲಿ ಯಾವ ಸ್ಥಾನವನ್ನು ಆಕ್ರಮಿಸಿದೆಯೆಂಬುದರ ಕಲ್ಪನೆಯಾಗುವಂತಿದೆ. ಆದರೆ ವೇದಾಂತಿಗಳ ಜೀವಜಡಗಳ ಕಲ್ಪನೆಯನ್ನಾಗಲಿ, ಅಥವಾ ಸಾಂಖ್ಯರ ಜೀವಜಡಗಳನ್ನಾಗಲಿ ಚರ್ಚಿಸುತ್ತ ಕೂಡುವುದು ನಮ್ಮ ಪ್ರಸ್ತುತದ ಉದ್ದೇಶವಲ್ಲ. ಬ್ರ. ೩-೧ ೧ ದಲ್ಲಿ ಪ್ರಭು ಅಥವಾ ವ್ಯಾಪಕನಾದ ಆತ್ಮನೇ ( ಇಲ್ಲಿ ಅಭಿಪ್ರೇತವಾದ ಆತ್ಮವು ಅಣುವೇ ಇರಬೇಕೆಂದು ಬೇರೆ ಕೆಲವರ ಅಭಿಪ್ರಾಯವಿದೆ. ) ಲಿಂಗದೇಹಧಾರಿಯಾಗಿ ಅಡ್ಡಾಡುತ್ತಿರುವನೆಂದೂ, ಆತನೇ ತನ್ನ ಪಾಪಪುಣ್ಯ ಕರ್ಮಗಳಿಗನುಸರಿಸಿ ಉಚ್ಚನೀಚಯೋನಿಗಳಲ್ಲಿ ಹುಟ್ಟುವನೆಂದೂ ಹೇಳಿದೆ. ಎಂದರೆ ಎಲ್ಲೆಲ್ಲಿ ಚೈತನ್ಯವಿರುವುದೆಂದು ಕಂಡುಬರುವುದೊ ಆ ಆ ಸ್ಥಾನದಲ್ಲಿ ಅದರಿಂದ ತೀರ ಭಿನ್ನನಾದ ಜೀವನೊಬ್ಬನು ಹೊರಗಿನಿಂದ ಬಂದು ವಾಸಿಸುತ್ತಿರುವನೆಂದು ವೇದಾಂತಿ-

*ಜೀವಜಡಗಳ ಪ್ರಶ್ನೆಯೇ ಒಗಟಗಳ ಒಗಟವೆಂದು ಹೇಳಬಹುದು*

ಗಳು ಹೇಳುತ್ತಾರೆ. ಆದರೆ ಜೀವವು ವಸ್ತುತಃ ಜಡವೇ ಆಗಿರುವುದೆಂದೂ, ಅಥವಾ ಜಡವೇ ಒಂದು ತರದ ಜೀವವೆಂದೂ ಕಲ್ಪಿಸುವುದು ಶಕ್ಯವಿದೆಯೆಂಬುದನ್ನು ಮರೆಯಕೂಡದು. ಮನಸ್ಸು ಒಂದು ತರದ ಜಡದ್ರವ್ಯವೆಂದು ಜಡವಾದಿಯು ಹೇಳಿದರೆ, ಜಡವಸ್ತುಗಳೂ ಕೂಡ ನಮಗೆ ಸುಲಭವಾಗಿ ಗುರುತಿಸಲಿಕ್ಕೆ ಬರದಂತಹ ಒಂದು ತರದ ಮನಸ್ಸೇ ಇರುವುದೆಂದು ಚೇತನವಾದಿಯು ಹೇಳುತ್ತಾನೆ. (Taylor:–Metaphysics Book I, Chap III) ಅದೇಕೆ ? ನಾಸ್ತಿಕರಾದ ಉತ್ಕ್ರಾಂತಿವಾದಿಗಳೇ ಜಡವಾದಿಗಳೆಂಬುದನ್ನು ನಾವು ಬೇರೆ ಹೇಳಬೇಕಾಗಿಲ್ಲ.

ಜಡದಿಂದ ಚೈತನ್ಯವನ್ನು ಸಿದ್ಧಪಡಿಸುವ ಪ್ರಯೋಗಶಾಲೆಗಳೆಂದರೆ ವನಸ್ಪತಿಗಳೇ ಸರಿ

ಚೈತನ್ಯದ ಯಾವ ಶಾಸ್ತ್ರೀಯ ಲಕ್ಷಣಗಳಿಂದ ಅದು ಜಡದಿಂದ ಭಿನ್ನವಾಗಿದೆಯೆಂದು ತಿಳಿಯುತ್ತಾರೆ ? ವನಸ್ಪತಿಗಳಾಗಲಿ, ಪ್ರಾಣಿಗಳಾಗಲಿ, ಜೀವದ ಬೇರೆ ಬೇರೆ ರೂಪಗಳೆಂದೇ ಹೇಳಬಹುದು. ಭೇದವಿಷ್ಟೇ: ಜಡದ್ರವ್ಯಗಳನ್ನು ಶೋಷಿಸಿಕೊಂಡು ಅವಕ್ಕೆ ಚೇತನರೂಪವನ್ನು ಕೊಡುವ ಶಕ್ತಿಯು ಮಾತ್ರ ವನಸ್ಪತಿಗಳಿಗಷ್ಟೇ ಸಾಧ್ಯವಾಗಿರುವುದು. ಪ್ರಾಣಿಗಳಾದರೋ ತಮ್ಮ ಆಹಾರಕ್ಕಾಗಿ ಜೀವರಸ ( Protoplasm ) ವನ್ನೇ ಅಪೇಕ್ಷಿಸುತ್ತವೆ. ನಾವು ತಿನ್ನುವ ಗೋದಿ, ಕಡಲೆ, ಹಾಲು, ಮೊಸರು, ಮಾಂಸ ಮೊದಲಾದ ಪದಾರ್ಥಗಳೆಲ್ಲ ಜೀವರಸದ ಮೃತರೂಪವೇ ಹೌದು. ಆದುದರಿಂದ ಪ್ರಾಣಿವರ್ಗಕ್ಕೆ ಬೇಕಾದ ಅತ್ಯಾವಶ್ಯಕವಾದ ಆಹಾರವನ್ನು ತಯಾರಿಸುವ ಪ್ರಕೃತಿಯ ದೊಡ್ಡ ಪ್ರಯೋಗಶಾಲೆಗಳೆಂದರೆ ಈ ವನಸ್ಪತಿವರ್ಗವೇ ಸರಿ. ಅದು ಸರಕುಗಳನ್ನು ತಯಾರಿಸಿ ಕಳಿಸಿಕೊಡುವ ಕಾರಖಾನೆಯು. ಪ್ರಾಣಿವರ್ಗವು ಅದನ್ನು ಸ್ವೀಕರಿಸಿ ತಮ್ಮ ದೇಹವನ್ನು ಪುಷ್ಟಮಾಡಿಕೊಳ್ಳುವ ಗಿರಾಕಿಗಳ ಗುಂಪು. ವನಸ್ಪತಿಗಳು ಚೇತನವ್ಯಾಪಾರಕ್ಕೆ ಬೇಕಾಗುವ ಶಕ್ತಿಯನ್ನೆಲ್ಲ ಹುಟ್ಟಿಸಿ ಸಂಗ್ರಹಮಾಡುವವು. ಪ್ರಾಣಿಗಳು ಅದನ್ನೆಲ್ಲ ಖರ್ಚುಮಾಡಿ ಹಾಳುಮಾಡಿಬಿಡುವವು. ವನಸ್ಪತಿಗಳು ನಾಣ್ಯಗಳನ್ನು ಅಚ್ಚುಹಾಕುವ ಟಂಕಸಾಲೆಯೆಂದು ತಿಳಿದರೆ, ಪ್ರಾಣಿಗಳು ಆ ನಾಣ್ಯಗಳಿಂದ ತಮ್ಮ ವ್ಯವಹಾರವನ್ನು ಸಾಗಿಸುವ ಮಾನವಸಮಾಜವೆಂದು ಹೇಳಬಹುದು. " ಕರನ್ಸಿನೋಟು "ಗಳನ್ನು ಛಾಪಿಸಿ ಹೊರಗೆ ಕಳುಹಿಸುವ ಸರಕಾರವೇ ವನಸ್ಪತಿವರ್ಗವೆಂದು ಕಲ್ಪಿಸಿದರೆ, ಅದರ ಉಪಯೋಗವನ್ನು

ಮಾಡಿಕೊಳ್ಳುವ ವ್ಯಾಪಾರಿಗಳ ವರ್ಗವೇ ಪ್ರಾಣಿವರ್ಗವೆಂದು ಹೇಳಬಹುದು. (ಆಧುನಿಕ ಶಾಸ್ತ್ರವೂ ವಿಚಾರವೂ ಪು. ೩೧) ಇದರ ಮೇಲಿಂದ ಮನುಷ್ಯನ ಮುಖ್ಯ ಆಹಾರವೆಂದರೆ ವನಸ್ಪತಿಗಳೇ ಯಾಕಾಗಿರಬೇಕೆಂದು ಹೇಳುವುದಕ್ಕೆ ತುಸುವಾದರೂ ಕಾರಣವು ಸಿಕ್ಕುವಂತಿರುವುದು. ಆದರೂ ವನಸ್ಪತಿ ಮತ್ತು ಪ್ರಾಣಿವರ್ಗಗಳ ನಡುವಿರುವ ಭೇದವಾವುದೆಂಬುದನ್ನು ಹೇಳುವುದು ಮಾತ್ರ ಬಲು ಕಷ್ಟಸಾಧ್ಯವಿರುವುದೆಂದು ಒಪ್ಪಬೇಕಾಗುವುದು. ಶಾಸ್ತ್ರೀಯ ಶೋಧಗಳ ಬಲದಿಂದ ಈ ಪ್ರಶ್ನೆಯನ್ನು ಸಂಪೂರ್ಣವಾಗಿ ಬಿಡಿಸುವ ಹಲವು ಪ್ರಯತ್ನಗಳೂ ಮಾಡಲ್ಪಟ್ಟಿವೆ; ಅವುಗಳಿಗೆ ತುಸು ಯಶಸ್ಸೂ ಬಂದಿದೆಯೆಂದು ಹೇಳಬಹುದು.

ಎಲ್ಲ ಜೀವವರ್ಗಕ್ಕೂ ಮೂಲವಾದ ಒಂದೇತರದ ಜೀವರಸವು

ವನಸ್ಪತಿಗಳೂ ಪ್ರಾಣಿಗಳೂ ಒಂದೇ ಜೀವರೂಪದಿಂದ ಹುಟ್ಟಿ ಬೆಳೆಯುವವು. ಆ ಜೀವರೂಪಕ್ಕೆ "ಪ್ರೋಟೋಪ್ಲಾಸಮ್" ಎಂಬ ಹೆಸರು ಕೊಡಲ್ಪಟ್ಟಿದೆ. ಈ ಶಬ್ದವು ಗ್ರೀಕಭಾಷೆಯಿಂದ ಬಂದಿದ್ದು, ಅದರ ಸಂಪೂರ್ಣ ಅರ್ಥವು "ಜೀವನಾದಿರಸವೆ"ಂದು ಆಗುವುದು. ಎಂದರೆ ಎಲ್ಲ ಜೀವಕ್ಕೂ ಮೂಲಭೂತವಾದ ರಸವೆಂದು ಇದರ ಅರ್ಥವು. ಅದನ್ನೇ ನಾವು ಸಂಕ್ಷೇಪವಾಗಿ ಜೀವನರಸವೆಂದೂ ಜೀವರಸವೆಂದೂ ಸಂಬೋಧಿಸಿರುವೆವು. ಇನ್ನು ಈ ರಸವು ದ್ವಿವಿಧವಾಗಿದೆ. ಮೊದಲನೆಯದನ್ನು ನಿರ್ಬೀಜವೆಂದೂ, ಎರಡನೆಯದನ್ನು ಸಬೀಜವೆಂದೂ ಕರೆಯಬಹುದು. ಈ ರಸವು ಬಣ್ಣವಿಲ್ಲದ್ದೊಂದು, ಅರ್ಧಪಾರ್ದ ದ್ರವರೂಪವಾದ ವಸ್ತುವು. ಅದು ಲೋಳೆಯಂತೆ ಜಿಗುಟಾಗಿರುವುದು. ಕೇವಲ ದ್ರವರೂಪವಾಗಿಯೇ ಇತ್ತೆಂದರೆ, ಅದು ನಿರ್ಬೀಜರಸವೆಂದು ಕರೆಯಲ್ಪಡುತ್ತದೆ. ಅದರ ನಡುವೆ ಗಟ್ಟಿಯಾದುದೊಂದು ಬೀಜವಿತ್ತೆಂದರೆ ಅದಕ್ಕೆ ಸಬೀಜರಸವೆಂಬ ಹೆಸರು ಕೊಡಲ್ಪಡುತ್ತದೆ. ಎಲ್ಲಕ್ಕೂ ಮೊದಲು ನಿರ್ಬೀಜರಸವು ಹೊರಟಿರಬೇಕೆಂದೂ ಆಮೇಲೆ ಸಬೀಜರಸವು ಬಂದಿರಬೇಕೆಂದೂ ವಿಕಾಸವಾದಿಗಳು ತರ್ಕಿಸಿದ್ದಾರೆ. ಎಂದರೆ ಪ್ರಾರಂಭಕ್ಕೆ ಕಾಣಿಸಿಕೊಂಡ ಜೀವನರಸವು ಹರಿದಾಡುತ್ತಿತ್ತೆಂದೂ, ಆಮೇಲೆ ಅದರಲ್ಲಿ ಕೆಲವು ಭಾಗವು ಗಟ್ಟಿಯಾಗಿ ಕಾಳಿನಂತಹದೊಂದು ವಸ್ತುವು ಆ ರಸದಲ್ಲಿ ಕಾಣಹತ್ತಿತೆಂದೂ ಇದರ ಅರ್ಥವು. "ಸಬೀಜ ಅಥವಾ ನಿರ್ಬೀಜ ಜೀವನರಸವೇ ಎಲ್ಲ ಚೈತನ್ಯಕ್ಕೆ ಜಡರೂಪವಾದ ಮೂಲವಾಗಿರುವುದೆ"ಂದು ಹಕ್ಸಲೀ ಎಂಬವನು ತನ್ನ "ದಿ ಫಿಜಿಕಲ್ ಬೇಸಿಸ್ ಆಫ್ ಲಾಯಿಫ್"

ಎಂಬ ನಿಬಂಧವಲ್ಲಿ ಸಾದ್ಯಂತವಾಗಿ ವಿವರಿಸಿ ಹೇಳಿದ್ದಾನೆ. ಜೀವರಸಕ್ಕಿಂತಲೂ ನಾವು ಮುಂದೆ ಹೋಗಿ ಜೀವದ ಬಗ್ಗೆ ಹೆಚ್ಚಾದ ಶೋಧವನ್ನು ಮಾಡುವುದು ಶಕ್ಯವಿಲ್ಲ. ಜೀವನರಸವು ಮೂಲತಃ ಸಚೇತನವಾದ ವಸ್ತುವಾಗಿರುವುದು. ಅದರ ಮೇಲೆ ಯಾವತರವ ಪ್ರಯೋಗಗಳನ್ನು ಮಾಡುವುದೂ ಶಕ್ಯವಿಲ್ಲ. ಹಾಗೆ ನಾವು ಬಲವಂತವಾಗಿ ಪ್ರಯೋಗಮಾಡಹೋದರೆ, ಅದು ನಿರ್ಜೀವವಾದ ರಸ ವಾಗಿಬಿಡುವುದು. ಆದುದರಿಂದ ಉಳಿದ ಜಡದ್ರವ್ಯಗಳಿಂದ ಈ ರಸವು ಹೇಗೆ ಹುಟ್ಟುತ್ತದೆಂಬುದನ್ನು ನಿರ್ಣಯಿಸುವುದು ಅಸಾಧ್ಯವು. ಆದರೆ ಒಂದು ಮಾತನ್ನು ಮಾತ್ರ ನಿಶ್ಚಯದಿಂದ ಹೇಳಬಹುದು: ಎಲ್ಲೆಲ್ಲಿ ಚೈತನ್ಯವು ಕಂಡುಬರುವುದೋ, ಅದೆಲ್ಲ ಈ ರಸದ ಆಧಾರದಿಂದಲೇ. ಎಂದರೆ ಈ ರಸರಹಿತವಾದ ಚೈತನ್ಯವನ್ನು ವಿಂಗಡಿಸಿ ತೋರಿಸುವುದು ಯಾವನಿಗೂ ಸಾಧ್ಯವಿಲ್ಲ. ಚೈತನ್ಯ ಮತ್ತು ಜೀವನ ರಸಗಳು ಎಲ್ಲೆಲ್ಲಿಯೂ ಕೂಡಿಯೇ ಸಿಕ್ಕುವವೆಂದು ಇದರ ಅರ್ಥವು. ಆದರೆ ಜೀವನರಸವಿದ್ದಲ್ಲೆಲ್ಲ ಚೈತನ್ಯವಿರಬೇಕೆಂಬ ನಿಯಮವಿಲ್ಲ. ಎಂದರೆ ಜೀವನ ರಸವು ನಿರ್ಜೀವವಾಗಿರುವದು ಶಕ್ಯವಿದೆ. ರಸಾಯನ ಶಾಸ್ತ್ರಗಳ ಸಹಾಯದಿಂದ ನಾವು ಈ ಜೀವನರಸದ ಗುಟ್ಟನ್ನು ಒಡೆಯಲಾರೆವೆಂಬುದೇ ಇದೆಲ್ಲದರ ಇತ್ಯರ್ಥವು.

ಜೀವರಸದ ಘಟಕದ್ರವ್ಯಗಳು

ಇನ್ನೂವರೆಗೆ ಪರಿಕಿಸಿದ ಎಲ್ಲತರದ ಜೀವನರಸಗಳಲ್ಲಿ ಮುಖ್ಯವಾಗಿ ನಾಲ್ಕು ಧಾತುಗಳಿರುವವೆಂದು ಹೇಳಬಹುದು. ಇದ್ದಲಿ (ಕಾರ್ಬನ್), ಹೈಡ್ರೋಜನ್, ಪ್ರಾಣವಾಯು (ಆಕ್ಸಿಜನ್), ಮತ್ತು ನೈಟ್ರೋಜನ್ ಎಂಬವುಗಳೇ ಆ ಘಟಕದ್ರವ್ಯಗಳು. ಆದರೆ ಇವುಗಳ ಅನ್ಯೋನ್ಯಪ್ರಮಾಣವು ಮಾತ್ರ ಬಹಳ ತೊಡಕಿನದಾಗಿದೆ. (Physical Basis of life P. 49). ಇವುಗಳಿಗೆ ಗಂಧಕವನ್ನೂ ಕೂಡಿಸಬಹುದು ( Easy outline of Evolution. P. 52). ಫಾಸ್ಫೋರಸ್, ಕಬ್ಬಿಣ, ಕ್ಲೋರಾಯಿನ್, ಪೊಟಾಶಿಯಮ್, ಸೋಡಿಯಮ್, ಕ್ಯಾಲ್ಸಿಯಮ್, ಮ್ಯಾಗ್ನೇಸಿಯಮ್‌ಗಳಾವರೂ ಅಲ್ಪಪ್ರಮಾಣದಿಂದ ಇರುವವೆಂದು ( Evolution of living Organisms P. P. 10-11 ) ಬೇರೊಬ್ಬರು ಹೇಳಿದ್ದಾರೆ. ಆದರೆ ಇವೆಲ್ಲವುಗಳಲ್ಲಿ ಕಾರ್ಬನ್ ಎಂದರೆ ಅಂಗಾರವೇ ಬಹು ಮಹತ್ತ್ವದ ಭಾಗವಾಗಿರುವುದೆಂಬುದನ್ನು ಲಕ್ಷ್ಯದಲ್ಲಿಡ

ತಕ್ಕದ್ದು. ಎಂದಮೇಲೆ, ಇಷ್ಟೆಲ್ಲ ಅದರ ಘಟಕಾವಯವಗಳೂ ಅವುಗಳ ಪರಸ್ಪರ ಪ್ರಮಾಣವೂ ಗೊತ್ತಿರುವುದರಿಂದ ಈ ದ್ರವ್ಯಗಳನ್ನು ನಾವು ಬೇಕಾದ ಅಳತೆಯಿಂದ ಕೂಡಿಸಿಕೊಂಡು ಹೊಸ ಚೈತನ್ಯವನ್ನು ತಯಾರಿಸುವುದು ಶಕ್ಯವಾಗಿರಬೇಕಲ್ಲವೆ ? ಎಂದರೆ, ಇದನ್ನೆ ಬೇರೆ ಶಬ್ದಗಳಲ್ಲಿ ಹೇಳಬೇಕಾದರೆ, ನಮ್ಮ ಶಾಸ್ತ್ರೀಯ ಪ್ರಯೋಗಶಾಲೆಗಳಲ್ಲಿ ನಾವು ಜೀವವನ್ನು ಹುಟ್ಟಿಸಬಹುದೇ ಎಂದು ಕೇಳಬಹುದು. ಇದಕ್ಕೆ "ಅಹುದು, ಶಕ್ಯವಿದೆ"ಯೆಂದು ಉತ್ತರಕೊಡುವ ಬಹುಮಾನವನ್ನು ಪಡೆಯುವ ಅಗ್ರಪೂಜೆಗಾಗಿ ಹಲವು ಭೌತಿಕಶಾಸ್ತ್ರಜ್ಞರು ಎಡೆಬಿಡದೆ ದಾವತಿಮಾಡುತ್ತಿದ್ದರೂ, ಈ ಪ್ರಶ್ನೆಯು ಇನ್ನೂ ವರೆಗೆ ನಿರುತ್ತರವಾಗಿಯೇ ಉಳಿದಿದೆ. ಮೊನ್ನೆ ಮೊನ್ನೆ ಎಂದರೆ ಎರುಷೆರಡು ವರುಷಗಳ ಹಿಂದೆ ಇಂಗ್ಲಂಡದ ಪ್ರೊಫೇಸರರೊಬ್ಬರು ನಾನು ಈ ಪ್ರಶ್ನೆಯನ್ನು ಬಿಡಿಸಿದಂತಾಗಿದೆಯೆಂದು ಹೇಳಿದರು. ಆದರೂ ಅದರ ಬಗ್ಗೆ ವಿಶೇಷವಾದ ಸರ್ವಮಾನ್ಯ ಸಿದ್ಧಾಂತಗಳು ಇನ್ನೂ ವರೆಗೆ ಹೊರಟಂತೆ ಕಾಣಿಸುವುದಿಲ್ಲ.

ಹಾಗಾದರೆ ಸೂರ್ಯನಿಂದ ಭಿನ್ನವಾದ ಈ ಪೃಥ್ವಿಯ ಮೇಲೆ ಮತ್ತೆ ಮೊದಲು ಜೀವವು ಹೇಗೆ ಹುಟ್ಟಿತು ? ಎಂದು ಕೇಳಿದರೆ ವಿಕಾಸವಾದಿಗಳು ನಾಚಿ ಕೆಳಗೆ ಮೋರೆ ಹಾಕಬೇಕಾಗುವುದು. ಜೀವವೆಲ್ಲ ಜಡದ ಮೇಲೆಯೇ ಅವಲಂಬಿಸಿರುವುದೆಂದು ಜಂಭದಿಂದ ಹೇಳುವ ಹಕ್‌ಸಲೆಯೂ ಕೂಡ ಈ ಮಾತನ್ನು ಒಪ್ಪಿಕೊಂಡಿದ್ದಾನೆ. ಅದು ತನ್ನಷ್ಟಕ್ಕೆ ತಾನೇ ಹುಟ್ಟಿರುವುದೆಂದು (Spontaneous Generation) ಹೇಳಿ ಹಲವು ವಿಕಾಸವಾದಿಗಳು ಈ ಪ್ರಶ್ನೆಯ ಮಹತ್ತ್ವವನ್ನೆ ಕಡಿಮೆಮಾಡಲೆಣಿಸಿದ್ದಾರೆ. ಎಂದರೆ ಜೀವದ ಉತ್ಪತ್ತಿಗೆ ಅನುಕೂಲವಾದ ಮತ್ತು ಅತ್ಯಾವಶ್ಯಕವಾದ ಕೆಲವು ಸಂಗತಿಗಳು (ಉಷ್ಣತೆ, ಹವಾಮಾನ ಮೊದಲಾದವುಗಳು) ಪೃಥ್ವಿಯ ಮೇಲಿನ ಆ ಸ್ಥಿತಿಯಲ್ಲಿ ತಾವಾಗಿಯೇ ಸಂಭವಿಸಿದ್ದರಿಂದ, ಜೀವವು ಅಕಸ್ಮಾತ್ತಾಗಿ ಆವಿರ್ಭವಿಸಿತೆಂದು ಅವರ ಅಂಬೋಣವಿದೆ. ಆದರೆ ಹಾಗೆ ಹೇಳುವುದೆಂದರೆ ತಮ್ಮ ಬುದ್ಧಿಯ ಕುಂಟತನವನ್ನೇ ಅಪ್ರತ್ಯಕ್ಷವಾಗಿಯಾದರೂ ಸ್ಪಷ್ಟವಾಗಿ ಒಪ್ಪಿಕೊಂಡಂತಾಗುವುದಲ್ಲದೆ ಬೇರೆಯಲ್ಲ. ಈ ಮಾತನ್ನು ಸಾಮುವೆಲ್ ಲೇಂಗರೆಂಬವರು (ಆಧುನಿಕ ಶಾಸ್ತ್ರವೂ ವಿಚಾರವೂ ಪು. ೩೨) ನಿರಭಿಮಾನದಿಂದ ಒಪ್ಪಿಕೊಂಡಿರುವರು. ಆದುದರಿಂದ

ಪೃಥ್ವಿಯ ಮೇಲೆ ಜೀವವು ಹೇಗೆ ಹುಟ್ಟಿರಬಹುದೆಂಬುದು ಎಲ್ಲರಿಗೂ ಗೂಢವಾಗಿಯೇ ಇದೆ.

ಒಟ್ಟಿನ ಮೇಲೆ ಜೀವವು ತಾನಾಗಿಯೆ ಹುಟ್ಟಿದೆಯೆಂಬುವ ತತ್ತ್ವವು ಸಿದ್ಧವಾಗಿಲ್ಲೆಂದು ಭೌತಿಕ ಶಾಸ್ತ್ರಜ್ಞರೆಲ್ಲ ನಿರಾಗ್ರಹ ಬುದ್ಧಿಯಿಂದ ಒಡಂಬಡಲೇಬೇಕು; ಮತ್ತು ಜೀವದ ಮೂಲ ಆವಿರ್ಭಾವದ ಬಗ್ಗೆ ಭೌತಿಕ ಶಾಸ್ತ್ರವು ಕುಂಠಿತವಾಗುತ್ತದೆಂದು ಗೋಣು ಹಾಕಲಿಕ್ಕೆಬೇಕು; ಹಾಗೂ ಅದರ ಉಪಪತ್ತಿಯನ್ನು ವಿವರಿಸಿ ಹೇಳಬಹುದಾದ ಯಾವ ನಿಯಮವೂ ನಮಗೆ ಉಪಲಬ್ಧವಾಗಿಲ್ಲೆಂದು ಸಮತಿಸಲಿಕ್ಕೇ ಬೇಕು.

ಈ. ಎಸ್. ಗುಡ್‌ರಿಚ್‌ರೆಂಬವರಾದರೂ ತಮ್ಮ (Evolution of living Organisms) ಎಂಬ ಪುಸ್ತಕದ ೨೦ ನೇ ಪುಟದ ಮೇಲೆ ಇದೇ ಅಭಿಪ್ರಾಯವನ್ನೇ ಮುಂದೆ ಮಾಡಿರುವರು. "ನಮಗೆ ಸದ್ಯಕ್ಕೆ ಗೊತ್ತಿದ್ದ ಮಟ್ಟಿಗೆ ಹೇಳಬೇಕಾದರೆ, ಜೀವಿಗಳು ತಾವಾಗಿಯೇ ಜಡದಿಂದ ಎಂದೂ ಹುಟ್ಟಲಾರವು. ಮೊದಲಿದ್ದ ಜೀವದಿಂದಲೇ ಹೊಸಜೀವದ ಆವಿರ್ಭಾವವಾಗುವುದು. ಆದರೂ ಪೃಥ್ವಿಯ ಇತಿಹಾಸದಲ್ಲಿ ಆವುದೋ ಒಂದು ಕಾಲಕ್ಕೆ ಜೀವದ ಉತ್ಪತ್ತಿಗೆ ಬೇಕಾಗಬಹುದಾದ ಮತ್ತು ಈಗಿನಕ್ಕಿಂತ ಬಹುಶಃ ತೀರ ಭಿನ್ನವಾದ ಸಂಗತಿಗಳು (Circumstances) ಅಕಸ್ಮಾತ್ತಾಗಿ ಕೂಡಿಕೊಂಡೊಡನೆ ಸಚೇತನ ಜೀವನರಸವು ಮತ್ತ ಮೊದಲು ಈ ಜಗತ್ತಿನಲ್ಲಿ ಕಾಣಿಸಿಕೊಂಡಿರಬೇಕೆಂದು ಕಲ್ಪಿಸಲಿಕ್ಕೇಬೇಕು. ಪುನಃ ಆ ಸಂಗತಿಗಳ ಸಂಯೋಗವು ಭೌತಿಕ ಸೃಷ್ಟಿಯಲ್ಲಾಗಲಿ, ನಮ್ಮ ಪ್ರಯೋಗ ಶಾಲೆಗಳಲ್ಲಾಗಲಿ ಇನ್ನೆಂದಿಗೂ ಬಹುಶಃ ಸಂಭವಿಸಲಾರದು. ಎಂತೆಯೇ ಜೀವವಿಕಾಸದ ಮೊದಲಿನ ಕೆಲವು ಮೆಟ್ಟಿಲುಗಳು ನಮಗೆ ಕಡೆಯವರೆಗೂ ಗೊತ್ತಾಗಲಿಕ್ಕಿಲ್ಲ. ಆ ಉಷ್ಣತೆ (Temperature), ದ್ರವತೆ (Moisture), ಭಾರ (Pressure), ಮತ್ತು ಉಳಿದ ಸಂಗತಿಗಳೆಲ್ಲ ಕೂಡಿ ಹಲವು ತರದ ಬಹುಮಹತ್ತ್ವವಾದ ಸಂಯುಕ್ತದ್ರವ್ಯಗಳನ್ನು (Compounds) ಹುಟ್ಟಿಸಿರಬಹುದು. ಇವುಗಳಲ್ಲಿ ಎಷ್ಟೋ ದ್ರವ್ಯಗಳು ಬಹಳೇ ಅಸ್ಥಿರವಾಗಿರುವುದರಿಂದ, ಹುಟ್ಟಿದೊಡನೆಯೇ ಅವು ಮತ್ತೆ ಬೇರೆ ಬೇರೆಯಾಗಿ ತಮ್ಮ ಮೊದಲಿನ ರೂಪವನ್ನು ಪಡೆದಿರಬಹುದು. ಬೇರೆ ಕೆಲವು ತುಸು ಹೆಚ್ಚು ಸ್ಥಿರವಾಗಿರುವುದರಿಂದ ಆ ಸಂಯುಕ್ತದ್ರವ್ಯಗಳು ಹೆಚ್ಚು ಕಾಲ ಬಾಳಬೇಕೆಂಬುದು ಸಹಜವಿದೆ. ಮತ್ತು ಈ ಕಾರಣದಿಂದಲೇ ಅವುಗಳ ಸಂಖ್ಯೆಯಾದರೂ ಬೆಳೆಯುತ್ತ ಹೋಗುವುದು. ಇನ್ನೂ ಉಳಿದ ಕೆಲವು ಸಂಯುಕ್ತಗಳು

ಜೀವದ ಉದಯವು

ನಾಶಹೊಂದಿದೊಡನೆಯೇ ಬಹುಶಃ ಯಾವುದಾದರೊಂದು Katalytic ವಸ್ತುವಿನ ಸಹಾಯದಿಂದ ಪೂರ್ವರೂಪವನ್ನು ಸುಧಾರಿಸಿಕೊಳ್ಳಲಿಕ್ಕೆ ಯತ್ನ ಮಾಡಹತ್ತುವವು. ಈ ರೀತಿಯಾಗಿ ಆತ್ಮಸುಧಾರಣೆಯನ್ನು ಮಾಡಿಕೊಳ್ಳುವ ಸಂಯುಕ್ತದ್ರವ್ಯವೊಮ್ಮೆ ಹುಟ್ಟಿ ಈ ದಾರಿಯನ್ನು ಹಿಡಿಯಿತೆಂದರೆ, ಅದು ತನ್ನ ಆಯುಷ್ಯವನ್ನು ಹೆಚ್ಚಿಸಿಕೊಳ್ಳುವ ಒಲವಿಗೆ ಬಿದ್ದು, ಉಳಿದ ದ್ರವ್ಯಗಳೊಡನೆ ಕೂಡಿಕೊಳ್ಳಹತ್ತುವುದು. ಅಥವಾ ಎಷ್ಟೋ ದಿವಸಗಳ ಹಿಂದೆ ಪ್ರೊ. ಲ್ಯಾಂಕೆಸ್ಟರ ವರು ಹೇಳಿದಂತೆ ತನಗಿಂತ ಕಡಿಮೇ ಪ್ರಮಾಣದಿಂದ ಮಿಶ್ರಿತವಾದ (less complex) ದ್ರವ್ಯಗಳನ್ನು ತಿಂದು ಅವುಗಳ ಮೇಲೆ ಜೀವಿಸಹತ್ತಬಹುದು. ಯಾಕೆಂದರೆ ಸುತ್ತಲಿನ ಪರಿಸ್ಥಿತಿಯು ಅನುಕೂಲವಿರುವ ವರೆಗೆ ಯಾವುದೇ ರಾಸಾಯನಿಕ ವ್ಯಾಪಾರವು ಅವ್ಯಾಹತವಾಗಿ ನಡೆಯುವುದೆಂಬುದು ಸಿದ್ಧವಾದ ಮಾತು. ಮದ್ದಿನ ರೇಷೆಯು ಒಂದು ತುದಿಯಿಂದ ಮತ್ತೊಂದು ತುದಿಯವರೆಗೆ ಅವಿಚ್ಛಿನ್ನವಾಗಿದ್ದುದಾದರೆ, ಅದು ತಪ್ಪದೇ ಒಂದೇ ಸವನೆ ಹಾರುತ್ತಿರುತ್ತದೆ. ಮತ್ತು ಮದ್ದಿನ ಪುಡಿಯನ್ನು ಪೂರೈಸಿಕೊಡುವವರೆಗೆ ಅದು ಸುಡುತ್ತಲೇ ಹೋಗುವುದು.

"ಜೀವವಿಕಾಸದ ಮೊದಲಿನ ಮೆಟ್ಟಿಲುಗಳಿಗಾದರೂ ಬಲಿಷ್ಠರ ಬಾಳ್ವೆ (Survival of the fittest) ಯೆಂಬುವ ತತ್ತ್ವವು ಅಕ್ಷರಶಃ ಹತ್ತುತ್ತದೆಂದು ಹೇಳಬಹುದು. ಯಾವ ಸಂಯುಕ್ತಗಳು ಹೆಚ್ಚು ಸಂಪೂರ್ಣವಾಗಿ ಸ್ವಾವಲಂಬಿಯೆಂದರೆ ಸ್ವಹಿತವಾಗುವಂತೆ ವ್ಯವಸ್ಥಿತವಾಗಿ ಇರಹತ್ತುವವೊ, ಅವು ಉಳಿದವುಗಳಿಗಿಂತ ಹೆಚ್ಚು ಕಾಲ ಬಾಳುವವು. ಇದೇ ರೀತಿಯಿಂದಲೇ "ಆ್ಯನಾಬೊಲಿಕ್" (Anabolic) ಮತ್ತು ಕೆಟಾಬೋಲಿಕ್ (Katabolic) ಪ್ರೋಟೀನುಗಳಿಂದ (Proteins) ಕಟ್ಟಕಡೆಗೆ ಜೀವನರಸವು ಅಸ್ತಿತ್ವದಲ್ಲಿ ಬಂದಿರಬಹುವೆಂದು ನಾವು ಕಲ್ಪಿಸಿದರೆ ತಪ್ಪಾಗಲಿಕ್ಕಿಲ್ಲ. ಹೀಗೆ ಜೀವರಸವು ಸಿದ್ಧವಾಗುವ ಪೂರ್ವದಲ್ಲಿ ಅಸಂಖ್ಯವಾದ ಸಂಯುಕ್ತಗಳು ಹುಟ್ಟಿ, ಈ ಕೆಲಸವನ್ನು ಕೊನೆಗಾಣಿಸಲಾರದೆ ನಾಮಶೇಷವಾಗಿ ಹೋಗಿರಬಹುದು. ಹಾನಿಕರವಾಗುವಷ್ಟು ವಿಪರೀತವಾದ ಸ್ಥಿರತೆ( fixity )ಯಿಂದಾಗಲಿ ಅಸ್ಥಿರತೆಯಿಂದಾಗಲಿ ಜೀವನರಸರೂಪವನ್ನು ಹೊಂದುವ ಅವುಗಳ ಪ್ರಯತ್ನಗಳೆಲ್ಲ ನಿಷ್ಫಲವಾಗಿರಬಹುದು. ಅದರಂತೆಯೇ ಎಷ್ಟೋ ಕಾರಣಗಳ ಮೂಲಕ ಜೀವವು ಬಹುಶಃ ಜಲದಲ್ಲಿ ಹುಟ್ಟಿರಬೇಕೆಂದು ತರ್ಕಿಸುವುದು ಸಯುಕ್ತಿಕವಾಗಿದೆ. ಯಾಕೆಂದರೆ ಸಮುದ್ರದ ನೀರಿ

ನಲ್ಲಿರುವ ಮೂಲ ಘಟಕಗಳೇ ಜೀವನರಸದಲ್ಲಾದರೂ ಇರುವವೆಂದು ಕಂಡು ಬಂದಿದೆ. ಮತ್ತು ಅವುಗಳ ಪ್ರಮಾಣವಾದರೂ ಸರಾಸರಿ ಅಷ್ಟೇ ಇರುವು ದೆಂದು ಹೇಳಬಹುದು. ಇದಕ್ಕೂ ಮುಂದೆ ನಮ್ಮ ಕಲ್ಪನೆಯನ್ನು ಚಾಚಿ, ಪ್ರಾರಂಭದಲ್ಲಿ ಆವುದೊಂದು ಸ್ಪಷ್ಟ ಆಕಾರವಿಲ್ಲದ ಈ ಜೀವನ ರಸದ ಕೆಲ ವೊಂದು ಭಾಗಕ್ಕೆ ಸಣ್ಣ ಸಣ್ಣ ಗುಂಪುಗಳಲ್ಲಿ ಘನವಾಗಿ ಸಿಲ್ಲುವುದು ಹೆಚ್ಚು ಉಪ ಯುಕ್ತವಾದುದೆಂದು ಕಂಡು ಬಂದುದರಿಂದ, ಆ ಘನವಾದ ಬೀಜಗಳೇ ಮುಂದೆ ಜೀವಕೋಶಗಳಾ ( Cells ) ದುವೆಂದು ಕಲ್ಪಿಸಬಹುದು. ಆದರೆ ಇಲ್ಲಿಂದ ಮುಂದಿನ ಜೀವವಿಕಾಸವನ್ನು ಮಾತ್ರ ನಮಗೆ ಚೆನ್ನಾಗಿ ಗೊತ್ತಿದ್ದ ಸಾಹಿತ್ಯ ಗಳ ಮೇಲಿಂದ ನಿರ್ಣಯಿಸಿ ಹೇಳುವುದು ಸುಲಭವಾಗಿದೆ."

ಎಲ್ಲ ಜೀವದ ಹತ್ತು ಗುಣಧರ್ಮಗಳು

ಹಾಗಾದರೆ ಜೀವಜಡಗಳಲ್ಲಿಯ ಭೇದವೇನು ? ನಾವು ಮೇಲೆ ಹೇಳಿದಂತೆ "ಜೀವನರಸದಲ್ಲಿರುವ ದ್ರವ್ಯಗಳೆಲ್ಲ ಜಡವಾಗಿರುವವೆಂದ ಮೇಲೆ ಜಡಕ್ಕೂ ಜೀವಕ್ಕೂ ಇರಬೇಕಾದ ಭೇದವು ಆ ಘಟಕದ್ರವ್ಯಗ ಳನ್ನು ಕೂಡಿಸುವುದರಲ್ಲಿಯೇ ಇರಬೇಕೆಂಬ ಮಾತು ನಿರ್ವಿವಾದವಿದೆ " ( ಸೃಷ್ಟಿಯ ಕಥೆಯು. ಪು. ೬೫ ). ಈಝಿ ಔಟ್‌ಲೈನ್ ಆಫ್ ಎವ್ಹೊಲೂಶನ್ ಎಂಬ ಪುಸ್ತಕದ ಐದನೆಯ ಪ್ರಕರಣದಲ್ಲಿ ಜೀವನಾದಿ ರಸದ ಗುಣಧರ್ಮಗಳನ್ನೆಲ್ಲ ಸವಿಸ್ತಾರವಾಗಿ ವಿವರಿಸಿದ್ದಾರೆ. ಅವರ ಮೇಲಿಂದ ಜೀವ ಜಡಗಳೊಳಗಿರುವ ಭೇದವು ಸ್ಪಷ್ಟವಾಗಿ ತಿಳಿಯುವಂತಿರುವುದರಿಂದ ಅವುಗಳನ್ನೇ ಉದ್ಧರಿಸಿ ನಾವಿಲ್ಲಿ ಬರೆಯುವೆವು. (೧) ಸಚೇತನ ಜೀವನರಸವು **ಚಲಿಸು ತ್ತದೆ.** ಸೂಕ್ಷ್ಮದರ್ಶಕಯಂತ್ರದ ಸಹಾಯದಿಂದ ಈ ಮಾತಿನ ಸತ್ಯತೆಯನ್ನು ಮನಗಾಣಬಹುದು. (೨) ಅದು **ಕೆರಳುತ್ತದೆ.** ಎಂದರೆ ಹೊರಗಿನ ವಸ್ತು ಗಳೊಡನೆ ಸಂಬಂಧ ಬಂದೊಡನೆ ತಾನು ಏನುಮಾಡಬೇಕೆಂಬುದರ ಅರಿವು ಅದ ಕ್ಕಿರುತ್ತದೆ. ಈ ಸ್ವಭಾವಕ್ಕೆ ಇಂಗ್ಲೀಷದಲ್ಲಿ Irritability ಎಂದು ಕರೆಯು ತ್ತಾರೆ. ಜೀವನ ರಸದ ಈ ಧರ್ಮವು ಬಹಳ ಮಹತ್ತ್ವವುಳ್ಳದ್ದಾಗಿದೆ. ಎಲ್ಲ ಶಿಕ್ಷ ಣವೂ ಪ್ರಗತಿಯೂ ಇದರ ಮೇಲೆಯೇ ಅವಲಂಬಿಸಿರುವವು. ಇದರ ಅರ್ಥ ವೇನೆಂದರೆ: ಆ ರಸವು ಹೊರಗಿನ ವಸ್ತುಗಳ ಸಂಸರ್ಗದಿಂದ ತನಗೆ ಬೇಕಾದ ಮತ್ತು ಶಕ್ಯವಿದ್ದ ಬದಲಾವಣೆಗಳನ್ನು ಹೊಂದುತ್ತದೆ. ಇದರ ಮೇಲೆ ಹೀಗೆ ಪರಿಣಾಮವನ್ನುಂಟುಮಾಡುವ ವಸ್ತುವಿಗೆ ಉತ್ತೇಜಕ ಅಥವಾ ಪ್ರೇರೇಪಕ (Stimulus) ವೆಂದು ಹೆಸರು ಕೊಡಬಹುದು. ಈ ಪ್ರೇರಕ ವಸ್ತುವು

ಹಲವು ತರದ್ದಾಗಿರಬಹುದು. ಗಾಳಿ, ಹವೆಯೊಳಗಿನ ಆರ್ದ್ರತೆ-ಉಷ್ಣತೆಗಳು, ಅಥವಾ ಸ್ವಲ್ಪದರಲ್ಲಿ ಸುತ್ತಲಿನ ಪರಿಸ್ಥಿತಿಯೆಲ್ಲ ಅದಕ್ಕೆ ಪ್ರೇರಕವಾಗುವುದೆಂದು ಹೇಳಬಹುದು. ಇವುಗಳ ಪ್ರೇರಣೆಗೆ ಸರಿಯಾಗಿ ತಾಳಹಾಕುವ ಅಥವಾ ಉತ್ತರಕೊಡುವ ಧರ್ಮವೇ ಜೀವನರಸದಲ್ಲಿರುವುದು. (೩) ಜೀವನರಸವು ಹೊರಗಿನ ವಸ್ತುಗಳನ್ನು **ಹೀರಿಕೊಳ್ಳುತ್ತದೆ.** ಹೀಗೆ ಹೀರಿಕೊಳ್ಳಲ್ಪಡುವ ಆಹಾರವು ಸಜೀವಿಗಳ ಶರೀರವೆಂದರೆ ರಕ್ತಮಾಂಸಗಳಾಗಿರಬಹುದು, ಅಥವಾ ಕೇವಲ ನಿರ್ಜೀವವಾದ ಜಡವೆಂದರೆ ಅಂಗಾರ, ಹೈಡ್ರೋಜನ್, ಆಕ್ಸಿಜನ್ ಮೊದಲಾದ ವಸ್ತುಗಳಾಗಿರ ಬಹುದು. (೪) ಅನ್ನವನ್ನು ಪಚನ ಮಾಡಿಕೊಳ್ಳುವ ಈ ಶಕ್ತಿಯಿಂದಲೇ ಅದು **ದೊಡ್ಡದಾಗ**ಹತ್ತುವುದು. ಎಂದರೆ ಅದಕ್ಕೆ **ಬೆಳವಣಿಗೆ**ಯುಂಟು. (೫) ಜೀವನರಸವು **ಉಸುರಾಡಿಸುವುದು.** ಎಂದರೆ ದೂಷಿತವಾದ ತನ್ನೊಳಗಿನ ವಾಯುಗಳನ್ನು ಹೊರಕ್ಕೆ ಬಿಟ್ಟು, ಶುದ್ಧವಾದ ಹೊರಗಿನ ವಾಯುಗಳನ್ನು ಒಳಕ್ಕೆ ತೆಗೆದುಕೊಳ್ಳುವುದು. (೬) ಅದಕ್ಕೆ **ಪ್ರಜನನ ಶಕ್ತಿ**ಯುಂಟು. ಎಂದರೆ ತನ್ನಂತಹ ಬೇರೆ ಚೈತನ್ಯವನ್ನು ಹುಟ್ಟಿಸುವ ಶಕ್ತಿಯು ಅದರಲ್ಲುಂಟು. ಮೊದಲು ಒಂದೇ ಜೀವಕೋಶವುಳ್ಳದ್ದಾಗಿದ್ದರೆ ಮುಂದೆ ಅದು ಬೆಳೆದು ಎರಡು ಜೀವಕೋಶಗಳುಳ್ಳದ್ದಾಗುವುದು. ಅದೇ ಮುಂದೆ ನಾಲ್ಕು, ಎಂಟು, ಹದಿನಾರು ಹೀಗೆ ಹೆಚ್ಚೆಚ್ಚಾಗುತ್ತ ಹೋಗುತ್ತದೆ. ಪ್ರಾಣಿಗಳ ಶರೀರಗಳೆಲ್ಲ ಈ ರೀತಿಯಿಂದಲೇ ಬೆಳೆದು ದೊಡ್ಡವಾದವು. ಮನುಷ್ಯ ದೇಹವಾದರೂ ಇದಕ್ಕೆ ಅಪವಾದವಾಗಿಲ್ಲ. ಗಂಡಸಿನ ವೀರ್ಯಜಂತುವೂ (Sperm), ಹೆಂಗಸಿನ ತತ್ತಿಯೂ (Ovum) ಕೂಡಿ ಒಂದು ಜೀವಕೋಶವುಂಟಾಗುವುದು. ಹೀಗಾಗುವುದಕ್ಕೇ ಗರ್ಭಗಟ್ಟೋಣವೆಂದು ಹೆಸರು. ಮುಂದೆ ತಾಯಿಯ ಗರ್ಭಾಶಯದಲ್ಲಿ ಬೆಳೆದು ಅದರಲ್ಲಿ ಎರಡು ಜೀವಕೋಶಗಳು ಕಾಣಹತ್ತುವವು. ಮೊದಲಿನ ಜೀವಕೋಶದಲ್ಲಿ ಒಂದು ಬೀಜವೂ, ಅದರ ಸುತ್ತಲೂ ಲೋಳೆಯಂತಹದೊಂದು ರಸವೂ ಇರುವುದೆಂದು ಮೇಲೆ ಹೇಳಿರುವೆವಷ್ಟೆ ? ಆ ಬೀಜದ ಅರ್ಧಭಾಗವೂ, ರಸದ ಅರ್ಧಭಾಗವೂ ಕೂಡಿ ಬೇರೊಂದು ಜೀವಕೋಶವಾಗುವುದು. ಮುಂದೆ ಇದೇ ರೀತಿಯಿಂದ ನಾಲ್ಕು, ಎಂಟು ಹೀಗೆ ಬೆಳೆಯುತ್ತ ಹೋಗಿ ಕೊಟ್ಯಾವಧಿ ಜೀವಕೋಶಗಳಿಂದ ಕೂಡಿದ ನಮ್ಮ ದೇಹವು ಅಸ್ತಿತ್ವದಲ್ಲಿ ಬರುವುದು. ಈ ಜೀವಕೋಶಗಳಲ್ಲಿ ಕೆಲವು ಹಸ್ತನೆಂಬ ಅವ

ಯವಕ್ಕೆ ವಿಶೇಷ ಉಪಯೋಗ ಬೀಳುವಂತಿದ್ದರೆ, ಬೇರೆ ಕೆಲವು ಕಾಲುಗಳಿಗೆ, ಇನ್ನೂ ಕೆಲವು ಎಲುಬುಗಳಿಗೆ, ಮಾಂಸಕ್ಕೆ, ಸ್ನಾಯುಗಳಿಗೆ, ಹೀಗೆ ಆ ಒಂದೇ ಜೀವಕೋಶದಿಂದ ನಾನಾರೂಪವಾದ ನಮ್ಮ ವಿಚಿತ್ರದೇಹವು ಬೆಳೆಯಹತ್ತುತ್ತದೆ. (೭) ಅದು ತನಗೆ ಬೇಡಾದ ವಸ್ತುಗಳನ್ನು ಹೊರಕ್ಕೆ ದೂಡುತ್ತದೆ. ಎಂದರೆ ಜೀವನರಸವು **ಮಲವಿಸರ್ಜನೆ**ಮಾಡುತ್ತದೆ. (೮) ಅದು ಬೇಕಾದಾಗ **ಆಕುಂಚನವನ್ನು** ಹೊಂದುತ್ತದೆ. (೯) ಅದು **ವಾಹಕವಾದ ವಸ್ತು**ವಾಗಿದೆ. ಎಂದರೆ ಪ್ರೇರಕವಸ್ತುವನ್ನು ಆ ಜೀವಕೋಶದ ಯಾವುದೇ ಭಾಗದ ಸಮೀಪಕ್ಕೆ ತಂದರೂ, ಅದರ ಉಳಿದಭಾಗಗಳ ಮೇಲೆಲ್ಲ ಅದರ ಪರಿಣಾಮಗಳಾಗುತ್ತವೆ. ಕಬ್ಬಿಣ, ತಾಮ್ರ ಮೊದಲಾದ ಧಾತುಗಳ ಉದ್ದನ್ನ ತುಂಡುಗಳ ಒಂದು ತುದಿಯನ್ನು ಬೆಂಕಿಯಲ್ಲಿಟ್ಟರೆ, ಆ ತುಂಡೆಲ್ಲ ಸಂಪೂರ್ಣವಾಗಿ ಕಾಯುಹತ್ತುವುದು. ಹೀಗೆ ಒತ್ತಟ್ಟಿಗೆ ಕೊಡುತ್ತಿರುವ ಉಷ್ಣತೆಯನ್ನು ಬೇರೆ ಭಾಗಗಳಿಗೆ ಒಯ್ಯುವ ಧರ್ಮಕ್ಕೇ ವಾಹಕಗುಣವೆಂದು ಹೆಸರು. ಇಂತಹ ಗುಣವೇ ಜೀವರಸದಲ್ಲಿರುವುದೆಂದು ಇದರ ಅರ್ಥವು. (೧೦) ಜೀವನರಸಕ್ಕೆ **ಮರಣ**ವುಂಟು. ಅದು ಹೀಗೆ ಮೃತಪಟ್ಟ ವಿನಹ ಬದುಕುವುದೇ ಶಕ್ಯವಿಲ್ಲ. ಎಂತೆಯೇ ಹಕ್ಸಲೇ ಸಾಹೇಬರು ಕೆಳಗೆ ಬರೆದಂತೆ ಇದರ ವರ್ಣನೆಯನ್ನು ಬಲು ಸರಸವಾಗಿ ಮಾಡಿರುವರು. “ಜೀವಕೋಶಗಳು ಬೇಕಾದ ರೂಪವನ್ನು ಹೊಂದಲಿ; ಅಥವಾ ಬೇಕಾದಲ್ಲಿ ಆಶ್ರಯಪಡೆಯಲಿ; ಅವು ಕ್ಷುಲ್ಲಕವಾದ ಆಳಿಂಬೆ, ನಾಯಿಕೊಡೆಗಳಲ್ಲಿಯೇ ಇರಲಿ; ಗಗನ ಚುಂಬಿತವಾದ ಓಕ ವೃಕ್ಷಗಳಲ್ಲಿಯೇ ಆಗಿರಲಿ; ಅವು ಧರಿಸಿದ ರೂಪವು ಚಿಕ್ಕ ಹುಳವೇ ಆಗಲಿ; ಅಥವಾ ಪೂರ್ಣವಾಗಿ ಬೆಳೆದ ಮನುಷ್ಯನೇ ಆಗಲಿ; —ಎಲ್ಲಿ ಹೋದರೂ ಸಚೇತನ ಜೀವನರಸವು ಕಡೆಗೆ ಮೃತಪಡಲಿಕ್ಕೇ ಬೇಕು. ಮತ್ತು ಆ ಮೇಲೆ ತನ್ನ ಮೂಲ ರೂಪವಾದ ಜಡದ್ರವ್ಯಗಳಾಗಿ ಪರಿಣಮಿಸಲಿಕ್ಕೇ ಬೇಕು. ಅದೇಕೆ? ಅದು ಪ್ರತಿಕ್ಷಣದಲ್ಲೂ ಮೃತಪಡುತ್ತಿರುತ್ತದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಹೆಚ್ಚೇನು? ಅದನ್ನೇ ವಿರೋಧಾಭಾಸದಲ್ಲಿ ಹೇಳಬೇಕಾದರೆ, ಅದು ಮೃತವಾಗದ ವಿನಹ ಬದುಕುವುದೇ ಶಕ್ಯವಿಲ್ಲೆಂದು ಹೇಳಬಹುದು. ಜೀವನಾಧಾರವಾದ ಈ ಜಡದ್ರವ್ಯವು ಪ್ರತಿಯೊಂದು ಸಚೇತನ ವ್ಯಾಪಾರದಿಂದಲೂ ತುಸು ಕಡಿಮೆಯಾಗುತ್ತ ಹೋಗುವುದು. ನಾವು ಮಾಡುವ ಆ ಆ ಕೆಲಸವೂ ಅದರ ಅಷ್ಟಷ್ಟು

ನಾಶವನ್ನೇ ಸೂಚಿಸುತ್ತದೆ. ಮತ್ತು ಜೀವಿಗಳ ಜೀವನ ವ್ಯಾಪಾರಗಳೆಲ್ಲ ಪ್ರತ್ಯಕ್ಷ ವಾಗಿಯಾಗಲಿ, ಅಪ್ರತ್ಯಕ್ಷವಾಗಿಯಾಗಲಿ, ಈ ಜೀವನ ರಸದ ಹಾನಿಗೇ ಕಾರಣ ವಾಗುವವು. ನಾವು ಉಸುರಾಡಿಸುವ ಒಂದೊಂದು ವಾಯುಕಣದಿಂದಲೂ, ಮಾತಾಡುವ ಒಂದೊಂದು ಶಬ್ದದಿಂದಲೂ ಕೂಡ ಜೀವನಾಧಾರವಾದ ಈ ಜಡ ದ್ರವ್ಯದ ಕೆಲವು ಭಾಗವು ನಾಶವಾಗುವುದು. ರಭಸದಿಂದ ಭಾಷಣಮಾಡುತ್ತಿರುವ ವಕ್ತೃವು ಎರಡನೆಯವರಿಗೆ ಬೆಳಕಾಗಬೇಕೆಂತಲೇ ತಾನು ಉರಿಯುತ್ತಿರುವನೆಂದು ಹೇಳಿದರೆ, ನಾನು ಏನೋ ಇಲ್ಲದ್ದೊಂದು ರೂಪಕವನ್ನು ಕಲ್ಪಿಸುತ್ತಿರುವೆನೆಂದು ತಿಳಿಯುವ ಕಾರಣವಿಲ್ಲ. ಆ ಶಬ್ದಗಳನ್ನು ಅಕ್ಷರಶಃ ಅವುಗಳ ತೀರ ಖಂಡಿತವಾದ ಅರ್ಥದಲ್ಲಿಯೇ ಉಪಯೋಗಿಸುತ್ತಿರುವೆನೆಂದು ನಾನು ಪ್ರತಿಜ್ಞೆಮಾಡಿ ಹೇಳಲಿಕ್ಕೆ ಸಿದ್ಧನಿದ್ದೇನೆ. ಯಾಕೆಂದರೆ ಆ ವಕ್ತಾರನ ಇಷ್ಟು ಮಾತುಗಳಿಂದರೆ ಅವನ ಇಷ್ಟು ದೇಹವು ಕಾರ್ಬೊನಿಕ್ ಆಸಿಡ್, ನೀರು ಮತ್ತು ಯೂರಿಯಾ ( Urea ) ಆಯಿತೆಂದು ತಿಳಿಯತಕ್ಕದ್ದು. ಇನ್ನು ಜೀವನ ರಸವನ್ನು ನಾಶಪಡಿಸುವ ಈ ತರದ ವ್ಯಾಪಾರವು ಅವ್ಯಾಹತವಾಗಿ ನಡೆದಿರುವುದೆಂಬದಂತೂ ಸ್ಪಷ್ಟವೇ ಇದೆ. ಆದರೆ ಮತ್ತೆ ಪುನಃ ಅದು ಸಜೀವಿಯಾಗುವ ಕೆಲಸವೂ ಅಷ್ಟೇ ಅವ್ಯಾಹತವಾಗಿ ನಡೆದಿರುವುದರಿಂದ ಈ ಜಗತ್ತು ಎಂದಾದರೂ ನಿರ್ಜೀವಿಯಾಗಬಹುದೆಂದು ಭಯ ಪಡುವ ಕಾರಣವೇನೂ ಇಲ್ಲ." (Physical Basis of life P. 50)

ಈ ರೀತಿಯಾಗಿ ನಾವೊಮ್ಮೆ ಜೀವನ ರಸದ ಗುಣಧರ್ಮಗಳನ್ನರಿತೆವೆಂದರೆ, ಇದೊಂದೇ ವಸ್ತುವಿನಿಂದ ನಮಗೆ ಗೊತ್ತಿದ್ದ ಎಲ್ಲ ತರದ ಜೀವರೂಪಗಳು ಅಸ್ತಿತ್ವದಲ್ಲಿ ಬಂದಿವೆಯೆಂಬುದನ್ನು ತೋರಿಸಿಕೊಡಬಹುದು. ಮತ್ತು ಡಾರ್ವಿನ್ನನು ನಿಜವಾಗಿ ಉತ್ಕ್ರಾಂತಿವಾದಕ್ಕೆ ಮಾಡಿದ ಉಪಕಾರವೇ ಇದು. ಇಂತಹ ಒಂದೇ ತರದ ಜೀವನ ರಸದಿಂದ ನಮಗೆ ಗೊತ್ತಿದ್ದ ಎಲ್ಲ ವನಸ್ಪತಿಗಳೂ ಪ್ರಾಣಿಗಳೂ ಹುಟ್ಟಿರುವವೆಂಬುದನ್ನು ಅವನು ಪ್ರತ್ಯಕ್ಷ ಪ್ರಮಾಣಗಳಿಂದ ಸಿದ್ಧಪಡಿಸಿ ತೋರಿಸಿದನು. ಈ ಗುಳ್ಳೆಯಂತಹ ಜೀವರಸದಿಂದ ಗಗನ ಚುಂಬಿತವಾದ ವನ್ಯವೃಕ್ಷಗಳ ವರೆಗೆ ಮತ್ತು ಕಿರುಕುಳವಾದ ಅಮೀಬಾ (amoeba) ದಿಂದ ಮನುಷ್ಯನ ವರೆಗೆ ನಡೆದು ಬಂದ ಎರಡೂ ದಾರಿಗಳು ಮೊದಲು ಈ ಜೀವರಸದಿಂದಲೇ ಒಡೆದು ಬಂದಿರುವವು. ಆದರೆ ಈ ದಾರಿಗಳಗುಂಟ ಪ್ರಗತಿಯಾಗುತ್ತ ಹೋಗಬೇಕಾದರೆ ಕಲ್ಪನಾ

ಜೀವವು ಹುಟ್ಟಿ ಎಷ್ಟು ವರುಷಗಳಾಗಿರಬಹುದು?

ತೀತವಾದ ಕಾಲಾವಧಿಯು ಬೇಕೆಂಬುದು ಸಹಜವಿದೆ. ಎಚ್. ಜಿ. ವೆಲ್ಸರವರ ಅಭಿಪ್ರಾಯಕ್ಕನುಸರಿಸಿ ಜೀವವು ಹುಟ್ಟಿ ಸುಮಾರು ೮೦ ಕೋಟಿ ವರುಷಗಳಾಗಿವೆಯೆಂದು ಮೇಲೆ ಹೇಳಿದ್ದೇವೆ. ಆದರೆ ಸಾಮುವೆಲ್ ಲೇಂಗರು ಇದರ ಬಗ್ಗೆ ತೀರ ಭಿನ್ನವಾದ ಅಭಿಪ್ರಾಯವನ್ನು ಹೊರಪಡಿಸಿದ್ದಾರೆ. “ಶಿಲೆಗಳಲ್ಲಿ ಒಡಮೂಡಿದ ಜೀವದ ಉತ್ಪತ್ತಿಯಿಂದ ಇಂದಿನ ವರೆಗೆ ಆಗಿಹೋದ ಎಲ್ಲ ಮಾರ್ಪಾಟುಗಳಿಗೆ ಏನಿಲ್ಲೆಂದರೂ ಸುಮಾರು ೧೦–೨೦ ಕೋಟಿ ವರುಷಗಳು ಬೇಕಾಗುವವೆಂದು ಬುದ್ಧಿಶಾಲಿಗಳಾದ ಎಲ್ಲ ಭೂಗರ್ಭಶಾಸ್ತ್ರಜ್ಞರೂ ಒಪ್ಪಿಕೊಳ್ಳುತ್ತಾರೆ.” (ಆಧುನಿಕ ಶಾಸ್ತ್ರವೂ ವಿಚಾರವೂ ಪು. ೧೯) ಇಷ್ಟು ದೀರ್ಘವಾದ ಕಾಲಾವಧಿಗಳ ಬಗ್ಗೆ ಮತವೈಚಿತ್ರ್ಯವಿರುವುದೇ ಸಹಜವಿದೆ. ಆದರೆ ಆ ನಿಶ್ಚಿತಕಾಲವು ಎಷ್ಟೇ ಇದ್ದರೂ ಅದು ಮನುಷ್ಯನ ಬುದ್ಧಿಗೆ ಗೊತ್ತಾಗದಂತಹದಿರುವುದೆಂಬುದನ್ನು ಮಾತ್ರ ಎಲ್ಲರೂ ಸಮ್ಮತಿಸಬೇಕಾಗುವುದು.

ವನಸ್ಪತಿಗಳೂ ಪ್ರಾಣಿವರ್ಗವೂ

ಜೀವವು ಹೇಗೆ ಹುಟ್ಟುವುದೆಂಬ ಪ್ರಶ್ನೆಯನ್ನು ಬಿಡಿಸಬೇಕಾದರೆ ನಾವು ವನಸ್ಪತಿಗಳೆಂಬ ಕಾರಖಾನೆಗೇ ಹೋಗಬೇಕಾಗುವುದೆಂದು ಹಕ್ಸಲೇಯವರ ಅಭಿಪ್ರಾಯವಿದೆಯೆಂಬುದನ್ನು ಈ ಮೊದಲೇ ಹೇಳಿದ್ದೇವೆ. ಯಾಕೆಂದರೆ ಪ್ರಾಣಿವರ್ಗವು ಬಹಳವಾದರೆ ಮೃತಜೀವರಸವನ್ನು ತಿಂದು ಅದನ್ನು ಸಜೀವನವಾಗಿ ಮಾಡಿಕೊಳ್ಳುವ ಶಕ್ತಿಯುಳ್ಳದ್ದಾಗಿದೆ. ಉಳಿದ ಎಲ್ಲ ಪ್ರಾಣಿಗಳಂತೆಯೇ ಮನುಷ್ಯನಾದರೂ ಉಳಿದ ಪ್ರಾಣಿಗಳ ಮಾಂಸವನ್ನು ತಿಂದು ಜೀವಿಸಬಹುದು; ಅಥವಾ ನರಮಾಂಸದಿಂದಲೂ ಬದುಕಬಹುದು; ಅಥವಾ ವನಸ್ಪತಿಗಳನ್ನು ಆಹಾರವನ್ನಾಗಿ ಮಾಡಿಕೊಳ್ಳಬಹುದು. ಇವುಗಳ ಹೊರತಾಗಿ ಅವನ ಆಹಾರಕ್ಕೆ ಬೇರೆ ಯಾವ ವಸ್ತುವೂ ಸಿಗಲಾರದು. ಮನುಷ್ಯನ ಮತ್ತು ಉಳಿದ ಪ್ರಾಣಿಗಳ ದೇಹರಚನೆಯೇ ಹಾಗಿರುವುದು. ಮೂಲ ಒಂದೇ ಜೀವರಸದಿಂದ ಪ್ರಾಣಿ ವನಸ್ಪತಿಗಳೆರಡೂ ಹುಟ್ಟಿದುದು ನಿಜವಾಗಿದ್ದರೂ, ವನಸ್ಪತಿಗಳಿಗೇ ಮಾತ್ರ ಈ ಶಕ್ತಿಯು ಹೇಗೆ ಬಂತೆಂಬುದನ್ನು ಹೇಳುವುದು ಶಕ್ಯವಿಲ್ಲ. ಅಥವಾ ಅವುಗಳಲ್ಲಿರುವ ಯಾವ ವಿಶಿಷ್ಟ ಅವಯವಗಳ ರಚನೆಯಿಂದ ಅವು ಈ ಕೆಲಸವನ್ನು ಮಾಡುವವೆಂಬುದನ್ನೂ ನಾವು ನಿಶ್ಚಯಿಸಿ ಹೇಳಲಾರೆವು. ಆದರೆ ನಾವು ಮೇಲೆ ಹೇಳಿದಂತೆ

ಮನುಷ್ಯನು ತಿಂದು ಜೀವಿಸುವ ಮೂರುತರದ ವಸ್ತುಗಳೆಲ್ಲ ವಸ್ತುತಃ ಜೀವನ ರಸವೇ– ಅದು ಸಜೀವವಿರಲಿ, ಅಥವಾ ನಿರ್ಜೀವವಿರಲಿ–ಆಗಿರುವುದೆಂಬ ಮಾತು ಸ್ಪಷ್ಟವಿದೆ. ಜೀನ ತಂದೆಯು ಗಳಿಸಿಟ್ಟ ದ್ರವ್ಯವನ್ನು ದುಂದುಗಾರನಾದ ಮಗನು ಯಥೇಚ್ಛವಾಗಿ ಹಾಳುಮಾಡುವಂತೆ, ವನಸ್ಪತಿಗಳು ಬಹುದಾವತಿಬಟ್ಟು ಸಂಗ್ರಹಿಸಿದ ಈ ಜೀವನರಸವನ್ನು ನಾವು ಮನಬಂದಂತೆ ತಿಂದು ಹಾಳುಮಾಡಿ ಬಿಡುತ್ತೇವೆ. ಇಷ್ಟೇ ಅಲ್ಲ; ನಾವು ಯಾವ ಕಾಲಕ್ಕಾದರೂ ಅವುಗಳನ್ನು ಆದಷ್ಟು ಮಟ್ಟಿಗೆ ಹಾಳುಮಾಡುವ ಉದ್ಯೋಗದಲ್ಲಿಯೇ ಇರುವೆವೆಂದು ಹೇಳಬಹುದು. ಯಾಂತ್ರಿಕತನದ ಮಬ್ಬಿಗೆ ಬಿದ್ದ ನಾವು ಗಿಡಗಂಟಿಗಳನ್ನೆಲ್ಲ (ಎಂದರೆ ನಮ್ಮ ಆಹಾರವನ್ನು ಸಿದ್ಧಪಡಿಸುವ ಕರ್ತೃಗಳನ್ನೆಲ್ಲ) ನಾಶಮಾಡಿ ನಮ್ಮ ಉರುವಲಕ್ಕಾಗಿ ಹಾಳುಮಾಡಿ ಬಿಡುತ್ತೇವೆ. ಆದರೆ ಈ ಪ್ರಯತ್ನದಿಂದ ನಮ್ಮ ಕಾಲ ಕೆಳಗಿನ ಆಧಾರವನ್ನೇ ನಾವು ಕಡಿದು ಹಾಕುತ್ತಿರುವೆವೆಂಬುದರ ಕಲ್ಪನೆಯೂ ಕೂಡ ಯಾರಿಗೂ ಬಂದಂತೆ ಕಾಣುವುದಿಲ್ಲ!

ವನಸ್ಪತಿಗಳು ಜೀವವನ್ನು ಹೇಗೆ ಸಿದ್ಧಪಡಿಸುತ್ತವೆ?

ಇರಲಿ; ಈ ವನಸ್ಪತಿಗಳಾದರೂ ಜಡದಿಂದ ಜೀವವನ್ನು ಹೇಗೆ ಸಿದ್ಧಪಡಿಸುತ್ತವೆ? ಜೀವನರಸದಲ್ಲಿ ಮುಖ್ಯವಾಗಿ ನಾಲ್ಕೈದು ದ್ರವ್ಯಗಳಿರುವವೆಂದು ಮೇಲೆ ಹೇಳಿದೆಯಷ್ಟೆ? ಆದರೆ ಕೇವಲ ಈ ದ್ರವ್ಯಗಳನ್ನಷ್ಟೆ ಕೂಡಿಸಿದರೂ ಕೆಲಸವಾಗುವಂತಿಲ್ಲ. ಎಂದರೆ ಶುದ್ಧವಾದ ಅಂಗಾರ, ಹೈಡ್ರೋಜನ್, ಆಕ್ಸಿಜನ್, ನೈಟ್ರೋಜನ್, ಫಾಸ್ಫೋರಸ್, ಗಂಧಕ ಮೊದಲಾದವುಗಳನ್ನು ಬೇಕಾದಷ್ಟು ಪೂರಯಿಸಿಕೊಟ್ಟರೂ ಕೂಡ ಯಾವ ವನಸ್ಪತಿಯೂ ಬದುಕಿರಲಾರದು. ಎಂದರೆ ಜೀವರಸಕ್ಕೆ ಬೇಕಾಗುವ ಎಲ್ಲ ದ್ರವ್ಯಗಳು ಅಲ್ಲಿ ಕೂಡಿದ್ದರೂ ಸಹ ಅವುಗಳಿಂದ ಜೀವವು ಹುಟ್ಟಲಾರದು. ಇದರ ಅರ್ಥವೇನೆಂದರೆ: ಆ ಶುದ್ಧ ಮೂಲಧಾತುಗಳಿಂದಲೇ ಕೆಲಸ ಸಾಗುವಂತಿಲ್ಲ. ಅವು ಕೆಲವು ಸಂಯುಕ್ತ ದ್ರವ್ಯಗಳ ರೂಪದಲ್ಲಿದ್ದರೆ ಮಾತ್ರ, ವನಸ್ಪತಿಯು ಅವುಗಳಿಂದ ಜೀವರಸವನ್ನು ಹುಟ್ಟಿಸುವುದೆಂದು ಹೇಳಬಹುದು. ಇಷ್ಟೇ ಅಲ್ಲ; ನೀರು, ಕಾರ್ಬೋನಿಕ್ ಆಸಿಡ್, ಮತ್ತು ನೈಟ್ರೋಜನ್ ಸಾಲ್ಟ್ಸಗಳ ಹೊರತಾಗಿ ಉಳಿವ ಎಲ್ಲ ದ್ರವ್ಯಗಳನ್ನು ಕೊಟ್ಟರೂ ಜೀವರಸವು ಸಿದ್ಧವಾಗಲಾರದು. ಇದೆಲ್ಲದರ ಸಾರಾಂಶವಿಷ್ಟೆ: (೧) ವನಸ್ಪತಿಗಳು (೨) ಅವುಗಳ ಅಸ್ತಿತ್ವಕ್ಕೆ ಬೇಕಾದ ಹವೆ, ಪ್ರಕಾಶ,

ಉಷ್ಣತೆ ಮೊದಲಾದವುಗಳು (೩) ನೀರು, ಕಾರ್ಬೊನಿಕ್ ಆಸಿಡ್ ಮತ್ತು ನೈಟ್ರೋಜನ್ ಸಂಯುಕ್ತಗಳು (nitrogenous compounds) ಇವೆಲ್ಲ ಒತ್ತಟ್ಟಿಗೆ ಕೂಡಿದರೆ ಮಾತ್ರ ವನಸ್ಪತಿಗಳ ಕಾರಖಾನೆಯಲ್ಲಿ ಜೀವರಸವು ಸಿದ್ಧವಾಗುವುದೆಂದು ಹೇಳಬಹುದು.

ಈ ರೀತಿಯಾಗಿ ಮೃತಜೀವರಸವನ್ನು ತೆಗೆದುಕೊಂಡು ಪರೀಕ್ಷಿಸಿದರೆ ಅದರಲ್ಲಿ ನೀರು, ಕಾರ್ಬೊನಿಕ್ ಆಸಿಡ್, ಮತ್ತು ನೈಟ್ರೋಜನ್ ಸಂಯುಕ್ತಗಳೆಂಬ ಮೂರು ಘಟಕಾವಯವಗಳು ಕಂಡುಬರುವವು.

ಮೃತ ಜೀವರಸವು.

ಜೀವನರಸವೆಲ್ಲ ಜೀವನಾಧಾರವಾದ ಈ ಜಡದ್ರವ್ಯಗಳ ಮೇಲೆಯೇ ಅವಲಂಬಿಸಿದೆಯೆಂದು ಹೇಳಬಹುದು. ಕಿಂಬಹುನಾ, ಇಡೀ ಜೀವ ವರ್ಗವೆಲ್ಲ ಇವುಗಳಿಂದಲೇ ಬದುಕಿಕೊಂಡಿದೆ. ಈ ಮೂರರೊಳಗೆ ಬೇಕಾದ ಒಂದನ್ನು ದೂರಪಡಿಸಿದರೂ ಜೀವವು ಅಲ್ಲಿ ಬದುಕಿರಲಾರದು. ಪ್ರಾಣಿಗಳ ಜೀವಿತಕ್ಕೆ ವನಸ್ಪತಿಗಳು ಅತ್ಯವಶ್ಯಕವಾಗಿರುವಂತೆ, ವನಸ್ಪತಿಗಳಿಂದ ಹೊರಡುವ ಜೀವರೂಪಕ್ಕೆ ಈ ಮೂರು ಜಡವಸ್ತುಗಳು ಅತ್ಯವಶ್ಯಕವಾಗಿವೆ. ಅಂಗಾರ, ಹೈಡ್ರೋಜನ್, ಆಕ್ಸಿಜನ, ನೈಟ್ರೋಜನಗಳೆಲ್ಲ ಜಡವಸ್ತುಗಳೇ ಸರಿ. ಇವುಗಳಲ್ಲಿ ಅಂಗಾರ ಮತ್ತು ಪ್ರಾಣವಾಯುಗಳು ಕೆಲವೊಂದು ಪರಿಸ್ಥಿತಿಯಲ್ಲಿ ಕೆಲವೊಂದು ಪ್ರಮಾಣದಲ್ಲಿ ಕೂಡಿದವೆಂದರೆ ಕಾರ್ಬೊನಿಕ್ ಆಸಿಡ್ಡು ಹುಟ್ಟುತ್ತದೆ. ಹೈಡ್ರೋಜನ್ ಆಕ್ಸಿಜನಗಳಿಂದ ನೀರು ಸಿದ್ಧವಾಗುವುದು. ನೈಟ್ರೋಜನ್ ಮತ್ತು ಉಳಿದ ದ್ರವ್ಯಗಳು ಕೂಡಿ ನೈಟ್ರೋಜನ್ ಸಂಯುಕ್ತಗಳಾಗುತ್ತವೆ. ಈ ಸಂಯುಕ್ತಗಳಾದರೂ, ಅವುಗಳ ಮೂಲಘಟಕಗಳಂತೆಯೇ ಚೇತನರಹಿತವಾದ ಜಡವಸ್ತುಗಳಾಗಿರುತ್ತವೆ. ಆದರೆ ಕೆಲವೊಂದು ಅನುಕೂಲ ಪರಿಸ್ಥಿತಿಯು ಒದಗಿದೊಡನೆ ಇವುಗಳಿಂದಲೇ ಮುಂದೆ ಇವಕ್ಕೂ ಸಂಕೀರ್ಣತರ (complex) ವಾದ ಜೀವರಸವು ಜನಿಸಲ್ಪಡುತ್ತದೆ. ಮತ್ತೂ ಈ ಜೀವರಸವೇ ಜೀವದ ಎಲ್ಲ ಗುಣಧರ್ಮಗಳಿಂದ ಯುಕ್ತವಾಗಿರುತ್ತದೆ. ಈ ಹೊಸ ಗುಣಧರ್ಮಗಳು ಎಲ್ಲಿಂದ ಮತ್ತು ಹೇಗೆ ಬಂದವೆಂಬುದು ಮಾತ್ರ ಯಾರಿಗೂ ತಿಳಿಯದ ಮಾತು. ಎಂದ ಮೇಲೆ ಘಟಕಾವಯವಗಳ ಗುಣಧರ್ಮಗಳಿಗೂ, ಅವುಗಳ ಸಂಯೋಗದಿಂದ ಜನಿಸಿದ ಹೊಸ ದ್ರವ್ಯಕ್ಕೂ ಏನೂ ಸಂಬಂಧವೇ ಇಲ್ಲವೇನು? ಎಂದು ಕೇಳಿದರೆ, ನೀರಿಗೂ ನೀರಿನ ಘಟಕಗಳಿಗೂ ಏನು ಸಂಬಂಧ

ವಿರುವುದೆಂಬುದನ್ನು ಮೊದಲು ನಮಗೆ ತಿಳಿಸಿಕೊಡಿರಿ, ಆಮೇಲೆ ನಿಮ್ಮ ಪ್ರಶ್ನೆಯ ವಿಚಾರಮಾಡುವೆವೆಂದು, ಹಕ್ಸಲೀ ಸಾಹೇಬರು ಇದಕ್ಕೆ ಉತ್ತರ ಕೊಡುತ್ತಾರೆ. ಹೈಡ್ರೋಜನ್ ಮತ್ತು ಪ್ರಾಣವಾಯುಗಳನ್ನು ಕೆಲವೊಂದು ಪ್ರಮಾಣದಿಂದ ಕೂಡಿಸಿ ಅದರಲ್ಲಿ ವಿದ್ಯುತ್ತಿನ ಕಣವೊಂದನ್ನು ಹಾಯಿಸಿದರೆ, ಅವೆರಡು ಮೊದಲಿನ ಘಟಕಗಳು ನಾಶವಾಗಿ, ಅವುಗಳ ಸ್ಥಳದಲ್ಲಿ ಬೇರೊಂದು ತೀರ ಹೊಸಗುಣಧರ್ಮಗಳಿಂದ ಯುಕ್ತವಾದ ನೀರೆಂಬ ವಸ್ತುವು ದೃಶ್ಯವಾಗುತ್ತದಷ್ಟೆ? ಆದರೆ ಈ ವ್ಯಾಪಾರವು ನೀರನ್ನು ಹೇಗೆ ಹುಟ್ಟಿಸುತ್ತದೆಂಬುದನ್ನು ಇದಕ್ಕಿಂತಲೂ ಸ್ಪಷ್ಟತರವಾಗಿ ಯಾರು ಹೇಳಬಲ್ಲರು? ಆ ವಿದ್ಯುತ್ತಿನ ಕಣವಾದರೂ ಹೈಡ್ರೋಜನ್ ಮತ್ತು ಪ್ರಾಣವಾಯುಗಳಲ್ಲಿ ಈ ಪರಿಣಾಮವನ್ನು ಹೇಗೆ ಹುಟ್ಟಿಸಿತೆಂಬುದನ್ನು ಯಾರೂ ಹೇಳುವುದು ಹೇಗೆ ಶಕ್ಯವಿಲ್ಲವೋ, ಅದರಂತೆಯೇ ಜೀವರಸದ ಘಟಕದ್ರವ್ಯಗಳಿಂದ ಆ ಜೀವರಸವು ಹೇಗೆ ಹುಟ್ಟುವುದೆಂಬದನ್ನು ತಿಳಿಸಿ ಹೇಳುವುದು ಯಾರಿಗೂ ಶಕ್ಯವಾಗಲಿಕ್ಕಿಲ್ಲ. ಆದರೆ ಅಷ್ಟರಿಂದಲೇ ಹೈಡ್ರೋಜನ್ ಮತ್ತು ಪ್ರಾಣವಾಯುಗಳಿಂದಲೇ ನೀರು ಹುಟ್ಟುವುದೆಂಬ ತತ್ತ್ವಕ್ಕೆ ಹೇಗೆ ಬಾಧೆ ಬರಲಾರದೊ ಹಾಗೆಯೇ ಜಡದಿಂದಲೇ ಜೀವವು ಹುಟ್ಟುವುದೆಂಬ ನಮ್ಮ ತತ್ತ್ವಕ್ಕೆ ಬಾಧೆ ಬರಲಾರದೆಂದು ಹಕ್ಸಲೀ ಸಾಹೇಬರು ಪುನಃ ಪುನಃ ಹೇಳುತ್ತಾರೆ. ಜೀವದ ಉತ್ಪತ್ತಿಯು ಹೇಗಾಗುವುದೆಂಬ ಪ್ರಶ್ನೆಯನ್ನು ಬಿಡಿಸುವಾಗ ಚಾರ್ವಾಕಮತದವರೂ ಇದೇ ತರದ ಒಂದು ದೃಷ್ಟಾಂತವನ್ನು ಕೊಡುತ್ತಿರುತ್ತಾರೆ. ವೀಳ್ಯದೆಲೆ, ಅಡಿಕೆ, ಸುಣ್ಣ, ಕಾಚು, ಪತ್ರಿ ಮೊದಲಾದವುಗಳನ್ನು ಕೂಡಿಸಿ ತಿಂದರೆ ಬಾಯಲ್ಲಿ ತೀರ ಹೊಸದಾದ ಕೆಂಪು ಬಣ್ಣವು ಹೇಗೆ ಜನಿಸುತ್ತದೆಯೋ, ಅದೇ ರೀತಿಯಿಂದ ಜಡದ್ರವ್ಯಗಳಿಂದ ಜೀವವು ಯಾಕೆ ಹುಟ್ಟಬಾರದೆಂದು ಅವರು ಕೇಳುತ್ತಾರೆ. ಆದರೆ ಇವೆಲ್ಲ ದೃಷ್ಟಾಂತಗಳು ವಾಚಕರ ಸಂಶಯವನ್ನು ಪರಿಹರಿಸಲಿಕ್ಕೆ ಎಷ್ಟರ ಮಟ್ಟಿಗೆ ಸಮರ್ಥವಾಗಿರುವವೆಂಬುದನ್ನು ನೋಡಿಕೊಳ್ಳುವುದು ಅವರದೇ ಕೆಲಸವು. ಜೀವಜಡಗಳ ಪ್ರಶ್ನೆಯನ್ನು ವಿಕಾಸವಾದಿಗಳು ಹೇಗೆ ಬಿಡಿಸಿರುವರೆಂಬುದನ್ನು ಮಾತ್ರ ತೋರಿಸಿಕೊಡುವುದು ನಮ್ಮ ಪ್ರಸ್ತುತ ಹೇತುವಿದ್ದುದರಿಂದ, ಇದಕ್ಕಿಂತಲೂ ಹೆಚ್ಚಾಗಿ ನಾವು ಏನನ್ನೂ ಬರೆಯಲಾರೆವು.

---

೬

# ಪ್ರಾರಂಭದ ಪ್ರಾಣಿವರ್ಗಗಳು

ಜೀವನರಸವೆಂಬ ಒಂದೇ ಸಾಧಾರಣ ದ್ರವ್ಯದಿಂದ ಎರಡು ಟಿಸಿಲುಗಳು ಒಡೆದವೆಂದು ಮೇಲೆ ಹೇಳಿದ್ದೇವೆ. ಒಂದು ಟೊಂಗೆಯಿಂದ ವನಸ್ಪತಿವರ್ಗವು ಬ್ಬುತ್ತಹೋದರೆ ಮತ್ತೊಂದು ಟೊಂಗೆಯಿಂದ ಪ್ರಾಣಿ ವರ್ಗವು ಹಬ್ಬುತ್ತ ಹೋಗಿರುವುದು. ಆದರೆ ಈ ಹಬ್ಬುವಿಕೆಗೆ ಅನಂತವಾದ ಕಾಲವು ಹಿಡಿದಿರಬೇಕೆಂದು ತರ್ಕಮಾಡಿದ್ದು ಸಹ ಜವೇ. ಈ ಒಂದೇ ದ್ರವ್ಯದಿಂದ ಬೇರೆ ಬೇರೆ ವರ್ಗದ ವನಸ್ಪತಿಗಳೂ, ಪ್ರಾಣಿಗಳೂ ಕಾಲಾಂತರದಿಂದ ಜನಿಸುತ್ತ ಹೋದವು. ಮುಂದೆ ವಿವರಿಸಲ್ಪಡುವ ಕೆಲವು ಕಾರಣಗಳ ಮೂಲಕ ಇವುಗಳಲ್ಲಿ ಇಷ್ಟು ವೈಚಿತ್ರ್ಯವು ಅಥವಾ ವೈವಿಧ್ಯವು ಕಂಡುಬರುತ್ತದೆ. ಇದಕ್ಕೆಲ್ಲ ಬದಲಾಗುತ್ತ ನಡೆದ ಪರಿಸ್ಥಿತಿಯೇ ಕಾರಣವೆಂದು ಸರ್ವಸಾಧಾರಣವಾಗಿ ಇಲ್ಲಿ ಹೇಳಿಡುವೆವು. ಮತ್ತು ನಮ್ಮ ಮುಖ್ಯ ಕೆಲಸವು ವನಸ್ಪತಿಗಳ ಉತ್ಕ್ರಾಂತಿಯನ್ನು ನಿರೀಕ್ಷಿಸುವುದಿಲ್ಲೆಂಬುದನ್ನಾದರೂ ವಾಚಕರು ನೆನಪಿನಲ್ಲಿಡಬೇಕು. ಇನ್ನು ಮೇಲೆ ಈ ಟಿಸಿಲಿನ ಬಗ್ಗೆ ಮಾತುಗಳನ್ನಾಡದೆ, ಕೇವಲ ಪ್ರಾಣಿಗಳ ಉತ್ಕ್ರಾಂತಿಯ ಬಗ್ಗೆಯೇ ನಾವು ನಮ್ಮ ವಿಚಾರಣೆಯನ್ನು ಮುಂದೆ ಸಾಗಿಸುವೆವು.

ಪೀಠಿಕೆ

ಜೀವವು ಸುರುವಾಯಿತೆಂಬುದನ್ನು ತೋರಿಸುವ ಪ್ರಸ್ತರೀಭೂತಶಿಲೆಗಳೊಳಗಿನ ಮೊದಲಿನ ಲಕ್ಷಣಗಳೆಂದರೆ ಒಂಟಿಯಾದ ಕಿರುಕುಳ ವಸ್ತುಗಳ ಅವಶೇಷಗಳೇ ಸರಿ. ಕಪ್ಪೆಚಿಪ್ಪುಗಳ ಚಿಕ್ಕ ಚಿಕ್ಕ ಚಿಪ್ಪುಗಳು, ಪ್ರವಾಲಗಳ ದಂಟುಗಳು, ಹೂವಿನಂತಹ ಶಿರಗಳು, ಶೈವಾಲ ಅಥವಾ ಸಮುದ್ರಪಾಚಿಗಳು, ಮತ್ತು ಸಮುದ್ರ ಕ್ರಿಮಿಗಳ ಹೆಜ್ಜೆಯ ಗುರುತುಗಳು ಹಾಗೂ ಅವಶೇಷಗಳು ಇವೇ ಮೊದಲಾದವು ಆ ಕಾಲದ ಇತಿಹಾಸವನ್ನು ಸೂಚಿಸುವ ಅಲ್ಪ ಸಾಧನಗಳು. ಆಮೇಲೆ ಕೀಡೆಗಳಂತೆ ಹರಿದಾಡಿ ದುಂಡಗೆ ಸುರುಳೀ ಸುತ್ತಿಕೊಳ್ಳುವ ಪ್ರಾಣಿಗಳು ಹುಟ್ಟಿದುವೆಂದು ಹೇಳಬಹುದು. ಮುಂದೆ ಎಷ್ಟೋ ಲಕ್ಷ ವರುಷಗಳಾದ ಮೇಲೆ ಒಂದು ತರದ ಸಾಗರವೃಶ್ಚಿಕಗಳು ಹುಟ್ಟಿದವು. ಇವು ಮೊದಲಿನ ಎಲ್ಲ ಪ್ರಾಣಿಗಳಿಗಿಂತಲೂ ಚಂಚಲತರವಾಗಿದ್ದು, ಹೆಚ್ಚು ಬಲಿಷ್ಠವಾಗಿ

ಆರಂಭದ ಪ್ರಾಣಿಗಳು ಮತ್ತು ಅವುಗಳ ಅವಶೇಷಗಳು

ದ್ದವು. ಇವುಗಳಲ್ಲೆಲ್ಲ ಯಾವ ಪ್ರಾಣಿಯೂ ದೊಡ್ಡದಾಗಿರಲಿಲ್ಲ; ತೀರ ದೊಡ್ಡ ವೆಂದರೆ ಒಂಬತ್ತು ಫೂಟು ಉದ್ದವಾದ ಸಾಗರವೃಶ್ಚಿಕಗಳೇ ಸರಿ. ಭೂವಾಸ ಮಾಡುವ ಯಾವ ತರದ ಪ್ರಾಣಿಗಳ ಸುಳಿವೂ ಆಗ ಗೋಚರವಾಗುವುದಿಲ್ಲ. ಮೀನ ಗಳಾಗಲಿ, ಬೆನ್ನೆಲುವುಗಳುಳ್ಳ ಪ್ರಾಣಿಗಳಾಗಲಿ ಆಗ ಇನ್ನೂ ಹುಟ್ಟಿರಲಿಲ್ಲ. ತಮ್ಮ ಅವಶೇಷಗಳನ್ನು ಬಿಟ್ಟ ಆಗಿನ ಪ್ರಾಣಿ ವನಸ್ಪತಿಗಳೆಲ್ಲ ಕಿರಿನೀರಿನಲ್ಲಿಯೇ ವಾಸಿಸು ವಂತಹವಾಗಿದ್ದವು.

ಆದರೆ ಆಗಿನ ಕಾಲದ ಪ್ರಾಣಿಗಳು ಇವಿಷ್ಟೇ ಎಂದು ನಿರ್ಧರಿಸಿ ಹೇಳುವುದು ಮಾತ್ರ ತಪ್ಪಾಗದಿರದು. ಎಲುಬು ಅಥವಾ ಬೇರೆ ಯಾವುದಾದರೊಂದು ಕಠಿಣ ವಾದ ಅವಯವವಿದ್ದ ವಿನಹ, ಅಥವಾ ಸಿಂಪು ಮೊದ ಲಾದವುಗಳಲ್ಲಿ ಅವು ವಾಸಿಸಿದ ವಿನಹ, ಅಥವಾ ಕೆಸರಿ ನಲ್ಲಿ ಹೆಜ್ಜೆಯ ಗುರುತುಗಳನ್ನು ಮೂಡಿಸುವಷ್ಟು ದೊಡ್ಡ ಹಾಗೂ ಭಾರವಾದ ಶರೀರವಿದ್ದ ವಿನಹ, ಯಾವ ಪ್ರಾಣಿಯೂ ತನ್ನ ಅಸ್ತಿತ್ವವನ್ನು ತೋರಿಸುವ ಶಿಲೀಭೂತ ಗುರುತುಗಳನ್ನು ಬಿಡುವುದು ಶಕ್ಯವಿಲ್ಲ. ಸದ್ಯಕ್ಕೆ ಇಂತಹ ಕಿರಿ ದಾದ ಮತ್ತು ಮೆತ್ತಗಿನ ದೇಹಗಳುಳ್ಳ ಪ್ರಾಣಿಗಳು ಲಕ್ಷಾವಧಿಯಾಗಿ ಸಿಕ್ಕುವವು. ಮುಂದಿನ ಭೂಗರ್ಭಶಾಸ್ತ್ರಜ್ಞನ ಸಲುವಾಗಿ ಅವು ಯಾವುದೇ ತರದ ಕುರುಹುಗ ಳನ್ನು ಬಿಡುವುದು ಶಕ್ಯವಿಲ್ಲ. ಅದರಂತೆಯೇ ಪೃಥ್ವಿಯ ಗತಾಯುಷ್ಯದಲ್ಲಿ ಇಂತಹ ಕೋಟ್ಯಾವಧಿ ಪ್ರಾಣಿವರ್ಗಗಳು ಹುಟ್ಟಿ, ಬೆಳೆದು, ನಾಮಶೇಷವಾಗಿ ಹೋಗಿರುವುದು ಶಕ್ಯವಿದೆ. ಕಿಂಬಹುನಾ, ಹಾಗೆ ಇರಲೇಬೇಕೆಂದು ತರ್ಕಿಸು ವುದು ಹೆಚ್ಚು ಸಯುಕ್ತಿಕವಾಗುವುದು. "ನಿರ್ಜೀವ ಶಿಲೆಗಳ ಕಾಲ" ದಲ್ಲಿ (Azoic Period) ಬೆಚ್ಚಗಿನ ಕಿರಿದಾದ ನೀರಿನಲ್ಲಿ ಸಿಪ್ಪುಗಳಿಲ್ಲದ, ಮೆತ್ತಗಿನ ಅವಯುವಗಳುಳ್ಳ, ಅಸ್ಥಿರಹಿತವಾದ ಕೀಳು ಪ್ರಾಣಿಗಳೂ, ಬುರುಗಿನಂತಹ ಸಸಿ ಗಳೂ ಅಸಂಖ್ಯಾಕವಾಗಿ ಇದ್ದಿರಬಹುದು. ಆದುದರಿಂದ ಶಿಲಾಸಾಕ್ಷಿ (Record of the Rocks) ಯು ಗತಜೀವಿಗಳ ಲೆಕ್ಕವನ್ನೆಲ್ಲ ಸಂಪೂರ್ಣವಾಗಿ ಇದ್ದಕ್ಕಿ ದ್ದಂತೆ ತೋರಿಸಿಕೊಡಲಾರದೆಂದು ಹೇಳಬಹುದು. ಒಂದು ಊರೊಳಗಿರುವ ಬ್ಯಾಂಕಿನೊಳಗಿನ ಪುಸ್ತಕಗಳಿಂದ, ಎಂದರೆ ಆ ಬ್ಯಾಂಕಿನಲ್ಲಿ ವ್ಯವಹಾರವಿಟ್ಟವರ ಖಾತೆಯ ಪುಸ್ತಕಗಳಿಂದ ಆ ಊರೊಳಗಿರುವ ಎಲ್ಲ ಜನರ ಇತಿಹಾಸವು ಹೇಗೆ

ಆದರೆ ನಮಗೆ ಗೊತ್ತಾಗ ದಂತಹ ಎಷ್ಟೋ ಜೀವ ರೂಪಗಳು ಆಗ್ಗೆ ಅಸ್ತಿತ್ವ ದಲ್ಲಿರಲೇಬೇಕು.

ಗೊತ್ತಾಗುವುದು ಶಕ್ಯವಿಲ್ಲವೋ, ಹಾಗೆಯೇ ಈ ಶಿಲಾಸಾಕ್ಷಿಯಿಂದ ಆ ಕಾಲದ ಎಲ್ಲ ಜೀವಿಗಳ ಜ್ಞಾನವಾಗುವುದು ಶಕ್ಯವಿಲ್ಲ. ಯಾಕೆಂದರೆ ಈ ಶಿಲಾಸಾಕ್ಷಿಯಲ್ಲಿ ಸ್ಥಳವು ಸಿಕ್ಕಬೇಕಾದರೆ ಪ್ರಾಣಿಗಳಿಗೆ ಒಂದು ತರದ ಕಠಿಣವಾದ ದೇಹರಚನೆಯು ಅವಶ್ಯವಾಗಿ ಬೇಕಾಗುವುದೆಂದು ಮೇಲೆ ಹೇಳಿದ್ದೇವೆ. ಆದುದರಿಂದ ಈ ತರದ ದೇಹಗಳಿಲ್ಲದ ಪ್ರಾಣಿಗಳ ಇತಿಹಾಸವು ನಮಗೆ ಎಂದೂ ಗೊತ್ತಾಗುವುದು ಶಕ್ಯವಿಲ್ಲ. ಅದು ಎಂದಾದರೂ ನಮಗೆ ಬೀಗವನ್ನು ಹಾಕಿದ ಜ್ಞಾನಭಾಂಡಾರವೇ. ಇರಲಿ. ನಮಗೆ ಗೋಚರವಾದ ಜೀವಿಗಳ ಹಿಂದಿನ ತರಗಳಲ್ಲಿ ಗ್ರಾಫಾಯಿಟ್ (Graphite) ಎಂದರೆ ಅಸಂಯುಕ್ತವಾದ ಅಂಗಾರವು ಸಿಕ್ಕುವುದರಿಂದ, ಅದೂ ಒಂದು ತರದಜೀವಿಯ ಲಕ್ಷಣವೆಂದು ಕೆಲವರು ಅಭಿಪ್ರಾಯಪಡುವರು. ಆದರೆ ಅದರ ಬಗ್ಗೆ ನಿಶ್ಚಿತವಾಗಿ ಏನೂ ಗೊತ್ತಾಗಿಲ್ಲವೆಂದು ಹೇಳಬಹುದು.

ಸಿಪ್ಪುಗಳೂ ಅವುಗಳ ದೇಹರಚನೆಯೂ ಬಹುಶಃ ಹಸಿಯು ಆರಿಹೋಗಬಾರದೆಂಬುದರ ಸಲುವಾಗಿಯೇ ಇರಬಹುದು. ಹೊರಗಿನ ವೈರಿಗಳನ್ನು ಪ್ರತಿಬಂಧಿಸುವ ಅಥವಾ ಗೆಲ್ಲುವಂತಹ ಕಾರ್ಯವು ಇವುಗಳಿಂದ ಹೆಚ್ಚಾಗಿ ಸಾಧಿಸುತ್ತಿದ್ದೀತೆಂದು ತೋರುವುದಿಲ್ಲ. ಆದರೆ ಹಲ್ಲುಗಳೂ ಮತ್ತು ಪಂಜರಗಳೂ ಮುಂದೆ ತುಸುದಿವಸಗಳಲ್ಲಿಯೆ ದೃಗ್ಗೋಚರವಾಗುವವು.

ಈ ಭೂಮಿಯ ಮೇಲೆ ಜೀವವು ಹುಟ್ಟಿ ೮೦ಕೋಟಿ ವರುಷಗಳಾಗಿರುವುದು ಸತ್ಯವೆಂದಿಟ್ಟುಕೊಂಡರೆ, ಸುಮಾರು ೫೦ ಕೋಟಿ ವರುಷಗಳ ಹಿಂದೆ ಮೀನಗಳು ನಮ್ಮ ಗ್ರಹದ ಮೇಲೆ ಕಾಣಿಸಿಕೊಂಡವೆಂದು ಕಲ್ಪಿಸಬೇಕಾಗುವುದು. ಆ ಕಾಲದ ಮೀನಕ್ಕೆ ಕಣ್ಣುಗಳೂ ಹಲ್ಲುಗಳೂ ಇದ್ದವಲ್ಲದೆ ಅದರ ಈಸುವ ಶಕ್ತಿಯೂದರೂ ಹೆಚ್ಚಾಗಿತ್ತು. ಪೃಷ್ಠವಂಶದಿಂದ ಯುಕ್ತವಾದ ಪ್ರಾಣಿವರ್ಗಗಳಲ್ಲಿ ಇದೇ ಮೊದಲನೆಯ ವರ್ಗದ ಪ್ರಾಣಿಯೆಂದು ಹೇಳಬಹುದು. ಮುಂದೆ ಬರಬರುತ್ತ ಈ ಮೀನಗಳು ವಿಪರೀತವಾಗಿ ಬೆಳೆಯುತ್ತಹೋದವು. ಅವುಗಳ ಸಂಖ್ಯೆಯನ್ನು ಕೊಡುವುದಂತೂ ಅಶಕ್ಯವೇ ಸರಿ. ನೋಡಿದಲ್ಲೆಲ್ಲ ಮೀನಗಳೇ ಮೀನಗಳು. ಆದುದರಿಂದಲೇ ಈ ಕಾಲಕ್ಕೆ "ಮೀನದ ಯುಗ" ವೆಂದು ಹೆಸರು ಕೊಡುತ್ತಾರೆ. ಈ ಮೀನಗಳು ಹಲವು ತರದವಾಗಿದ್ದವು. ಅವುಗಳೊಳಗಿನ ಕೆಲವು ಜಾತಿಯ ಮೀನಗಳು ಸದ್ಯಕ್ಕೆ ಅಸ್ತಿತ್ವದೊಳಗಿಂದ ಅಳಿಸಿಹೋಗಿವೆ. ಅವೆಲ್ಲ ಸಮುದ್ರದೊಳಗೆ ಓಡಾಡುತ್ತಲೂ ನೀರಿ

ಮೀನಗಳ ಯುಗವು

ನೊಳಗಿಂದ ಮೇಲಕ್ಕೆ ಜಿಗಿಯುತ್ತಲೂ, ಸಮುದ್ರದ ಕಸಕಡ್ಡಿಗಳಲ್ಲಿ ಚಿನ್ನಾಟ ವಾಡುತ್ತಲೂ, ಒಂದನ್ನೊಂದು ಬೆನ್ನುಹತ್ತಿ ಶಕ್ಯವಾದರೆ ಕೊಂದುತಿನ್ನುತ್ತಲೂ, ತಮ್ಮ ವೇಳೆಯನ್ನು ಕಳೆಯುತ್ತಿದ್ದವು. ಆಧುನಿಕರ ದೃಷ್ಟಿಯಿಂದ ವಿಚಾರ ಮಾಡಿದರೆ ಇವು ದೊಡ್ಡವಾಗಿದ್ದಿಲ್ಲವೆಂದು ಹೇಳಬಹುದು. ಅವುಗಳಲ್ಲಿ ಕೆಲವು ಮೀನಗಳು ಮಾತ್ರ ೨-೩ ಫೂಟುಗಳಿಗಿಂತ ಹೆಚ್ಚು ಉದ್ದವಾಗಿದ್ದವು. ತೀರ ಅಲ್ಪ ಮೀನಗಳು ಸುಮಾರು ೨೦ ಫೂಟುಗಳ ವರೆಗೆ ಉದ್ದವಾಗಿದ್ದವೆಂದು ತೋರುತ್ತದೆ. ಆದರೆ ಇವುಗಳ ಹಿಂದಿನ ಪ್ರಾಣಿಗಳಾವವೆಂಬುದು ಮಾತ್ರ ನಮಗೆ ಸಂಪೂರ್ಣವಾಗಿ ಗೊತ್ತಾಗಿಲ್ಲ. ಯಾಕೆಂದರೆ ಅವುಗಳ ಹಿಂದಿನ ಪ್ರಾಣಿ ವರ್ಗಗಳಿಗೂ ಅವಕ್ಕೂ ವಿಶೇಷ ಸಂಬಂಧವಿದ್ದಂತೆ ಕಾಣಿಸುವುದಿಲ್ಲ. ಆದುದರಿಂದ ಮೀನಗಳನ್ನೂ ಅವುಗಳ ಹಿಂದಿನ ಪ್ರಾಣಿಗಳನ್ನೂ ಕೂಡಿಸುವ ಬೇರೆ ಕೆಲವು ಪ್ರಾಣಿವರ್ಗಗಳು ಸದ್ಯಕ್ಕೆ ನಮಗೆ ಉಪಲಬ್ಧವಾಗದಿದ್ದರೂ, ಅವು ಅಸ್ತಿತ್ವದಲ್ಲಿದ್ದ ವೆಂದು ಕಲ್ಪಿಸುವುದು ತಪ್ಪಾಗಲಿಕ್ಕಿಲ್ಲ. ಈಗಿನ ಮೀನಗಳ ತತ್ತಿಗಳನ್ನು ಪರೀ ಕ್ಷಿಸಿ, ಇವು ಹೇಗೆ ಹುಟ್ಟಿರಬೇಕೆಂಬುದನ್ನು ಶಾಸ್ತ್ರಜ್ಞರು ತರ್ಕಿಸಲಿಕ್ಕೆ ಪ್ರಯತ್ನ ಮಾಡಿದ್ದಾರೆ. ಬಹುಶಃ ಇವುಗಳ ಪೂರ್ವಜರೆಂದರೆ ಮೆತ್ತಗಿನ ದೇಹವುಳ್ಳ ಈಸಾ ಡುವ ಸಣ್ಣ ಸಣ್ಣ ಪ್ರಾಣಿಗಳಾಗಿರಬೇಕು. ಮತ್ತು ಅವೇ ತಮ್ಮ ಬಾಯೊಳಗೆ ಸುತ್ತಲೂ ಹಲ್ಲುಗಳಂತಹ ಬಿರುಸು ಭಾಗಗಳನ್ನು ಬೆಳಸಿಕೊಂಡಿರಬೇಕು. ಅವು ಗಳಿಂದಲೇ ಮುಂದೆ ಬೆನ್ನೆಲುಬುಗಳುಳ್ಳ ಮತ್ತು ನೀರನ್ನು ಬಿಟ್ಟು ಮೇಲಕ್ಕೆ ಬರು ವಂತಹ ಈ ಮೀನಗಳು ಅಸ್ತಿತ್ವದಲ್ಲಿ ಬಂದಿರಬೇಕು.

ಮೀನಗಳ ಯುಗದಲ್ಲಿ ನೆಲವು ಜೀವಹೀನವಾಗಿತ್ತು. ದೊಡ್ಡ ದೊಡ್ಡ ಬಂಡೆಗಲ್ಲುಗಳು ಮಳೆ ಬಿಸಿಲುಗಳ ಹೊಡೆತಕ್ಕೆ ಈಡಾಗಿ ಹಾಗೆಯೇ ನಿಂತುಕೊಂ ಡಿದ್ದವು. ಮಣ್ಣನ್ನು ತಯಾರು ಮಾಡುವ ಮಳೆಹುಳಗಳು ಇನ್ನೂ ಹುಟ್ಟದ್ದ ರಿಂದ, ಮತ್ತು ಕಲ್ಲುಗಳನ್ನು ಸೀಳಿಹಾಕುವ ವೃಕ್ಷಾದಿಗಳೂ ಆಗ ಇರದ್ದರಿಂದ, ಮಣ್ಣೆಂಬುದು ಆಗ ಅಪರೂಪವಾಗಿಯೇ ಇತ್ತು. ಹಾವಸೆ ಅಥವಾ ಬೂಸ ನಿಗೆ ಅಥವಾ ಕಲ್ಲುಹೂವಿನ ಗಂಧವೂ ಕೂಡ ಇದ್ದಿಲ್ಲ. ಜೀವವೆಲ್ಲ ಇನ್ನೂ ವರೆಗೆ ಸಮುದ್ರದಲ್ಲಿಯೇ ಇತ್ತು.

ಈ ಯುಗದ ಕಡೆಯ ಭಾಗಕ್ಕೆ ಸಮುದ್ರದ ನೀರು ತೀರ ಕಿರಿದಾದಾಗ ಜೀವವು ಜಲದಿಂದ ಭೂಮಿಗೆ ಬಂದಿರಬಹುದು. ವನಸ್ಪತಿಗಳೇ ಮೊದಲು ನೆಲಕ್ಕೆ

ಭೂಚರಪ್ರಾಣಿಗಳು

ಬಂದಿರಬಹುದಾದರೂ, ಪ್ರಾಣಿಗಳೂ ಕೂಡ ಆಮೇಲೆ ತುಸುಕಾಲವಲ್ಲಿಯೇ ಭೂಮಿಯನ್ನೇರಿ ಬಂದಿರಬೇಕು. ಈ ರೀತಿಯಿಂದ ಜಲಚರ ಪ್ರಾಣಿಗಳು ಮೊದಲು ಹುಟ್ಟಿದವು. ಆಮೇಲೆ ದ್ವಿಚರ ಪ್ರಾಣಿಗಳು (Amphibious) ಜನಿಸಿದವು. ನೆಲದ ಮೇಲೇರಿಬಂದ ಬೆನ್ನೆಲುಬಿನ ಈ ಪ್ರಾಣಿಗಳು ಮೊದಲು ಅಡ್ಡತಿಡ್ಡಾದ ನಾಲ್ಕು ಕಾಲುಗಳಿಂದ ಯುಕ್ತವಾಗಿದ್ದವು. ತಮ್ಮ ಆಯುಷ್ಯದ ಪ್ರಥಮಭಾಗವನ್ನು ಅವು ನೀರಿನಲ್ಲಿಯೇ ಕಳೆಯುತ್ತಿದ್ದವು. ನೀರಿನಲ್ಲಿರುವಾಗ ಜಿಲ್ಸ (Gills)ಗಳಿಂದಲೂ ನೆಲದಮೇಲಿದ್ದಾಗ ಶ್ವಾಸಕೋಶ ( Lungs )ಗಳಿಂದಲೂ ಇವು ಉಸುರಾಡಿಸುತ್ತಿದ್ದವು. ಮುಂದೆ ಇವುಗಳಲ್ಲಿ ನಾನಾತರದ ವರ್ಗಗಳುಂಟಾದವು. ಕೆಲವು ದೊಡ್ಡವಾದವು; ಕೆಲವು ಸಣ್ಣವಾದವು; ಕೆಲವು ದೀರ್ಘವಾಗಿ ತಮ್ಮ ಅವಯವಗಳನ್ನು ಕಳಕೊಂಡು ಉರಗನುನದಿಂದ ಅಡ್ಡಾಡಹತ್ತಿದವು. ಬೇರೆ ಕೆಲವು ಕಪ್ಪೆ ಮೊದಲಾದ ರೂಪಾಂತರವನ್ನು ಹೊಂದಿದವು. ಮುಂದೆ "ರೆಪ್ಟಾಯಿಲ್ಸ" (Reptiles) ಎಂದರೆ ಹರಿದಾಡುವ ಪ್ರಾಣಿಗಳೇ ಭೂಮಿಯ ಮೇಲೆಲ್ಲ ಬಲಿಷ್ಠವಾಗಿ ದ್ವಿಚರ ಪ್ರಾಣಿಗಳನ್ನು ಅಲ್ಲಿ ಬಾಳಲಾರದಂತೆ ಮಾಡಹತ್ತಿದವು. ಮೊದಲಿನ ಉರಗಮನ ವರ್ಗಕ್ಕೂ ದ್ವಿಚರಗಳಿಗೂ ವಿಶೇಷ ಭೇದವಿಲ್ಲೆಂದು ಬೇರೆ ಹೇಳಲಿಕ್ಕೆ ಬೇಡ. ಆದರೆ ಮುಂದೆ ದಪ್ಪಾದ ಹಲ್ಲುಗಳು ಹುಟ್ಟಿ ಬೇಕಾದ ಪ್ರಾಣಿಗಳನ್ನು ತಿಂದು ಚೂರ್ಣ ಮಾಡುವಂತಹ ಸಾಧನವು ಅವಕ್ಕೆ ಸಿಕ್ಕಂತಾಯಿತು. ಉರಗಮನದಿಂದಲೇ ಪಕ್ಷಿಜಾತಿಯು ಹುಟ್ಟಿತು. ಪಕ್ಷಿಗಳು ಎಲ್ಲತರದಿಂದಲೂ ಪರಿಸ್ಥಿತಿಗನುಗುಣವಾದ ಗುಣಧರ್ಮಗಳನ್ನು ಬೆಳಿಸಿಕೊಂಡದ್ದರಿಂದ, ಅವು ಇನ್ನೂವರೆಗೆ ಜೀವರಾಜ್ಯದಲ್ಲಿ ಮಹತ್ತ್ವದ ಸ್ಥಾನವನ್ನಾಕ್ರಮಿಸಿಕೊಂಡು ಕುಳಿತಿವೆಯೆಂದು ಹೇಳಬಹುದು. "ಸುತ್ತಲಿನ ಪರಿಸ್ಥಿತಿಗನುಕೂಲವಾಗಿ ಒಳ್ಳೇ ಸುಂದರವಾಗಿ ಅವುಗಳ ದೇಹರಚನೆಯೂ, ಬೆಚ್ಚಗಿನ ರಕ್ತವೂ ಬಲಿಷ್ಠವಾದ ಶ್ವಾಸಕೋಶಗಳೂ, ತೀಕ್ಷ್ಣವಾದ ಇಂದ್ರಿಯಗಳೂ, ಚಪಲವಾದ ಗತಿಯೂ, ಹಗುರಾದ ರೆಕ್ಕೆಗಳೂ-ಇವೆಲ್ಲವೂ ಕೂಡಿ ಆಕಾಶದೊಳಗಿನ ಅವುಗಳ ಸಾಮ್ರಾಜ್ಯವನ್ನು ಅಬಾಧಿತವಾಗಿ ಕಾಯ್ದುಕೊಂಡಿವೆ. ಆ ಸಾಮ್ರಾಜ್ಯವು ಸಸ್ತನಪ್ರಾಣಿಗಳಿಗೂ, ಕೂಡ ಅಭೇದ್ಯವಾಗಿದೆಯೆಂದು ಹೇಳಬಹುದು." ಕಿಂಬಹುನಾ, ಬುದ್ಧಿಶಾಲಿಯಾದ ಮಾನವನಿಗೂ ಕೂಡ ಅದು ಮೊನ್ನೆ ಮೊನ್ನಿನ ವರೆಗೆ ಗಮನಿಸಲಸದಳವಾಗಿಯೇ ಇದ್ದಿತು. ಬಿಲ್ಲುಬಾಣಗಳಿಂದಲೂ,

ಸಣ್ಣ ಸಣ್ಣ ತುಬಾಕಿಗಳಿಂದಲೂ ಮನುಷ್ಯನು ಪಕ್ಷಿಗಳನ್ನು ಕೊಲ್ಲುತ್ತಾ ನೆಂಬುವುದು ನಿಜ. ಆದರೆ ಅವನ ಪ್ರಭುತ್ವವು ಆಕಾಶದ ಮೇಲೆ ನಡಿಯುಹತ್ತಿದ್ದು ಮೊನ್ನೆಮೊನ್ನೆ ಮಾತ್ರವೆ. ಆಕಾಶವನ್ನು ಗೆದೆಯುವಂತಹ ಸುಸಾಧನವಾದ ವಿಮಾನವೂ ಕೂಡ ಇನ್ನೂ ವರೆಗೆ ಸುನಿಯಮ್ಯವಾಗಿಲ್ಲೆಂದು ಎಲ್ಲರೂ ಒಪ್ಪಿ ಕೊಳ್ಳುತ್ತಾರೆ.

ಸಸ್ತನಪ್ರಾಣಿಗಳು ಕೂಡ ಉರಗಮನಜಾತಿಯ ಪ್ರಾಣಿಗಳಿಂದ ಪಕ್ಷಿಗಳು ಅಸ್ತಿತ್ವದಲ್ಲಿ ಬರುವುದಕ್ಕಿಂತ ಮುಂಚಿತವಾಗಿಯೇ ಹುಟ್ಟಿರಬೇಕು. (ಬೆನ್ನೆಲು ಬಿನ ಈ ವರ್ಗದ ಪ್ರಾಣಿಗಳಲ್ಲಿಯೇ ನಮ್ಮ ಮಾನವ ಜಾತಿಯ ಸಮಾವೇಶವೂ ಆಗುವುದೆಂಬುದನ್ನು ಲಕ್ಷ ದಲ್ಲಿಡಬೇಕು.) ಎಂದರೆ ಜೀವನರಸದಿಂದ ವನಸ್ಪತಿ ಮತ್ತು ಪ್ರಾಣಿಗಳೆಂಬ ಎರಡು ರೆಂಬೆಗಳು ಹೇಗೆ ಒಡೆದು ಬೆಳೆಯುತ್ತ ಹೋದವೊ, ಹಾಗೆಯೇ ಉರಗಮನವೆಂಬ ಸಾಮಾನ್ಯ ಭೂಚರಪ್ರಾಣಿಯಿಂದ ಪಕ್ಷಿವರ್ಗ ಮತ್ತು ಸಸ್ತನಪ್ರಾಣಿಗಳ ವರ್ಗವೆಂಬ ಎರಡು ಭಿನ್ನ ವರ್ಗಗಳು ಹುಟ್ಟಿದವೆಂದು ಇದರ ಅರ್ಥವು. ಯಾಕೆಂದರೆ ಅವುಗಳ (ಪಕ್ಷಿ ಮತ್ತು ಸಸ್ತನಪ್ರಾಣಿಗಳ) ತಲೆಬುರುಡೆ, ಬಾಯೊಳಗಿನ ಅಂಗಳ, ಕೆಳಗಿನ ದವಡೆ ಮೊದಲಾದ ಕೆಲವು ಮುಖ್ಯ ಅಂಗಾಂಗ ಗಳಲ್ಲಿ ಅವು ಒಂದನ್ನೊಂದು ಬಹ್ವಂಶದಲ್ಲಿ ಹೋಲುತ್ತವೆ. ಆದರೆ ಸಸ್ತನಪ್ರಾಣಿ ಗಳ ಹೃದಯವು ಪಕ್ಷಿಗಳ ಹೃದಯಕ್ಕಿಂತ ಭಿನ್ನವಾಗಿದೆ. ಎಂದರೆ ಸಸ್ತನ ಪ್ರಾಣಿಗಳು ನಾಲ್ಕು ಭಾಗಗಳುಳ್ಳ ಹೃದಯವನ್ನು ಬೆಳಿಸಿಕೊಂಡಿರುವುದರಿಂದ, ಅವುಗಳ ಶುದ್ಧರಕ್ತವಾಹಿನಿಗಳು ಅಶುದ್ಧರಕ್ತವಾಹಿನಿಗಳಿಂದ ಭಿನ್ನವಾಗಿವೆ. ಹೀಗೆ ಅವು ಸ್ವತಂತ್ರವಾದ ಒಂದು ಯಂತ್ರವನ್ನೆ ಗಳಿಸಿಕೊಂಡಿರುವುದರಿಂದ ಸುತ್ತಲಿನ ಪರಿಸ್ಥಿತಿಯ ಅಪೇಕ್ಷೆಯಿಲ್ಲದೆ ತಮ್ಮ ರಕ್ತವನ್ನು ಎಡೆಬಿಡದೆ ಶರೀರ ಪೋಷಣೆಗೆ ಬೇಕಾಗುವಷ್ಟು ಉಷ್ಣಸ್ಥಿತಿಯಲ್ಲಿಟ್ಟುಕೊಳ್ಳಬಲ್ಲವು. ಯಾಕೆಂದರೆ, " ಹೊರಗಿನ ಪ್ರೇರಕ ವಸ್ತುಗಳ ದಾರೀ ನೋಡುತ್ತ ಕೂಡ್ರುವ ಜೀವಿಗಳಿಗಿಂತ ಸ್ವತಂತ್ರವಾದ ದೇಹರಚನೆಯುಳ್ಳ ಜೀವಿಗಳು ಜೀವನಕಲಹದಲ್ಲಿ ಯಶಸ್ವಿ ಯಾಗುವವು. ಇದರಿಂದ ಸ್ವತಂತ್ರವಾದ, ಆದರೂ ಸ್ವಾಯತ್ತವಾದ ದೇಹದೊಳ ಗಿನ ಪರಿಸ್ಥಿತಿಯ ಮೇಲೆಯೇ, ಎಂದರೆ ತಮ್ಮ ಸ್ವಾಧೀನವಾದ ಸಂಗತಿಗಳ ಮೇಲೆಯೇ ಅವಲಂಬಿಸಿರುವ ದೇಹವ್ಯಾಪಾರಗಳಿಗೆ ಇಷ್ಟೇಕೆ ಮಹತ್ತ್ವವು ಬಂದಿ

ಸಸ್ತನ ಪ್ರಾಣಿಗಳು

ರುವುದೆಂಬುದು ತಿಳಿಯಬಹುದು. ಉಷ್ಣರಕ್ತವುಳ್ಳ ಸಸ್ತನಪ್ರಾಣಿಗಳ ಉದಾಹರಣೆಯು ಎಲ್ಲರಿಗೂ ತಿಳಿಯುವಂತಿದೆ. ಅವುಗಳ ದೇಹದಲ್ಲಿ ದೇಹಪುಷ್ಟಿ (Metabolism)ಯ ವ್ಯಾಪಾರಕ್ಕೆ ಅನುಕೂಲವಾಗುವಷ್ಟು ಉಷ್ಣತೆಯನ್ನು ಯಾವಾಗಾದರೂ ಕಾಯ್ದುಕೊಳ್ಳುವ ಸ್ವತಂತ್ರ ಯಂತ್ರವು ನಿರ್ಮಾಣವಾಗಿದೆ. ಮತ್ತು ಇದರಿಂದಲೇ ಅವು ತಮ್ಮ ದೇಹರಕ್ಷಣೆಗಾಗಿ ಸುತ್ತಲಿನ ವಾತಾವರಣದ ಮಾರ್ಪಾಟುಗಳ ಮೇಲೆಯೇ ಅವಲಂಬಿಸುವ ಅವಶ್ಯಕತೆಯು ದೂರಾಗಿದೆ. ಆದರೆ ಉರಗಮುನ ಮತ್ತು ಹುಳಗಳ ರಕ್ತವು ತಂಪಾಗಿರುವುದರಿಂದ, ಅವು ತಮ್ಮ ಜೀವನಕ್ಕಾಗಿ ಹೊರಗಿನ ಹವೆಯ ಉಷ್ಣತೆಯ ಮೇಲೆಯೇ ಅವಲಂಬಿಸಿವೆ. ಉಷ್ಣಹವೆಯಲ್ಲಿ ಮಾತ್ರ ಜೀವಿಸಬಲ್ಲವಾದುದರಿಂದ, ಏನಾದರೊಂದು ಕಾರಣದಿಂದ ಹವೆಯು ತಂಪಾದೊಡನೆ ಅವು ನಿರ್ಜೀವವಾಗಿ ಬೀಳಬೇಕಾಗುವುದು."

ಸಸ್ತನ ಮೃಗಗಳ ಯುಗದೊಡನೆ ಭೂಮಿಯ ಮೇಲೆ ಹುಲ್ಲು ಕಾಣಿಸಹತ್ತಿತು. ಮತ್ತು ಈ ಹುಲ್ಲನ್ನು ಮೇಯುವ ಸ್ತನಮೃಗಗಳೊಡನೆ, ಆ ಮೃಗಗಳನ್ನೇ ತಿಂದು ಬದುಕುವ ಕ್ರೂರ ಮೃಗಗಳೂ ಅಸ್ತಿತ್ವದಲ್ಲಿ ಬಂದವು.

ಹರಿದಾಡುವ ಪ್ರಾಣಿಗಳ ಯುಗದಿಂದ ಈ ಯುಗವನ್ನು ಭಿನ್ನಪಡಿಸುವ ಕೆಲವು ಸಂಗತಿಗಳನ್ನು ನಾವು ಅವಶ್ಯವಾಗಿ ಗಮನಿಸಬೇಕು. ಅವುಗಳಲ್ಲಿ

ಸಸ್ತನ ಮೃಗಗಳ ವೈಶಿಷ್ಟ್ಯವು.

(೧) ಮಾನಸಿಕ ಭಿನ್ನತೆ

ಮಾನಸಿಕ ಭಿನ್ನತೆಯೇ ಮೊದಲನೆಯ ವೈಶಿಷ್ಟ್ಯವೆಂದು ಹೇಳಬಹುದು. ಮತ್ತು ಅದು ಉರಗಮುನಗಳಲ್ಲಿ ಏಕೆ ಇರಬಾರದೆಂಬುವದಕ್ಕೂ ಸಸ್ತನಮೃಗಗಳಲ್ಲಿಯೆ ಏಕೆ ಬರಬೇಕೆಂಬುದಕ್ಕೂ ಕೆಲವು ಯೋಗ್ಯವಾದ ಕಾರಣಗಳಿವೆ. ಉರಗಮುನವು ತತ್ತಿಗಳನ್ನು ಹಾಕಿದ ಮೇಲೆ ಅದರ ಕಡೆಗೆ ಅದು ಲಕ್ಷ್ಯವನ್ನೇ ಕೊಡುವುದಿಲ್ಲ. ಅವು ತಾವಾಗಿಯೇ ಒಡೆದು ಮರಿಗಳು ಹೊರಬೀಳಬೇಕು. ಇದರಿಂದ ತಾಯಿಯ ಕಲ್ಪನೆಯು ಎಳ್ಳಷ್ಟಾದರೂ ಮರಿಗಳಿಗೆ ಉಳಿಯುವುದು ಶಕ್ಯವಿಲ್ಲ. ಅದರ ಮಾನಸಿಕ ಜೀವನವು ( mental life ) ಅದರ ಮಟ್ಟಿಗೆ ಮಾತ್ರ, ಅದು ತನ್ನೊಳಗೇ ಸುರುವಾಗಿ ಆ ಅನುಭವವು ತನ್ನೊಳಗೇ ಉಳಿಯಬೇಕು. ಎಂದರೆ ಅದು ಸಂಪೂರ್ಣವಾಗಿ ವೈಯಕ್ತಿಕವಾಗುವುದು. ಸಜಾತೀಯರಾದ ತನ್ನ ಸಂಗಡಿಗರನ್ನು ಅದು ನೋಡಿದರೂ, ಅವೆರಡರ ನಡುವೆ ಯಾವುದೇ ತರದ ಭಾವನಾವಿನಿಮಯವಾಗುವುದು ಶಕ್ಯವಿಲ್ಲ. ತನ್ನ ಸಂಗಡಿಗರಿಗೆ

ತನ್ನ ಕಲ್ಪನೆಗಳನ್ನು ಹೇಗೆ ತಿಳಿಸಿಕೊಡಬೇಕೆಂಬುವುದಾಗಲಿ, ಅಥವಾ ಅವುಗಳ ಕಲ್ಪನೆಗಳನ್ನು ತಾನು ಹೇಗೆ ತಿಳಿದುಕೊಳ್ಳಬೇಕೆಂಬುವುದಾಗಲಿ, ಅದಕ್ಕೆ ಗೊತ್ತಿರಲಿಲ್ಲ; ಅವುಗಳ ಅನುಕರಣವೆಂದರೇನೆಂಬುವುದು ಅವಕ್ಕೆ ಗೊತ್ತಿಲ್ಲ; ಅವುಗಳಿಂದದು ಕಲಿಯುವಂತಿಲ್ಲ; ಮತ್ತು ಅವುಗಳೊಂದಿಗೆ ಒಕ್ಕಟ್ಟಾಗಿ ಸಾಮೂಹಿಕ ಕೆಲಸವನ್ನು ಮಾಡುವುದಂತೂ ಅದಕ್ಕೆ ಎಂದಿಗೂ ತಿಳಿಯದು. ಅದರ ಆಯುಷ್ಯವೆಂದರೆ ಒಬ್ಬೊಂಟಿಗನ ಆಯುಷ್ಯವೆಂದು ಹೇಳಬಹುದು. ಆದರೆ ಮರಿಗಳಿಗೆ ಮೊಲೆ ಕುಡಿಸಿ ಅವನ್ನು ಕಾಪಾಡುವ ರೂಢಿಯು ಸುರುವಾದೊಡನೆ, ಸ್ತನಪ್ರಾಣಿಗಳ ಜೀವನದಲ್ಲಿ ಕ್ರಾಂತಿಯುಂಟಾಗುವುದು ಸಹಜವೇ ಇದೆ. ಈ ಚಟದಿಂದ ತಾಯಿ ಮರಿಗಳು ಮೇಲಿಂದ ಮೇಲೆ ಸಂಸರ್ಗದಲ್ಲಿ ಬರುವವು. (ಇದು ಸಸ್ತನಪ್ರಾಣಿಗಳಿಗೂ ಪಕ್ಷಿಗಳಿಗೂ ಸಾಮಾನ್ಯವಿದೆ.) ಅವರಿಂದಲೇ ಅನುಕರಣದಿಂದ ಸುಧಾರಿಸುವುದು, ಒಂದಕ್ಕೆ ಹೆದರಿಕೆ ಬಂದೊಡನೆ ಕೂಗುಹೊಡೆದು ಉಳಿದವರಿಗೆ ಭಯಸೂಚನೆಯನ್ನು ಕೊಡಬೇಕೆಂಬ ಬುದ್ಧಿ, ಮತ್ತು ಉಳಿದ ಎಷ್ಟೋ ತರದಿಂದ ಪರಸ್ಪರರು ಒಕ್ಕಟ್ಟಾಗಿ ಕೆಲಸಮಾಡೋಣ ಇವೇ ಮೊದಲಾದ ಸಂಗತಿಗಳಿಂದ ಅವುಗಳಲ್ಲಿ ಅನ್ಯೋನ್ಯಭಾವನಾವಿನಿಮಯವೂ ಸುಲಭವಾಗಿಯೇ ಬೆಳೆಯಹತ್ತುವುದು. ಆ ಕಾರಣದಿಂದಲೇ ಅವು ಒಬ್ಬರ ಅಂಕಿತದಲ್ಲೊಬ್ಬರು ಇದ್ದುಕೊಂಡು, ಎಲ್ಲರಿಗೂ ಹಿತವಾಗುವಂತೆ ಕೆಲಸಮಾಡುವ ಚಟವನ್ನು ಬೆಳಿಸಿಕೊಂಡು, ಅನ್ಯೋನ್ಯರಿಂದ ಕಲಿತುಕೊಳ್ಳುವ ಸ್ವಭಾವವನ್ನಾದರೂ ಹೆಚ್ಚಾಗಿ ಅನುಸರಿಸಹತ್ತುತ್ತವೆ. ಎಂದರೆ, ಸ್ವಲ್ಪದರಲ್ಲಿ ಹೇಳಬೇಕಾದರೆ, ಕಲಿಯುವ (Teachable) ವರ್ಗವೊಂದು ಅಸ್ತಿತ್ವದಲ್ಲಿ ಬಂತು.

(೨) ಅವುಗಳ ಸಾಮಾಜಿಕ ಜೀವನದ ಬೆಳವಣಿಗೆ

ಮತ್ತಮೊದಲು ಮೊಲೆಕುಡಿಯುವ ವಯಸ್ಸು ಮೀರಿದ ಕೂಡಲೇ ತಾಯಿ ಮರಿಗಳು ಅಗಲುತ್ತಿದ್ದವು. ಆದರೆ ಒಬ್ಬರ ವಿಚಾರಗಳನ್ನೊಬ್ಬರು ತಿಳಿದುಕೊಳ್ಳುವ ಶಕ್ತಿಯು ಒಮ್ಮೆ ಬೆಳೆದುಹೋದಮೇಲೆ, ಆ ರೂಢಿಯ ಉಪಯುಕ್ತತೆಯು ಅದ್ಭುತವಾಗಿರುವುದೆಂಬುದು ಅವಕ್ಕೆ ಕೂಡಲೇ ತಿಳಿದುಬರುತ್ತದೆ. ಎಂತೆಯೋ (ತಾಯಿ ಮರಿಗಳ) ಆ ಸಂಸರ್ಗವನ್ನು ಅವ್ಯಾಹತವಾಗಿ ನಡಿಸುವ ಇಚ್ಛೆಯು ಅವಕ್ಕಾಗುತ್ತದೆ. ಮತ್ತು ಎಷ್ಟೋ ಸ್ತನಪ್ರಾಣಿಗಳ ವರ್ಗಗಳು ಸಾಮಾಜಿಕ ಜೀವನ(Social life)ದ ತತ್ತ್ವ

ವನ್ನು ಆಚರಿಸಹತ್ತುತ್ತವೆ. ಎಂತೆಯೇ ಅವು ಗುಂಪುಗಟ್ಟಿಕೊಂಡು ಇರಲಾರಂಭಿಸುವವು. ಎಂದರೆ ತಾಯಿಮರಿಗಳ ಅವಶ್ಯವಾದ ಸಂಸರ್ಗದಿಂದ ಮುಂದೆ ತಾವಾಗಿಯೇ ಬುದ್ಧಿಪೂರ್ವಕವಾಗಿ ಗುಂಪುಗಟ್ಟಿಕೊಂಡಿರಬೇಕೆಂಬ ಸಾಮಾಜಿಕ ಭಾವನೆಯು ಹುಟ್ಟಿ ಬೆಳೆಯುತ್ತದೆ. ಆದುದರಿಂದಲೇ ಮುಂದೆ ಅವು ಒಂದನ್ನೊಂದು ನೀರಿಕ್ಷಿಸಿ, ಅನುಸರಿಸಿ, ಅನ್ಯೋನ್ಯರ ನಡೆನುಡಿಗಳಿಂದ ಹೆದರಿಕೆಯನ್ನು ಕಂಡು ಹಿಡಿದು ಅದಕ್ಕೆ ತಕ್ಕ ಪ್ರತೀಕಾರವನ್ನು ಕೈಕೊಳ್ಳಹತ್ತುವವು. ಇದೇ ಈ ಯುಗದ ಮುಖ್ಯವಾದ ವೈಶಿಷ್ಟ್ಯವು. ಬೆನ್ನೆಲುಬುಳ್ಳ ಮೊದಲಿನ ಯಾವ ಪ್ರಾಣಿಗಳಿಗೂ ಈ ಯುಕ್ತಿಯು ಗೊತ್ತಿರಲಿಲ್ಲ. ಉರಗಮನಗಳೂ ಮೀನಗಳೂ ಗುಂಪುಗುಂಪಾಗಿ ಇರುತ್ತಿದ್ದುದೇನೋ ನಿಜ; ಅವು ಒಂದೇ ಗುಂಪಿನಲ್ಲಿ ಜನಿಸಿರುವುದರಿಂದಲೂ, ಒಂದೇ ತರದ ಪರಿಸ್ಥಿತಿಯು ಅವನ್ನೆಲ್ಲ ಹಾಗೆ ಕೂಡಿಸಿರುವುದರಿಂದಲೂ, ಅವು ಒತ್ತಟ್ಟಿಗೆ ಸಿಗುವವೆಂಬುದರಲ್ಲಿ ಸಂದೇಹವಿಲ್ಲ. ಆದರೆ ಸಾಮಾಜಿಕ ಮತ್ತು ಸಾಮೂಹಿಕ ಸ್ತನಮೃಗಗಳಲ್ಲಿ ಹೇಗೆ ಒಳಗಿನ ಅಂತಃಕರಣದಲ್ಲಿಯೇ ಈ ಭಾವನೆಯು ಹುಟ್ಟಿ, ರೂಪುಗೊಂಡು ಬೇಕೆಂತಲೇ ಕಾಯ್ದುಕೊಳ್ಳಲ್ಪಡುವುದೋ, ಹಾಗೆ ಉರಗಮನ ಮತ್ತು ಮೀನಗಳಲ್ಲಿ ಇಲ್ಲವೆಂಬುದು ಸ್ಪಷ್ಟವಿದೆ. ಅವುಗಳ ಸಂಸರ್ಗವು ಅವುಗಳ ಇಚ್ಛೆಗನುಸರಿಸಿ ಆದುದಲ್ಲ; ( ಕಿಂಬಹುನಾ, ಅವಕ್ಕೆ ಆ ತರದ ಇಚ್ಛೆಯೂ, ಕಲ್ಪನೆಗಳೂ ಇರುವುದೇ ಇಲ್ಲ. ) ಆದರೆ ಪ್ರಕೃತಿಯ ಸ್ಥಿತಿಗತಿಗಳಿಂದ ತಾನಾಗಿಯೇ ತರಲ್ಪಟ್ಟು ತಾನಾಗಿಯೇ ಇರಿಸಲ್ಪಡುವುದು. ಆದರೆ ಸ್ತನಪ್ರಾಣಿಗಳಾದರೋ ಪರಸ್ಪರ ಪ್ರೀತಿಯಿಂದಲೇ ಕೂಡಿಕೊಂಡು ಒತ್ತೆಡೆಗೆ ಇರಹತ್ತುವವು.

ಉರಗಮನಗಳ ಜಗತ್ತಿಗೂ "ಮಾನವಬುದ್ಧಿ"ಯಿಂದ ಯುಕ್ತವಾದ ಈ ಸ್ತನಮೃಗಗಳ ಜಗತ್ತಿಗೂ ಇದೇ ವೈಶಿಷ್ಟ್ಯವಿರುವುದರಿಂದಲೇ, ( ಹೆಚ್ಚಾದ ಮಿದುಳಿನ ಮತ್ತು ಬುದ್ಧಿಯ ಶಕ್ತಿ ) ನಮಗೆ ಈ ಪ್ರಶ್ನೆಯು ಇಷ್ಟು ಮಹತ್ತ್ವದ್ದಾಗಿದೆ. ಉರಗಮನದ ಅನುಭವವನ್ನು ನಾವು ನಮ್ಮೊಳಗೇ ಕಲ್ಪಿಸಿಕೊಳ್ಳಲಾರೆವು. ಅದರ ಚಂಚಲವಾದ, ಸರಲವಾದ, ಸ್ವಾಭಾವಿಕ ಉದ್ದೇಶಗಳನ್ನೂ (motives), ಹಸಿವೆಗಳನ್ನೂ, ಅಂಜಿಕೆಗಳನ್ನೂ, ದ್ವೇಷಗಳನ್ನೂ ನಾವು ಅನುಭವಿಸಲಾರೆವು. ಯಾಕೆಂದರೆ ನಮ್ಮ ಉದ್ದೇಶಗಳು ಸರಲವಾಗಿಲ್ಲ. ಹಲವು

(೩) ಸ್ತನಮೃಗಗಳ "ಮಾನಸಬುದ್ಧಿ"

ಕಾರಣಗಳ ಕೂಟದಿಂದುಂಟಾದ ಮಿಶ್ರಫಲಗಳವು. ಉದಾ: ನಾನು ಈ ಕಾಲದಲ್ಲಿ ಈ ಪುಸ್ತಕವನ್ನೇ ಏಕೆ ಬರೆಯುತ್ತಿರುವೆನೆಂಬುದಕ್ಕೆ ಹಲವು ಕಾರಣಗಳಿರುವುದು ಶಕ್ಯವಿದೆ. ವಿಕಾಸವಾದದ ತತ್ತ್ವಗಳಿಂದ ನನ್ನ ಮನಸು ಗುಂಗಾಗಿ ಹೋಗಿರಬಹುದು. ಅವು ನನ್ನ ಮನಸಿನ ಮೇಲೆ ವಿಲಕ್ಷಣವಾದ ಪರಿಣಾಮವನ್ನುಂಟುಮಾಡಿರಬಹುದು. ಆದುದರಿಂದಲೇ ನಾನವುಗಳನ್ನು ವಿಶೇಷ ಲಕ್ಷ್ಯಗೊಟ್ಟು ಅಭ್ಯಾಸಮಾಡಿ ಅವುಗಳ ವಿಚಾರವನ್ನೇ ಎಷ್ಟೋ ದಿವಸಗಳ ವರೆಗೆ ಮಾಡಿರಬಹುದು. ವಿಕಾಸವಾದದ ಸಿದ್ಧಾಂತಗಳೆಲ್ಲ ಆಧುನಿಕರ ಜ್ಞಾನರಾಜ್ಯಕ್ಕೆ ಅಡಿಗಲ್ಲಾಗಿರುವುದೆಂಬದನ್ನು ನಾನು ಸ್ಪಷ್ಟವಾಗಿ ಕಂಡುಹಿಡಿದಿರಬಹುದು. ಇಂತಹ ತತ್ತ್ವದ ಜ್ಞಾನವು ಎಲ್ಲರಿಗೂ ಇರುವುದು ಅವಶ್ಯವೆಂದು ನಾನು ತಿಳಿದಿರಬಹುದು. ಆದುದರಿಂದಲೇ ಇದನ್ನು ಆದಷ್ಟು ಸುಲಭರೂಪದಿಂದ ಕನ್ನಡದಲ್ಲಿ ಬರೆಯಬೇಕೆಂದು ನಾನು ನಿಶ್ಚಯಿಸಿರಬಹುದು. ಆದರೆ ಕನ್ನಡದಲ್ಲಿ ಇಷ್ಟು ಗಹನವಾದ ವಿಷಯಗಳನ್ನು ಸರಿಯಾಗಿ ತಿಳಿಸಿಕೊಡಲಿಕ್ಕೆ ಸಾಕಷ್ಟು ಸ್ಪಷ್ಟವಾದ ಶಬ್ದಸಂಗ್ರಹವೇ ಇಲ್ಲವೆಂದು ನಾನು ಹಲವು ಸಾರೆ ಹಿಂಜರಿದು ಈ ಕೆಲಸವನ್ನೇ ಬಿಟ್ಟಿರಬಹುದು. ಆದರೂ ಜ್ಞಾನಪ್ರಸಾರದಂತಹ ಪವಿತ್ರತರವಾದ ಕೆಲಸವಿಲ್ಲೆಂದು ಬಗೆದು ನಾನು ಇಲ್ಲದ ಈ ಉಪದ್ವ್ಯಾಪವನ್ನು ಬೆನ್ನಿಗೆ ಹಚ್ಚಿಕೊಂಡಿರಬಹುದು. ಮತ್ತು ಸದ್ಯಕ್ಕೆ ಕಾಲವಾದರೂ ಅನುಕೂಲವಿರುವುದೆಂದು ಭಾವಿಸಿ ನಾನು ಈ ಕೆಲಸವನ್ನು ಈ ಕ್ಷಣದಲ್ಲಿಯೇ ಮಾಡುತ್ತಿರಬಹುದು. ಹೀಗೆ ನಾನು ಈ ಕಾಲದಲ್ಲಿ ಇದೇ ಪುಸ್ತಕವನ್ನೇಕೆ ಬರೆಯುತ್ತಿರುವೆನೆಂಬುದಕ್ಕೆ ಒಂದಲ್ಲ, ಎರಡಲ್ಲ, ಸಾವಿರಾರು ಸಂಗತಿಗಳ ಸಂಬಂಧವನ್ನು ತೋರಿಸಬಹುದು. ಎಂದರೆ ನಾನು ಪುಸ್ತಕವನ್ನು ಬರೆಯಬೇಕೆಂಬ ಒಂದು ಉದ್ದೇಶವು ಹಲವು ಅಂತರ್ಬಾಹ್ಯಕಾರಣಗಳ ಮಿಶ್ರಫಲವೆಂದೇ ಸಿದ್ಧವಾದಂತಾಗುವುದು. ಇರಲಿ; ಈ ತರದ ಉದ್ದೇಶವು ಉರಗಮನದಲ್ಲಿ ದುರ್ಲಭವಾಗಿತ್ತೆಂದೂ ಸ್ತನಪ್ರಾಣಿಗಳಲ್ಲಿ ಸುರುವಾಯಿತೆಂದೂ ಹೇಳುವುದೇ ನಮ್ಮ ಮುಖ್ಯ ಉದ್ದೇಶವು. ಆದುದರಿಂದಲೇ ಸ್ತನಮೃಗಗಳೂ ಪಕ್ಷಿಗಳೂ ಬಹುಶಃ "ಮಾನವ"ವೆಂದೇ ಹೇಳಬಹುದೆಂದು ಭೌತಿಕಶಾಸ್ತ್ರಜ್ಞರು ಅಭಿಪ್ರಾಯಬಟ್ಟಿದ್ದಾರೆ. ತೀರ ಕೆಳಗಿನ ತರಗತಿಯದಾದರೂ ನಿಜವಾದ ಆತ್ಮಸಂಯಮನ, ಆ ಉಳಿದ ಬಾಂಧವರ ಹಿತಕ್ಕಾಗಿ ಸ್ವಹಿತವನ್ನು ಬಿಟ್ಟುಕೊಡುವ ಪರೋಪಕಾರಬುದ್ಧಿ, ಮತ್ತು ಸಾಮಾಜಿಕಭಾವನೆ ಮೊದಲಾದವುಗಳಿಂದ ಅವು ನಮ್ಮ ಬಂಧುಗಳೇ ಆಗಿವೆಯೆಂದು ಹೇಳಬಹುದು.

ಎಂತೆಯೇ ನಾವು ಆ ಜಾತಿಯ ಎಲ್ಲ ಪ್ರಾಣಿಗಳ ಸಂಗಡ ಸಂಬಂಧವನ್ನು ಬೆಳೆಯಿಸುವುದು ಶಕ್ಯವಿದೆ. (ನಾಯಿ, ಕುದುರೆ, ಬೆಕ್ಕು ಮೊದಲಾದ ಪ್ರಾಣಿಗಳೂ ಗಿಳಿ ಮೊದಲಾದ ಪಕ್ಷಿಗಳೂ ಎಲ್ಲರ ಪ್ರೀತಿಗೆ ಪಾತ್ರವಾದ ಪ್ರಾಣಿಗಳಾಗಿವೆ.) ಅವುಗಳ ದುಃಖದ ಕೂಗಾಟಗಳೂ, ಕಷ್ಟದ ಒದ್ದಾಟಗಳೂ, ನಮ್ಮ ಹೃದಯವನ್ನು ಕರಗಿಸುತ್ತವೆ. ಬೆನ್ನುಚಪ್ಪರಿಸಿದೊಡನೆ ನಮ್ಮ ಅರ್ಥವು ಅವಕ್ಕೆ ತಿಳಿದು ಅವುಗಳ ಆನಂದವು ಇಮ್ಮಡಿಯಾಗುತ್ತದೆ. ಅವುಗಳ ಆನಂದಾದಿ ಭಾವನೆಗಳನ್ನು ನೋಡಿ ನಾವು ಸಂತೋಷಪಡುತ್ತೇವೆ. ಅವನ್ನು ನಾವು ಸಾಕಿ, ಸಲುಹಿ, ಕಲಿಸಿದೆವೆಂದರೆ, ನಮ್ಮೊಡನೆ ವ್ಯವಹಾರಮಾಡುವಾಗ ಅವು ಬೇಕಾದಷ್ಟು ಆತ್ಮಸಂಯಮನವನ್ನು ತೋರಿಸುತ್ತವೆ. ಹಾಲಿನ ತಂಬಿಗೆಯನ್ನೇ ನಾಯಿಯ ಮುಂದಿಟ್ಟರೂ, ಆ ನಾಯಿಯು ಆ ತಂಬಿಗೆಯನ್ನು ಕಾಯುತ್ತ ಕೂಡ್ರುವುದಲ್ಲದೆ ಅದರೊಳಗೆ ಬಾಯಿಹಾಕಿ ಕುಡಿಯುವ ಭರಕ್ಕೆ ಬೀಳುವುದಿಲ್ಲ. ಹಾಗೆ ಮಾಡುವುದು ತನ್ನ ಒಡೆಯನ ಮನಸ್ಸಿಗೆ ಬರುವುದಿಲ್ಲೆಂದು ಆ ನಾಯಿಗೆ ಗೊತ್ತಿರುವುದರಿಂದ ಅದು ಈ ಆತ್ಮಸಂಯಮನವನ್ನು ಮಾಡುತ್ತದೆ.

ಮಿದುಳಿನ ಈ ವಿಪರೀತವಾದ ಬೆಳೆವಣಿಗೆಯಿಂದಲೇ, ವಿಚಾರವಿನಿಮಯವೂ ಅನ್ಯೋನ್ಯಾಶ್ರಯವೂ ಬೆಳೆದವು. ಇದು ಮನುಷ್ಯಜಾತಿಯ ಆಗಮನವನ್ನು ಸೂಚಿಸುವ ಪ್ರಬಲವಾದ ಚಿಹ್ನವೆಂದೇ ಹೇಳಬಹುದು.

ಜರಾಯುಜ ಪ್ರಾಣಿಗಳ ಜನ್ಮ

ಮೊದಲಿಗೆ ಸಸ್ತನಪ್ರಾಣಿಗಳೂ ಪಕ್ಷಿಗಳಂತೆ ತತ್ತಿಗಳನ್ನು ಹಾಕುತ್ತಿದ್ದವು. ಆದರೆ ಜೀವನಕಲಹದಲ್ಲಿ ಅದು ಅಷ್ಟು ಉಪಯುಕ್ತವಾಗಿಲ್ಲೆಂಬುವುದು ಸ್ಪಷ್ಟವಿದೆ. ತತ್ತಿಗಳನ್ನು ಹಾಕಿದ ಮೇಲೆ, ಅವಕ್ಕೆ ಕಾವು ಕೊಡಬೇಕು, ಅವನ್ನು ಬೇರೊಂದು ಭದ್ರವಾದ ಸ್ಥಳದಲ್ಲಿಟ್ಟು ಜೋಪಾನಮಾಡಬೇಕು, ಮತ್ತು ತನ್ನ ಆಹಾರಕ್ಕಾಗಿ ಅತ್ತಿತ್ತ ಅಲೆದಾಡಬೇಕು; ಇಷ್ಟಾದರೂ ಪ್ರಬಲವಾದ ಶತ್ರುಗಳು ಒಂದಕ್ಕಿಂತ ಹೆಚ್ಚಾಗಿ ಒಂದರೆ, ಎಲ್ಲ ತತ್ತಿಗಳನ್ನು ಒಮ್ಮೆಲೇ ಕಾಪಾಡುವುದು ಕಷ್ಟ! ಅದು ಒಂದೆರಡನ್ನು ರಕ್ಷಿಸುತ್ತ ಕುಳಿತರೆ ಶತ್ರುಜೀವಿಗಳು ಉಳಿದ ತತ್ತಿಗಳಿಗೆ ತನ್ನ ಕೈಸೇರಿಡುವುದು. ಆದುದರಿಂದ ಇದಕ್ಕಿಂತ ಹೆಚ್ಚು ಉಪಯುಕ್ತವಾದ ಬೇರೊಂದು ಪದ್ಧತಿಯನ್ನು ಹುಡುಕಿತೆಗೆಯುವುದು ಅವಶ್ಯವಾಯಿತು. ಎಂತೆಯೇ

ಮರಿಗಳನ್ನು ಎಷ್ಟೋ ದಿವಸಗಳ ವರೆಗೆ ತಾಯಿಯು ಹೊಟ್ಟೆಯಲ್ಲಿಯೇ ಇಟ್ಟು ಕೊಳ್ಳುವ ರೂಢಿಯುಂಟಾಯಿತು. ಎಂದರೆ ಜರಾಯುಜ ಪ್ರಾಣಿಗಳ ಉತ್ಪತ್ತಿಯು ಸುರುವಾಯಿತು. ಹೀಗೆಯೇ ಮುಂದೆ ಜಿರಾಫ, ಒಂಟೆ, ಕುದುರೆ, ಆನೆ, ಚಿಗರಿ, ನಾಯಿ, ಸಿಂಹ, ಹುಲಿ, ಮೊದಲಾದ ಈ ಪೃಥ್ವೀತಲದ ಮೇಲೆ ಕಂಡುಬರುವ ಎಲ್ಲ ಪ್ರಾಣಿಗಳ ಉತ್ಪತ್ತಿಯಾಗುತ್ತಹೋಯಿತೆಂದು ಹೇಳಬಹುದು.

ಜಗತ್ತಿನ ಈ ಹಿಂದಿನ ಇತಿಹಾಸದೊಳಗೆ ಪ್ರಕೃತಿಯು ಅಥವಾ ಸೃಷ್ಟಿಯು ಸಂಗ್ರಹದ ವ್ಯಾಪಾರವನ್ನು ನಾವು ನೋಡುವೆವು. ಎಂದರೆ ನಿರುಪಯುಕ್ತ ಅಥವಾ ಅಯೋಗ್ಯರಾದವರನ್ನು ಕೊಂದುಹಾಕಿ, ಬಲಿಷ್ಠರನ್ನು ಮಾತ್ರ ಸೃಷ್ಟಿಯು ಹೇಗೆ ಸಂಗ್ರಹಿಸುತ್ತ ಹೋಗುವುದೆಂಬುದನ್ನು ನಾವು ಚೆನ್ನಾಗಿ ಮನಗಾಣುವೆವು.

ನ್ಯಾಚರಲ್ ಸೆಲೆಕ್ಷನ್

ಪೃಥ್ವಿಯ ಮೇಲೆ ಇಂದಿಗೂ ಗುಂಪು ಗುಂಪುಗಳಲ್ಲಿ, ವ್ಯಕ್ತಿ ವ್ಯಕ್ತಿಗಳಲ್ಲಿ ನಡೆದಿರುವ ಘೋರವಾದ ಜೀವನಕಲಹವನ್ನೇ ಬಹಳೇ ದೊಡ್ಡ ಪ್ರಮಾಣದ ಮೇಲಿಂದ ನಾವೀ ಶಿಲಾಸಾಕ್ಷಿಯಿಂದ ಸಿದ್ಧವಾಗುವ ಇತಿಹಾಸದಲ್ಲಿ ಓದಬೇಕಾಗುವುದು. ಈ ಮಾತಿನಿಂದಲೇ ನಮಗೆ ಇನ್ನೊಂದು ಸಂಗತಿಯು ತಿಳಿದುಬರದಿರಲಾರದು. ಅದನ್ನು ನಾವು ಈ ವರೆಗೆ ಸ್ಪಷ್ಟವಾಗಿ ಎಲ್ಲಿಯೂ ಹೇಳಿಲ್ಲವಾದ್ದರಿಂದ ಅದನ್ನಿಷ್ಟು ಇಲ್ಲಿ ಉಲ್ಲೇಖಿಸಬೇಕಾಗಿದೆ. ವಿಕಾಸದ ಹಾದಿಯು ಸರಳವಾಗಿಲ್ಲೆಂಬುದೇ ಆ ಮುಖ್ಯ ಮಾತು. ಯಾವುದಾದರೊಂದು ಶಕ್ತಿಯು—ಅದು ಹೊರಗಿನದೇ ಎಂದರೆ ನಿಯಾಮಕನಾದ ಈಶ್ವರನದೇ ಆಗಿರಲಿ, ಅಥವಾ ಒಳಗಿನದು ಎಂದರೆ ಅಂತರಾತ್ಮನದೇ ಇರಲಿ—ಉದ್ದೇಶಪೂರ್ವಕವಾಗಿ ಕೆಲಸಮಾಡುತ್ತಿದ್ದುದಾದರೆ, ವಿಕಾಸವು ಸಮಾನವಾಗಿ ಒಂದೇ ರೇಷೆಯಲ್ಲಿ ಪರಿಣಮಿಸುತ್ತ ಹೋಗಬಹುದಾಗಿತ್ತು. ಆದರೆ ಇದಕ್ಕೆ ವಿರುದ್ಧವಾಗಿರುವ ನಿಯಮವೇನಂದರೆ: ಪ್ರಾಣಿವರ್ಗಗಳು ಎಲ್ಲಕಡೆಗೂ ಪರಿಸ್ಥಿತಿಗನುಕೂಲವಾಗುವಂತೆ ತೀವ್ರವೇ ಬೆಳೆದು ವಿಸ್ತಾರಹೊಂದುವವು. ಈ ತರದ ವಿಶೇಷತೆ ಅಥವಾ ನೈಪುಣ್ಯ (Specialisation)ದಿಂದಲೇ ಆ ಆ ಪರಿಸ್ಥಿತಿಗಳಲ್ಲಿ ಅದರ ಬೆಳೆವಣಿಗೆಯಾದರೂ, ಆ ವಿಶೇಷತೆಗೆ ಈ ಕಾರಣದಿಂದಲೇ ಒಂದುತರದ ಬಿರುಸುತನವು (Rigidity) ಬರುವುದರಿಂದ ಅದು ಬೇರೆ ಪರಿಸ್ಥಿತಿಗಳಲ್ಲಿ ಬಾಳಲಿಕ್ಕೆ ತೀರ ಅಯೋಗ್ಯವಾಗುವುದೆಂಬುದು ಸಹಜವಿದೆ. ಎಂದರೆ

ಹೊಸ ಸ್ಥಿತಿಗತಿಗಳಿಗೆ ಅದರ ಏಕದೇಶೀಯ ನೈಪುಣ್ಯವು ಅನನುಕೂಲವಾಗುವುದು. ಆದರೆ ಯಾವುದೇ ತರದ ನೈಪುಣ್ಯವನ್ನು ಪಡೆಯದ ಪ್ರಾಣಿವರ್ಗವು ಆ ಹೊಸ ಸ್ಥಿತಿಗತಿಗಳಲ್ಲಿ ಬಾಳಲಿಕ್ಕೆ ಹೆಚ್ಚು ಯೋಗ್ಯವಾಗಿ, ಮೊದಲೇ ಬೆಳೆದು ಬಲಿಷ್ಠವಾದ ವರ್ಗವನ್ನು ಹಿಮ್ಮೆಟ್ಟಿಸಲು ಸಮರ್ಥವಾಗಬಹುದು. ಆದುದರಿಂದ ವಿಕಾಸವು ಪೂರ್ಣವಾಗಿ ಬೆಳೆದ ಒಂದು ವರ್ಗದಿಂದ ಮತ್ತೊಂದು ವರ್ಗಕ್ಕಾಗುತ್ತಿರುವುದಿಲ್ಲ; ಆದರೆ ಹಳೆಯದಾದರೂ ಪೂರ್ಣವಾಗಿ ಬೆಳೆದ ಒಂದು ವರ್ಗವನ್ನು ನಾಶಮಾಡಿ ಮುಂದೆ ಬರುವ ಹೊಸಹೊಸ ವರ್ಗಗಳಿಂದ ಆಗುತ್ತಿರುವುದೆಂಬುದು ಎಲ್ಲರಿಗೂ ತಿಳಿಯುವಂತಿದೆ. ಎಂದರೆ ವಿಕಾಸವಾದವು ನಿಚ್ಚಣಿಕೆಯ ಕಾಲುಗಳಂತೆ ಒಂದರ ಮೇಲೊಂದು ಮೆಟ್ಟಿಲುಗಳನ್ನೇರುತ್ತ ಹೋಗುವುದಿಲ್ಲೆಂದು ಶಿಲಾಶಾಸ್ತ್ರವು (Paleontology) ಹೇಳುತ್ತಿದೆ. ಆದರೆ ಪರಿಸ್ಥಿತಿಗನುಕೂಲವಾಗಿ ವರ್ತಿಸುವುದು, ಮತ್ತು ಅಸ್ಪಷ್ಟವಾದ ವೈಶಿಷ್ಟ್ಯ ಇವುಗಳಿಂದ ಬೇರೆ ಬೇರೆ ದಿಶೆಗಳ ಕಡೆಗೆ ನಿರಂತರವಾಗಿ ಒಡೆದು ಹೋಗುವ ಒಲವು ಎಲ್ಲ ಪ್ರಾಣಿವರ್ಗಗಳಲ್ಲಿ ಕಂಡು ಬರುವುದು. ಇನ್ನು ವಿಕಾಸವಾಗಬಹುದಾದ ದಿಶೆಗಳ ಸಂಖ್ಯೆಯಂತೂ ಅಪರಿಮಿತವಾಗಿದೆ. ಆದರೆ ಇವುಗಳಲ್ಲಿ ಯಾವುದು ಯಶಸ್ವಿಯಾಗತಕ್ಕದ್ದೆಂಬುವುದನ್ನು ಹೊರಗಿನ ಪರಿಸ್ಥಿತಿಯೇ ನಿರ್ಣಯಿಸುತ್ತದೆ.

---

೭

# ಮನುಷ್ಯನ ಪ್ರಾಚೀನ (Remote) ಪೂರ್ವಜರು

"ವಿಶ್ವಕ್ಕೆ ತನ್ನ ನಿಜವಾದ ಸಂಬಂಧವೇನಿರುವುದೆಂಬುದನ್ನು ತಿಳಿದುಕೊಳ್ಳ ಬೇಕಾದರೆ, ಜೀವಸೃಷ್ಟಿಯೊಳಗಿರುವ ತನ್ನ ಸ್ಥಾನವಾವುದೆಂಬುದನ್ನು ಅವನು (ಮನುಷ್ಯನು) ಮೊತ್ತಮೊದಲು ಅತ್ಯವಶ್ಯವಾಗಿ ತಿಳಿದುಕೊಳ್ಳಬೇಕಾಗುವುದೆಂಬುದು ಎಲ್ಲರೂ ಒಪ್ಪ ಬೇಕಾದ ಮಾತು. ಮತ್ತು ಕಟ್ಟಕಡೆಗೆ ಈ ಪ್ರಶ್ನೆಯು, ಕೆಳಗಿನ ಪ್ರಾಣಿಗಳಿಗೂ ಮನುಷ್ಯನಿಗೂ ಯಾವತರದ ಮತ್ತು ಎಷ್ಟು ನಿಕಟವಾದ ಸಂಬಂಧವಿರುವುದು ? ಎಂಬ ರೂಪವನ್ನೇ ಹೊಂದು ತ್ತದೆ." ಈ ಪ್ರಕಾರವಾಗಿ ನಾವು ಮುಂದೆ ಚರ್ಚಿಸಬೇಕಾದ ವಿಷಯದ ಮಹತ್ತ್ವ ವನ್ನು ಹಕ್ಸಲೀ ಸಾಹೇಬರು ತೋರಿಸಿಕೊಟ್ಟಿರುತ್ತಾರೆ. ಇಷ್ಟು ದಿನಗಳವರೆಗೆ ಇವೆಲ್ಲ ವಿಷಯಗಳ ಮೇಲೆ ಅಜ್ಞಾನಾಂಧಃಕಾರವು ಮುಸುಗಿಕೊಂಡಿತ್ತು. ಮನುಷ್ಯ ಮತ್ತು ಉಳಿದ ಪ್ರಾಣಿಗಳ ನಡುವೆ ಯಾವುದೇ ತರದ ಸಂಬಂಧವಿಲ್ಲ ವೆಂದೂ, ಮನುಷ್ಯನನ್ನು ದೇವರು ಬೇರೊಂದು ರೀತಿಯಿಂದ ಪ್ರತ್ಯೇಕವಾಗಿ ಹುಟ್ಟಿಸಿರುವನೆಂದೂ ಕ್ರಿಸ್ತರು ತಿಳಿಯುತ್ತಿದ್ದರು. ಎಂದರೆ ಉಳಿದ ಸೃಷ್ಟಿಯನ್ನೆಲ್ಲ ದೇವರು ಜಡದಿಂದ ಹುಟ್ಟಿಸಿದನು; ಪಶುಪಕ್ಷಿ ಚಂದ್ರಸೂರ್ಯಾದಿ ವಸ್ತುಜಾತವೆಲ್ಲ ಜಡವಾಗಿರುವವು. ಕಲ್ಲುಮಣ್ಣುಗಳಿಗಿಂತ ಪಶುಪಕ್ಷಿಗಳು ಭಿನ್ನವಾಗಿರುವಂತೆ ಸಕೃ ದ್ದರ್ಶನಕ್ಕೆ ಕಂಡುಬಂದರೂ ವಸ್ತುತಃ ಎರಡೂ ಜಡಗಳೇ. ಪಶುಪಕ್ಷಿಗಳಲ್ಲಿ ಜೀವಾ ತ್ಮನಿರುವುದಿಲ್ಲವೆಂಬುದೇ ಇವೆರಡಕ್ಕೂ ಸಾಮಾನ್ಯವಾದ ಧರ್ಮ. ಆದರೆ ಮನು ಷ್ಯನ ಮಾತು ಹಾಗಲ್ಲ; ಅವನ ದೇಹವು ಜಡವೆಂಬುದು ನಿಜ; ಆದರೆ ಅವನಿಗೆ ಆತ್ಮವೆಂದರೆ ಜೀವವು ಇರುವುದು, ಈ ಜೀವವು ಜಡದಿಂದ ಹುಟ್ಟಿದ ವಸ್ತುವಲ್ಲ; ಚಿನ್ಮಯನಾದ ಪರಮೇಶ್ವರನು ತನ್ನ ಪ್ರತಿಬಿಂಬದಿಂದಲೇ ಈ ಜೀವಾತ್ಮನನ್ನು ಹುಟ್ಟಿಸಿದನು. ಮನುಷ್ಯನು ತೋರಿಸುವ ಚೇತನವ್ಯಾಪಾರಗಳೆಲ್ಲ, ಅವನ ದೇಹ ದಿಂದ ಭಿನ್ನವಾದ ಆತ್ಮನಿಂದ ಮಾಡಲ್ಪಡುತ್ತವೆ. ಆ ಆತ್ಮವು ಗರ್ಭಾವಸ್ಥೆಯ ಕೆಲವೊಂದು ಕಾಲದಲ್ಲಿ ಹೊರಗಿನಿಂದ ಬಂದು ಸೇರುತ್ತದೆ. ಇವೇ ಮೊದಲಾಗಿ ಬೈಬಲ್ಲಿನ ತತ್ತ್ವಗಳಿದ್ದವು. ಎಂತೆಯೇ ಕ್ರಿಸ್ತಧರ್ಮದ ವಿಜಯಕಾಲವೆಂದರೆ

ಮನುಷ್ಯನಿಗೂ ಉಳಿದ ಪ್ರಾಣಿಗಳಿಗೂ ಇರುವ ಸಂಬಂಧವೂ ಅದರ ಮಹತ್ತ್ವವೂ

ತತ್ತ್ವಜ್ಞಾನದ ಅವನತಿಯ ಕಾಲವೆಂದು ಹೇಕೇಲ ಮೊದಲಾದ ಪಂಡಿತರು ಅಭಿಪ್ರಾಯ ಪಡುತ್ತಾರೆ. ಅವರ "ಧರ್ಮಾಧಿಕಾರಿಗಳಾದ ಪೋಪರು ಜನರನ್ನು ಅಜ್ಞಾನದಲ್ಲಿಡುವುದೇ ತಮ್ಮ ಆದ್ಯಕರ್ತವ್ಯವೆಂದು ತಿಳಿದಿದ್ದರು" (ವಿಶ್ವಕೂಟ ಪು. ೧೯) ಆದರೆ ಯುರೋಪದಲ್ಲಿ ವಿದ್ಯೆಯು ಪುನರುಜ್ಜೀವನವಾಗಿ, ಜನರು ಸ್ವತಂತ್ರವಾಗಿ ವಿಚಾರಮಾಡಹತ್ತಿದಂದಿನಿಂದ, ಮತ್ತು ಎಷ್ಟೋ ಶಾಸ್ತ್ರಭಕ್ತರು ಈ ದುರಾಗ್ರಹದ ಧರ್ಮರಾಕ್ಷಸನಿಗೆ ಬಲಿಬಿದ್ದು ಹೋದಮೇಲೆ, ಆಧುನಿಕ ಶಾಸ್ತ್ರಗಳು ಭರದಿಂದ ಉತ್ಕರ್ಷ ಹೊಂದಹತ್ತಿದವೆಂದು ಹೇಳಬಹುದು.

ಶೋಧಿಸಬೇಕಾದ ವಿಷಯಕ್ಕೆ ಪ್ರಸ್ತುತವಾದ ಸಂಗತಿಗಳನ್ನೆಲ್ಲ ಕ್ರೋಡೀಕರಿಸಿ, ಸಾಮ್ಯಾಸಾಮ್ಯಗಳನ್ನು ಪರಿಶೀಲಿಸಿ, ಶಾಸ್ತ್ರೀಯ ವಿಭಾಗಗಳನ್ನು ಮಾಡಿ, ಅವುಗಳ ಯಥಾರ್ಥ ವರ್ಣನೆ ಮಾಡುವುದೇ ಭೌತಿಕ ಶಾಸ್ತ್ರಗಳು ಅನುಸರಿಸುವ ಮೊದಲಿನ ಮೆಟ್ಟಿಲುಗಳೆಂದು ಹಿಂದೆ ಹೇಳಿದ್ದೇವೆ. ಈ ದೃಷ್ಟಿಯಿಂದ ನಮಗೆ ಸದ್ಯಕ್ಕೆ ಉಪಲಬ್ಧವಾಗುವ ಸಕಲ ಪ್ರಾಣಿವರ್ಗವನ್ನೆಲ್ಲ ನೋಡಿ, ಅವುಗಳ ವಿಭಾಗವನ್ನು ಮಾಡುವುದೇ ಸದ್ಯಕ್ಕೆ ನಾವು ಗಮನಿಸತಕ್ಕ ವಿಷಯವಾಗಿದೆ. ಹೀಗೆ ಶಾಸ್ತ್ರೀಯ ವಿಭಾಗಗಳನ್ನು ಮಾಡುವುದೆಂದರೆ ಏನೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಬೇರೆ ಬೇರೆ ಎಂದು ತೋರುವ ವಸ್ತುಗಳಲ್ಲಿ ಕೆಲವು ಸಾಮ್ಯವೆಂದರೆ ಸಾಮಾನ್ಯವಾದ ಸಾದೃಶ್ಯಗಳಿದ್ದರೆ, ಅವನ್ನೆಲ್ಲ ನಾವು ಒಂದೇ ವರ್ಗದವೆಂದು ಕರೆಯುತ್ತೇವೆ. ವಾಚನಾಲಯದಲ್ಲಿ ಲಕ್ಷಾವಧಿ ಪುಸ್ತಕಗಳಿದ್ದರೂ ತತ್ತ್ವಜ್ಞಾನ, ಧರ್ಮ, ಭೌತಿಕಶಾಸ್ತ್ರ, ಗಣಿತ, ರಾಜನೀತಿ, ಅರ್ಥಶಾಸ್ತ್ರ ಮೊದಲಾದ ಹತ್ತೆಂಟು ವರ್ಗಗಳಲ್ಲಿ ಆ ಎಲ್ಲ ಪುಸ್ತಕಗಳ ವಿಭಾಗವನ್ನು ಮಾಡುತ್ತಾರೆ. ಇದೇ ರೀತಿಯಿಂದ ಸಾಕಷ್ಟು ಬುದ್ಧಿಯುಕ್ತನಾದ ಬೇರೆ ಜಗತ್ತಿನವನೊಬ್ಬ ಮನುಷ್ಯನು ಈ ಪೃಥ್ವೀತಲಕ್ಕೆ ಅಕಸ್ಮಾತ್ತಾಗಿ ಬಂದು ಇಲ್ಲಿಯ ಪ್ರಾಣಿಜಾಲವನ್ನೆಲ್ಲ ನಿರೀಕ್ಷಿಸಿದರೆ, ಅವನು ಅವುಗಳ ವಿಭಾಗಗಳನ್ನು ಹೇಗೆ ಮಾಡಬಹುದೆಂಬುದನ್ನು ನೋಡುವ. ಅವುಗಳ ಅಪರಿಮಿತ ಸಂಖ್ಯೆಯನ್ನೂ ವಿವಿಧತೆಯನ್ನೂ ನೋಡಿ ಅವನಿಗೆ ಮೊತ್ತಮೊದಲು ಆಶ್ಚರ್ಯವಾಗುವುದೆಂಬುದರಲ್ಲಿ ಸಂದೇಹವಿಲ್ಲ. ಇವುಗಳಲ್ಲಿ ಏನಾದರೊಂದು ಕ್ರಮವು ಅಥವಾ ವ್ಯವಸ್ಥೆಯು ಸಿಕ್ಕಬಹುದೆ? ಎಂಬ ಶಂಕೆಯೂ ಕೂಡ ಅವನಿಗೆ ಸಕೃದ್ದರ್ಶನಕ್ಕೆ

ನಮಗೆ ಸದ್ಯಕ್ಕೆ ಗೊತ್ತಿದ್ದ ಪ್ರಾಣಿವರ್ಗಗಳ ಅಭ್ಯಾಸವು

ಬರದಿರಲಾರದು. ಆದರೆ ಅದರಿಂದ ಅವನು ಎದೆಗುಂದದೆ ಈ ನಾನಾತರದ ಜೀವ ರೂಪಗಳಲ್ಲಿ ಒಳ್ಳೇ ಅಭಿರುಚಿಯನ್ನು ತೆಗೆದುಕೊಂಡು, ಅವಗಳನ್ನೆಲ್ಲ ಯೋಗ್ಯ ರೀತಿಯಿಂದ ಅಭ್ಯಾಸಮಾಡಿ, ತನ್ನ ಅಭ್ಯಾಸದ ವರದಿಯೊಂದನ್ನು ಪ್ರಸಿದ್ಧಮಾಡು ವನೆಂದು ತಿಳಿಯೋಣ. ಈ ಕೆಲಸದಲ್ಲಿ ಅವೆಲ್ಲವುಗಳ ಸಾಮ್ಯವೈಷಮ್ಯಗಳನ್ನು ಅವನು ಒಳ್ಳೇ ಪ್ರಯತ್ನಪೂರ್ವಕವಾಗಿ ಅಭ್ಯಾಸಿಸಬೇಕಾಗುವುದು. ಆಗ್ಗೆ ಸಾವಿರಾರು ಪ್ರಾಣಿಗಳು ನಾವು ಕರೆಯುವಂತೆ ಬೆಕ್ಕು, ನಾಯಿ, ಕುರಿ, ಆಕಳು ಮೊದಲಾದ ಗುಂಪುಗಳಲ್ಲಿ ಅಂತರ್ಭಾವವಾಗುವವೆಂದು ಅವನಿಗೆ ಸಹತ್ತುವದು. ಪ್ರಾರಂಭದಲ್ಲಿ ಈ ಗುಂಪುಗಳೆಲ್ಲ ಸಂಪೂರ್ಣವಾಗಿ ಭಿನ್ನವಾಗಿರುವವೆಂದು ಅವನು ತಿಳಿಯುತ್ತಾನೆ. ಆದರೆ ಅವನ ಅಭ್ಯಾಸವು ಮುಂದೆ ಸಾಗಿದಂತೆ ಇದಕ್ಕೂ ಹೆಚ್ಚು ವ್ಯಾಪಕವಾದ ಎಂದರೆ ನೂರಾರು ಗುಂಪುಗಳಿಗೂ ಕೂಡ ಹತ್ತಬಹುದಾದ ಕೆಲವು ಸಾಧಾರಣ ಧರ್ಮಗಳ ಅಸ್ತಿತ್ವವು ಅವನ ಲಕ್ಷ್ಯದಲ್ಲಿ ಬರುವುದು. ಇದರ ಬಲ ದಿಂದ, ನಾವು ಕರೆಯುವಂತೆ ಬೆನ್ನೆಲುವಿನ, ಬೆನ್ನೆಲುವುಗಳಿಲ್ಲದ ಎಂಬ ಎರಡೇ ಭಾಗಗಳಲ್ಲಿ ಪ್ರತಿಯೊಂದರ ಕೆಳಗೆ ನೂರಾರು ಗುಂಪುಗಳು ಬರುವವೆಂದು ಅವ ನಿಗೆ ಕಾಣಹತ್ತುವುದು. ಜಗತ್ತಿನೊಳಗಿರುವ ಪ್ರಾಣಿಗಳೆಲ್ಲ ನಿರಪವಾದದಿಂದ ಇವೆರಡರ ಕೆಳಗೇ ಬಂದುಬಿಡುವವೆಂದು ಅವನಿಗೆ ಸ್ವಾಭಾವಿಕವಾಗಿಯೇ ತೋರಹತ್ತುವುದು. ಆದರೆ ಈ ಎರಡು ವರ್ಗಗಳು ಮಾತ್ರ ತೀರಾ ಅಸದೃಶ ವಾಗಿರುವವೆಂದು ಅವನು ನಿಶ್ಚಯಿಸುವನು. ಆದರೆ ಅವನ ಈ ಅಭ್ಯಾಸಕ್ರಮವು ಸಾಕಷ್ಟು ಮುಂದೊರೆಯಿತೆಂದರೆ ಅವನ ಮನಸ್ಸನ್ನು ಸೆಳೆಯಬಹುದಾದ ಹಲವು ಸಂಗತಿಗಳು ಅವನಿಗೆ ದೃಷ್ಟಿಗೋಚರವಾಗಹತ್ತುವವು. ಎಲ್ಲ ಪ್ರಾಣಿಗಳಿಗೂ ಸಾಮಾನ್ಯವಾದ ಕೆಲವು ಧರ್ಮಗಳಿರುವವೆಂದು ಅವನಿಗೆ ಸ್ಪಷ್ಟವಾಗುವುದು. ಅವೆಲ್ಲ ಸುತ್ತಲಿನ ಸ್ಥಿತಿಗತಿಗಳಿಗೆ ಸರಿಯಾದ ಉತ್ತರಕೊಡುವವೆಂದೂ (Response to Environment), ಆಹಾರವನ್ನು ತಿಂದು ಪುಷ್ಟವಾಗುವವೆಂದೂ (Assimilation), ಪ್ರಜನನ ಶಕ್ತಿಯಿಂದ ತಮ್ಮಂತಹ ಬೇರೆ ಜೀವಿಗಳನ್ನು ಹುಟ್ಟಿಸುವವೆಂದೂ ಕಂಡುಬರುವುದು. ಇಷ್ಟು ವ್ಯಾಪಕವಾದ ಆದರೂ ಅದ್ಭುತ ವಾದ ಸಾಮ್ಯಗಳನ್ನು ನೋಡಿ ಅವನ ವಿಚಾರಪ್ರವಾಹವು ಬೇರೆ ಕಡೆಗೆ ಹೊರಳ ಬಹುದು. ಸಧ್ಯಕ್ಕಿನ ಜೀವಿಗಳೆಲ್ಲ ಒಂದೇ ವಂಶವೃಕ್ಷದ ಬೇರೆ ಬೇರೆ ಶಾಖೆಗ ಳಿರಬೇಕೆಂದು ಅವನಲ್ಲಿ [illegible] ಸಂದೇಹವು ಉತ್ಪನ್ನವಾಗುವುದು. ಈ

ಶಂಕೆಗೆ ಪುಷ್ಟಿಕೊಡುವ ಹಲವು ನೋಟಗಳೂ ಅವನಿಗೆ ಗೋಚರವಾಗುವವು. ನಮಗೆ ಗೊತ್ತಿದ್ದ ಜೀವಿಗಳೆಲ್ಲ ಒಂದೇ ರೀತಿಯಿಂದ ಎಂದರೆ ಬರಿಗಣ್ಣಿಗೆ ಕಾಣಲು ದುರ್ಲಭವಾದ ಒಂದೇ ಜೀವಕೋಶದ ಗುಣಾಕಾರದಿಂದ ಉದಯವಾಗುತ್ತವೆ. ಆನೆ, ಕಪ್ಪೆ, ಮೊಲ ಅಥವಾ ಮೊಸಳೆಗಳೆಲ್ಲವೂ ತಮ್ಮ ಪ್ರಥಮಾಯುಷ್ಯವನ್ನು ಒಂದೇ ತೆರನಾಗಿ ಪ್ರಾರಂಭಿಸುತ್ತವೆ. ವಿಶಿಷ್ಟ ಯಂತ್ರಗಳ ಸಹಾಯದಿಂದ ಯುಕ್ತನಾದ ಕುಶಲಶಾಸ್ತ್ರಜ್ಞನಿಗೂ ಕೂಡ ಅವುಗಳಲ್ಲಿ (ಗರ್ಭದ ಮೊದಲಿನ ಪಿಂಡಗಳಲ್ಲಿ) ವೈವಿಧ್ಯವಿರುವುದೆಂದು ಸಿದ್ಧಮಾಡಲಾಗುವುದಿಲ್ಲ. ಆದರೂ ಜೀವಿಗಳೆಲ್ಲ ಗರ್ಭಗಟ್ಟಿದ (Fertilised egg) ಸುಮಾರು ೧/೧೨೦ ಇಂಚು ವ್ಯಾಸವುಳ್ಳ ತತ್ತಿಯಿಂದಲೇ (ಪುರುಷ ಬೀಜ ಮಿಶ್ರಿತ ಸ್ತ್ರ್ಯಣು) ಹುಟ್ಟಿ ಬೆಳೆಯುತ್ತವೆಂಬುದು ಈಗ ಹುಡುಗರಿಗೂ ಕೂಡ ಗೊತ್ತಾಗಿರಬೇಕಾದ ಮಾತಾಗಿದೆ.

ಪ್ರಾಣಿವರ್ಗಗಳ ಉತ್ಕ್ರಾಂತಿಯು.

ಇದು ಒಂದು ವಂಶಸಾಧರ್ಮ್ಯಮಾತ್ರವಾದಂತಾಯಿತು. ಇಂತಹ ಧರ್ಮಗಳನ್ನು ನೋಡಿ ಭಾಗಮಾಡುತ್ತಹೋದರೆ, ಮೊದಲು ಮೇಲೆ ಹೇಳಿದಂತೆ ಬೆನ್ನೆಲುವಿಲ್ಲದ ಪ್ರಾಣಿಗಳೂ, ಬೆನ್ನೆಲುವಿದ್ದ ಪ್ರಾಣಿಗಳೂ ಎಂದು ವಿಶಾಲವಾದ ಆದರೂ ಮಹತ್ತ್ವದ ಭಾಗವನ್ನು ಮಾಡಬೇಕಾಗುತ್ತದೆ. ಆಮೇಲೆ ಬೆನ್ನೆಲುವಿನ ಶಾಖೆಯನ್ನು ಹಿಡಿದು ಹೊರಟೆವೆಂದರೆ ಮೊದಲು ಮೀನ ಅಥವಾ ಜಲಚರಗಳು, ಆಮೇಲೆ ಕಪ್ಪೆ ಮೊದಲಾದ ದ್ವಿಚರಗಳು, ಆಮೇಲೆ ಉರಗಮನ ಅಥವಾ ಭೂಚರಗಳು, ಆಮೇಲೆ ಪಕ್ಷಿ ಅಥವಾ ಖೇಚರಗಳು. ಮುಂದೆ ಸ್ತನಮೃಗಗಳೆಂದು ಐದು ಭಾಗಗಳನ್ನು ಮಾಡಬಹುದು. (ಆದರೆ ವಿಕಾಸವು ಒಂದೇ ಸರಳರೇಷೆಯಲ್ಲಿ ಆಗುತ್ತಹೋಗುವುದಿಲ್ಲೆಂಬುದನ್ನು ಲಕ್ಷ್ಯದಲ್ಲಿಡಬೇಕು.) ನಮ್ಮ ಪೃಥ್ವಿಯಮೇಲೆ ಜೀವವು ಹುಟ್ಟಿ ಸುಮಾರು ೮೦ ಕೋಟಿ ವರುಷಗಳಾದವೆಂದು ಕಲ್ಪಿಸಿದರೆ, ( ೨೦ ಕೋಟಿ ವರುಷಗಳಾದವೆಂದು ಲಾಯಲ್ ಮೊದಲಾದವರು ಹೇಳುತ್ತಾರೆ. ೧೦ ಕೋಟಿ ವರುಷಗಳಾಗಿವೆಯೆಂದು ಬೇರೆಯವರ ಅಭಿಪ್ರಾಯವಿದೆ. ಆಧುನಿಕ ಶಾಸ್ತ್ರವೂ ವಿಚಾರವೂ ಪು. ೧೭, ೬೩.) ಅವುಗಳಲ್ಲಿ ಮೊದಲಿನ ೩೦ ಕೋಟಿ ವರುಷಗಳವರೆಗೆ ಕೇವಲ ಬೆನ್ನೆಲುವುಗಳಿಲ್ಲದ ಪ್ರಾಣಿಗಳೇ ನಮ್ಮ ಸೃಷ್ಟಿಯಮೇಲೆ ಜೀವಿಸುತ್ತಿದ್ದವೆಂದು ಹೇಳಬಹುದು. ಎಂದರೆ ಕಪ್ಪೆಚಿಪ್ಪು, ಪುವಾಲ, ಶೈವಾಲ, ಕೀಡಿ, ಚೇಳು ಮೊದಲಾದವುಗಳಷ್ಟೆ ಇಲ್ಲಿ ವಾಸಿ

ಸುತ್ತಿದ್ದ ಪ್ರಾಣಿಗಳು. ಆಗ ಅಲ್ಲಿ ಉಳಿದ ಯಾವ ಪ್ರಾಣಿಗಳೂ ಬದುಕಿರಲಿಲ್ಲ. ಮುಂದಿನ ೩೦ ಕೋಟಿ ವರುಷಗಳಲ್ಲಿ ಮೀನಗಳೂ ದ್ವಿಚರಗಳೂ ಮುಖ್ಯವಾಗಿದ್ದವು. ಇದನ್ನು ಮೀನಗಳ ಯುಗವೆಂದು ಕರೆಯಬಹುದು. ಪೃಥ್ವಿಯ ಮೇಲೆ ನೀರು ನೆಲಗಳು ಕಾಣಹತ್ತಿ ೮೦ ಕೋಟಿ ವರುಷಗಳಾದ ಮೇಲೆ ಜೀವದ ಉತ್ಪತ್ತಿಯಾಗಿದೆಯೆಂಬುದನ್ನು ಈ ಮೊದಲೇ ಓದಿದ್ದೇವೆ. ಅವನ್ನು ಕೂಡಿಸಿ ಮೊದಲಿನ ೧೪೦ ಕೋಟಿ ವರುಷಗಳನ್ನು " **ಆದಿಯುಗ** " ಅಥವಾ " ಶಿಲಾಯುಗ " (Primary or Paleozoic) ವೆಂದು ಕರೆಯುವ್ರದುಂಟು. ಆಮೇಲೆ ದ್ವಿತೀಯ ಅಥವಾ ಮಧ್ಯಯುಗವು ( Mesozoic or Secondary ) ೧೨ ಕೋಟಿ ವರುಷಗಳ ವರೆಗೆ ಬಾಳಿತು. ಈ ಕಾಲದಲ್ಲಿ ಉರಗಮನಗಳೇ ವಿಶೇಷವಾಗಿದ್ದುದರಿಂದ ಇದಕ್ಕೆ **ಉರಗಮನಯುಗ**ವೆಂದೂ ಕರೆಯುವುದುಂಟು. ಆ ಕಾಲದಲ್ಲಿ ಪಕ್ಷಿಗಳೂ ಸ್ತನಮೃಗಗಳೂ ಸಿಕ್ಕಬಹುದಾಗಿದ್ದರೂ ಅವು ತೀರ ಅಪರೂಪವಾಗಿದ್ದವು. **ತೃತೀಯ** ಅಥವಾ ( Tertiary or Modern ) **ಹೊಸಯುಗ**ವು ಪ್ರಾರಂಭವಾಗಿ ಸುಮಾರು ನಾಲ್ಕೆಂಟು ಕೋಟಿ ವರುಷಗಳಾಗಿವೆಯೆಂದು ಲೆಕ್ಕಮಾಡಿದ್ದಾರೆ. ( ಬೇರೆ ಕೆಲವರು ಸದ್ಯಕ್ಕೆ ನಾಲ್ಕನೆಯ ಅಥವಾ ಮನುಷ್ಯಯುಗವು ನಡೆಯುತ್ತಿರುವುದೆಂದು ಅಭಿಪ್ರಾಯಪಡುತ್ತಾರೆ. ಇದೇ ಕಾಲದಲ್ಲಿ ಆಶ್ಚರ್ಯಕರವಾದ ಹಿಮಾಲಯ ಮತ್ತು ಆಲ್ಪ್ಸ ಪರ್ವತಗಳೂ ರಾಕಿಸ್ (Rockes) ಮತ್ತು ಆ್ಯಂಡಿಸ್ (The Andes) ಇವುಗಳೂ, ಜ್ವಾಲಾಮುಖಿಯ ವ್ಯಾಪಾರದಿಂದ ಸಮುದ್ರವನ್ನು ಬಿಟ್ಟು ಮೇಲಕ್ಕೆದ್ದವು. ಆ ಸುಮಾರಿಗೇ ನಮ್ಮ ಸದ್ಯಕ್ಕಿನ ಮಹಾಸಾಗರಗಳೂ ಬೇರೆ ಬೇರೆ ಖಂಡಗಳೂ ಸರ್ವಸಾಧಾರಣವಾಗಿ ಸದ್ಯಕ್ಕಿನ ರೂಪವನ್ನು ಪಡೆದವೆಂದು ಹೇಳಬಹುದು. ಆ ಕಾಲದ ಜಗತ್ತಿನ ನಕಾಶವು ಪ್ರಸ್ತುತ ಜಗತ್ತಿನ ನಕಾಶವನ್ನು ಹೋಲಹತ್ತಿತು. ಈ ಯುಗದ ಪ್ರಾರಂಭದಲ್ಲಿ ಪೃಥ್ವಿಯ ಮೇಲಿನ ಹವೆಯು ಬಹು ಶೀತವಾಗಿತ್ತು. ಆದರೆ ಬರಬರುತ್ತ ಅದರ ಉಷ್ಣತೆಯು ಹೆಚ್ಚುತ್ತ ಹೋಗಿ ಪ್ರಾಣಿ ಜೀವನಕ್ಕೆ ಅನುಕೂಲವಾಯಿತು. ಇನ್ನು ಭವಿಷ್ಯತ್ಕಾಲದಲ್ಲಿ ನಮ್ಮ ಭೂತಲದ ಹವಾಮಾನಗಳು ಯಾವ ತರದವಾಗುವವೆಂಬುದನ್ನು ನಿಶ್ಚಯಿಸಿ ಹೇಳಲಿಕ್ಕಾಗುವಂತಿಲ್ಲ. ನಮ್ಮ ಭೂತಲದ ಉಷ್ಣತೆಯು ಹೆಚ್ಚಾಗುತ್ತ ನಡೆದಿರಬಹುದು. ಅಥವಾ ನಾವು ಮತ್ತೊಂದು ಹೈಮಯುಗದ ದಾರೀಹಿಡಿದು ಹೊರಟಿರಬಹುದು.

ಅದರಂತೆಯೇ ಜ್ವಾಲಾಮುಖಿಗಳ ವ್ಯಾಪಾರವು ಹೆಚ್ಚಾಗುತ್ತ ನಡೆದಿರಬಹುದು. ಅಥವಾ ಕಡಿಮೆಯಾಗಹತ್ತಿರಬಹುದು. ನಮಗೆ ಸದ್ಯಕ್ಕೆ ಯಾವುದನ್ನೂ ಹೇಳಲಿಕ್ಕೆ ಬರುವಂತಿಲ್ಲ. ಭೌತಿಕಶಾಸ್ತ್ರವು ಈ ಪ್ರಸಂಗದಲ್ಲಿ ಕುಂಠಿತವಾಗುತ್ತಿದೆ. ಈ ನವೀನ ಕಾಲದಲ್ಲಿಯೇ ಉಳಿದ ಎಲ್ಲ ಪ್ರಾಣಿಗಳೂ ಅಸ್ತಿತ್ವದಲ್ಲಿ ಬಂದವು. ( ಜಗತ್ತಿನ ಸಣ್ಣ ಇತಿಹಾಸವು. ೧–೧೦ ಪ್ರಕರಣಗಳು. )

ಬೆನ್ನೆಲುವುಳ್ಳ ಪ್ರಾಣಿಗಳೂ ಸ್ತನವ್ಯಗಗಳೂ

ನಮಗೆ ಗೊತ್ತಿದ್ದ ಬೆನ್ನೆಲುವುಳ್ಳ ಪ್ರಾಣಿಗಳಲ್ಲಿ ಸುಮಾರು ೩೨೦೦೦ ವರ್ಗಗಳನ್ನು ಮಾಡಿದ್ದಾರೆ. ಇವುಗಳಲ್ಲೆಲ್ಲ ಸಸ್ತನ ಪ್ರಾಣಿಯ ಇತಿಹಾಸವೇ ನಮಗೆ ವಿಶೇಷ ಮಹತ್ತ್ವದ್ದಾಗಿದೆ. ಸ್ತನಜೀವಿಗಳಾದರೂ ಉರಗಮನ ಹಾಗೂ ಪಕ್ಷಿಗಳಂತೆ ದ್ವಿಚರಗಳಾದ ಕಪ್ಪೇ ಜಾತಿಯ ಪ್ರಾಣಿಯಿಂದ ಹುಟ್ಟಿವೆಯೆಂದು ಹೇಳಬಹುದು. ಸ್ತನವ್ಯಗಗಳಲ್ಲಿ ಮೋನೋಟ್ರೇಮ (Monotremes) ಮಾರ್ಸುಪಿಯಲ್ (Marsupials) ಮತ್ತು ಪ್ಲಾಸೆಂಟಲ್ ( Placentals ) ಎಂಬ ಮೂರು ಗುಂಪುಗಳನ್ನೂ ೧೧ ವಿಭಾಗಗಳನ್ನೂ ಮಾಡುತ್ತಾರೆ. ಈ ೧೧ ವಿಭಾಗಗಳಲ್ಲಿ ಎಲ್ಲಕ್ಕೂ ಕಡೆಯದೇ ಪ್ರೈಮೇಟ (Primates)ಎಂಬ ಪ್ರಾಣಿಗಳನ್ನೊಳಕೊಂಡಿರುತ್ತದೆ. ಪ್ರೈಮೇಟವೆಂದರೆ ಶ್ರೇಷ್ಠ ಅಥವಾ ಉತ್ಕೃಷ್ಟವಾದವುಗಳೆಂದರ್ಥವು. ಎಂದರೆ ಇವು ಉತ್ಕ್ರಾಂತಿಯ ನಿಚ್ಚಣಿಕೆಯಲ್ಲಿ ಕಡೆಯ ಕಾಲಾಗಿವೆ. ಇವುಗಳಲ್ಲಿ ( ೧ ) ಅರ್ಧಕಪಿ ( Lemuroids ) ಕಪಿ ( Simioids ), ಮತ್ತು ಮನುಷ್ಯನೆಂದು ಮೂರು ಉಪಭಾಗಗಳನ್ನು ಮಾಡಿದ್ದಾರೆ. ಇವುಗಳಲ್ಲಿ ಎರಡನೆಯದಾದ ಕಪಿ ವರ್ಗದಲ್ಲಿಯೇ ಓರಾಂಗ ಉಟಾನ, ಗಿಬನ್, ಚಿಂಪಂಝೀ ಮತ್ತು ಗೋರಿಲ್ಲಾ ಮೊದಲಾದ ಎಲ್ಲ ಜಾತಿಯ ಕೋತಿಗಳೂ ಮಂಗಗಳೂ ಬರುತ್ತವೆ. ಅವನ್ನು ಮುಂದೆ ಹೆಚ್ಚು ವಿಸ್ತಾರವಾಗಿ ಚರ್ಚಿಸತಕ್ಕವರಿರುವೆವಾದುದರಿಂದ ಸದ್ಯಕ್ಕೆ ಅವುಗಳ ನಾಮನಿರ್ದೇಶದಿಂದಲೇ ವಾಚಕರು ತೃಪ್ತರಾಗಬೇಕು.

ತುಲನಾತ್ಮಕ ಶಾರೀರಶಾಸ್ತ್ರ

ಈ ಜ್ಞಾನವೆಲ್ಲ ನಮಗೆ ಹೇಗೆ ಅವಗತವಾಯಿತು ? ತುಲನಾತ್ಮಕ ಶಾರೀರಶಾಸ್ತ್ರವೇ ಇದರ ಮೂಲ ತಾಯಿಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಇ. ಸ. ೧೫೦೦ರ ಕೊನೆಯುವರೆಗೆ ಪರಿಶೋಧನೆಯಂತಹ ಉಚ್ಚತಮ ಹೇತುವಿನಿಂದ ಕೂಡ ಮನುಷ್ಯಶವಗಳನ್ನು ಕೊಯ್ಯುವುದು ಶಕ್ಯವಿರಲಿಲ್ಲ. ಹಾಗೆ ಮಾಡುವುದು ಮಹಾ

ಪಾಪವೆಂದು ತಿಳಿದು, ಅಪರಾಧಿಗಳಿಗೆ ದೇಹಾಂತ ಪ್ರಾಯಶ್ಚಿತ್ತವನ್ನು ಕೊಡುತ್ತಿದ್ದರು. ಆದುದರಿಂದ ತುಲನಾತ್ಮಕ ಶಾರೀರ ಶಾಸ್ತ್ರವಂತೂ ದೂರೇ ಉಳಿಯಿತು; ಮನುಷ್ಯನ ಶಾರೀರಶಾಸ್ತ್ರವೂ ಕೂಡ ನಮ್ಮ ಪಾಲಿಗೆ ಗುಪ್ತಧನವಾಗಿಯೇ ಉಳಿಯಿತು. ಆದರೆ ಮುಂದಿನ ಮೂರು ಶತಮಾನಗಳಲ್ಲಿ ಈ ಶಾಸ್ತ್ರದ ಅಭ್ಯಾಸವು ಬಹಳೇ ಒತ್ತರದಿಂದ ನಡಯಿತು. ಪ್ರಸ್ತುತವಾದ ತುಲನಾತ್ಮಕ ಶಾರೀರಶಾಸ್ತ್ರವು ಸನ್ ೧೮೦೩ ನೇ ಇಸವಿಯಲ್ಲಿ ಫ್ರೆಂಚ ಪಂಡಿತನಾದ ಕ್ಯೂವಿಯರ (Georges Cuvier) ನಿಂದ ಉದಯಕ್ಕೆ ಬಂತು. ಈ ಮೊದಲೇ ಜರ್ಮನಿಯ ಗೇಠೆ (Goethe in 1790) ಮೊದಲಾದ ಪಂಡಿತರು ಮನುಷ್ಯನ ಅಸ್ಥಿಪಂಜರವನ್ನು ಉಳಿದ ಪ್ರಾಣಿಗಳ ದೇಹರಚನೆಯೊಡನೆ ಹೋಲಿಸಿ ನೋಡುವ ಪ್ರಯತ್ನ ಮಾಡಿದ್ದರು. ಆದರೆ ಕ್ಯೂವಿಯರನಂತೆ ಅವರು ಸಮಸ್ತ ಪ್ರಾಣಿವರ್ಗವನ್ನೇ ತಮ್ಮ ದೃಷ್ಟಿಪಥದೊಳಗೆ ತರುವ ವಿಚಾರವನ್ನು ಮಾಡಿದ್ದಿಲ್ಲ. ಇದರಂತೆಯೇ ಶರೀರಾವಯವಗಳ ಸೂಕ್ಷ್ಮರಚನೆಯ ಪರಿಶೋಧನೆಯು (Microscopic Anatomy) ಇ. ಸ. ೧೮೦೨ ರಲ್ಲಿ ಫ್ರೆಂಚ ಪಂಡಿತನಾದ ಬಾಯಕ್ಯಾಟ್ಟಿ (Bickat) ನಿಂದ ಅಸ್ತಿತ್ವದಲ್ಲಿ ಬಂತು. ಇದರ ಬೆಳವಣಿಗೆಯಿಂದಲೇ ಮುಂದೆ ಜೀವಕೋಶ ಸಿದ್ಧಾಂತವು (Cellular Theory) ಶೋಧಿಸಲ್ಪಟ್ಟಿತು. ಇದರಿಂದ ಮನುಷ್ಯ ಮತ್ತು ಉಳಿದ ಎಲ್ಲ ಪ್ರಾಣಿಗಳಲ್ಲಿ, ದೇಹದ ಪ್ರತಿಯೊಂದು ಅವಯವವೂ ಕೂಡ ಒಂದೇ ತರದ ಸೂಕ್ಷ್ಮಕೋಶಗಳಿಂದ ಮಾಡಲ್ಪಟ್ಟಿರುವುದೆಂದು ಸಿದ್ಧವಾಯಿತು. ಇವಕ್ಕೆ "ಸೆಲ್ಸ" (Cells) ಎಂದು ಕರೆಯುತ್ತಾರೆ. ನಮ್ಮ ದೇಹವು ಜೀವಾಣುಗಳ ಅಥವಾ ಜೀವಕೋಶಗಳ ರಾಜ್ಯವೆಂದು ಕಲ್ಪಿಸಿದರೆ (Cellular state) ಆ ರಾಜ್ಯದಲ್ಲಿ ಈ ಜೀವಕೋಶಗಳೇ– ಆ ರಾಜ್ಯದ ಮುಖ್ಯ ಅಂಗಗಳೇ ನಿಜವಾಗಿಯೂ ಚುರುಕಾದ ಪುರವಾಸಿಗಳೆಂದು ಹೇಳಬಹುದು. ಈ ಪುರವಾಸಿಗಳೇ– ಕೋಟ್ಯವಧಿ ಸಂಖ್ಯಾಕವಾಗಿ ಕೂಡಿಕೊಂಡು ನಮ್ಮ ದೇಹವನ್ನು ಘಟಿಸುತ್ತವೆ. ಇವೆಲ್ಲ ಜೀವಾಣುಗಳು ಒಂಟಿಯಾದ, ಆದರೂ ಗರ್ಭಗಟ್ಟಿದ ತತ್ತಿಯಿಂದ (ಪುರುಷಾಣು ಮಿಶ್ರಿತ ಸ್ತ್ರ್ಯಣುವಿನಿಂದ) ಕ್ರಮಶಃ ಎರಡು, ನಾಲ್ಕು, ಎಂಟು, ಹದಿನಾರರಂತೆ ದ್ವಿಗುಣಿತವಾಗುತ್ತ ಹೋಗುವುದರಿಂದ ಹೆಚ್ಚೆಚ್ಚಾಗುತ್ತ ಹೋಗುತ್ತವೆ. ಅವಯವಗಳ ಸಂಯೋಗವೂ ಅವುಗಳ ರಚನೆಯೂ ಮನುಷ್ಯ ಮತ್ತುಉಳಿದ ಬೆನ್ನೆಲುವಿನ ಪ್ರಾಣಿಗಳಲ್ಲಿ ಸಾಧಾರಣವಾಗಿ ಒಂದೇ ಇರು

ವವೆಂದು ಹೇಳಬಹುದು. ಇವುಗಳಲ್ಲಿ ಸ್ತನವ್ಯಗಗಳೇ ತೀರ ಎಳೆಯ ವಯಸ್ಸಿನ ವಾಗಿದ್ದರೂ ಬಹಳೇ ಮುಂದುವರಿದಿರುವವು. ಅವು ಹೀಗೆ ಮೊದಲನೆಯ ಸ್ಥಾನ ವನ್ನು ಪಡೆದಿರುವುದು ಅವುಗಳ ಕೆಲವು ವಿಶಿಷ್ಟಧರ್ಮಗಳಿಂದ. ಉದಾ: ಅವು ಗಳ ಚರ್ಮದೊಳಗಿನ ಗ್ರಂಥಿ ( Glands of the Skin ), ಕೇಶ ಮತ್ತು ಮೊಲೆಗಳ ಸೂಕ್ಷ್ಮರಚನೆ ಹಾಗೂ ರಕ್ತದ ಕಣಗಳು. ಇವೆಲ್ಲ ಬಾಬುಗಳಲ್ಲಿ ಮನುಷ್ಯನು ನಿಜವಾಗಿಯೂ ಸಸ್ತನಪ್ರಾಣಿಯಾಗಿರುವನೆಂಬುದು ಸಿದ್ಧವಾಗಿ ಹೋಗಿದೆ. ( ವಿಶ್ವಕೂಟ, ಪು. ೨೦-೨೨ )

**ಮನುಷ್ಯನು ಬೆನ್ನೆಲು ವುಳ್ಳ ಪ್ರಾಣಿಗಳಿಂದ ಭಿನ್ನನಾಗಿಲ್ಲ.**

" ನಮ್ಮ ಸಕಲ ದೇಹವು ಅದರ ಮುಖ್ಯರಚನೆಯಲ್ಲಿಯೂ, ಅಂಗಾಂಗಗಳ ರಚನೆಯಲ್ಲಿಯೂ ಬೆನ್ನೆಲುವಿನ ಪ್ರಾಣಿವರ್ಗದ ಸಾಧರ್ಮ್ಯಗಳನ್ನೇ ತೋರಿಸು ತ್ತದೆ.... ಮೀನದಿಂದ ಮನುಷ್ಯನ ವರೆಗಿನ ಎಲ್ಲ ಬೆನ್ನೆ ಲುಬಿನ ಪ್ರಾಣಿಗಳೂ ಎಲ್ಲ ಮುಖ್ಯ ವಿಷಯುಗಳಲ್ಲಿ ಒಂದಸ್ನೊಂದು ಸಂಪೂರ್ಣವಾಗಿ ಹೋಲುತ್ತವೆ. (೧) ಪೃಷ್ಠವಂಶ ಹಾಗೂ ತಲೆಬುರುಡೆಗಳಿಂದ ಯುಕ್ತವಾದ ಗಟ್ಟಿಯಾದ ಆಂತರಿಕ ಅಸ್ಥಿಪಂಜರವೆಂದರೆ ಕೋಮಲಾಸ್ಥಿ ಮತ್ತು ಎಲುಬಿನ ಹಂದರವು ಎಲ್ಲ ಪ್ರಾಣಿ ಗಳಲ್ಲಿ ಒಂದೇ ತೆರನಾಗಿರುವುದು. ಪ್ರಾಣಿವಿಕಾಸದ ಮೇಲಮೇಲಕ್ಕೆ ಹೋದಂತೆ ತಲೆಬುರುಡೆಯ ರಚನೆಯು ಎಷ್ಟೋ ಮಾರ್ಪಾಟುಗಳನ್ನು ತೋರಿಸುವುದೆಂಬುದು ನಿಜ. ಆದರೂ ಒಟ್ಟಿನ ಮೇಲೆ ಅವೆಲ್ಲ ಒಂದೇ ವರ್ಗದಲ್ಲಿ ಬರುವವೆಂದು ಹೇಳಿ ದರೆ ತಪ್ಪಾಗುವಂತಿಲ್ಲ. (೨) ಮನೋವ್ಯಾಪಾರಗಳಿಗೆ ಮುಖ್ಯಸಾಧನವಾದ ಕಶೇರುಕೆಯೂ ಮತ್ತು ಮಿದುಳುಗಳಿಂದ ಯುಕ್ತವಾದ ಮುಖ್ಯ ಜ್ಞಾನತಂತು ಕ್ರಮವೂ ( Central nervous System ), ಎಲ್ಲ ಪ್ರಾಣಿಗಳಲ್ಲಿಯೂ ಎಲುಬಿನ ಹಂದರದ ಹಿಂಭಾಗದಲ್ಲಿರುತ್ತದೆ. (೩) ಎಲುಬಿನ ಹೊದಿಕೆಯಾದ ತಲೆಬುರುಡೆಗೆ ಹತ್ತುವ ಮಾತು ಅದರೊಳಗಿರುವ ಮಿದುಳಿಗೂ ಅಕ್ಷರಶಃ ಹತ್ತು ತ್ತದೆ. ಅದರ ಆಕಾರವೂ ರಚನೆಯೂ ಎಷ್ಟೋ ಕಿರುಕುಳ ಹೆಚ್ಚುಕಡಿಮೆಗಳನ್ನು ತೋರಿಸಿದರೂ, ಅದರ ಸಾಮಾನ್ಯವಾದ ರಚನೆಯು ಎಲ್ಲಕಡೆಗೆ ಒಂದೇ ಸಮನಾ ಗಿಯೇ ಇರುವುದು. ಮತ್ತು ಈ ಮಿದುಳೇ ಎಲ್ಲ ಚೈತನ್ಯಕ್ಕೆ ಸಾಧನವಾಗಿರುವು ದೆಂದೂ, ಉಚ್ಚ ತರಗತಿಯ ಮನೋವ್ಯಾಪಾರಗಳಿಗೆಲ್ಲ ಅವಶ್ಯವಾದ ವಸ್ತುವಾಗಿ ರುವುದೆಂದೂ ಬೇರೆ ಹೇಳಬೇಕಾಗಿಲ್ಲ. (೪) ನಮ್ಮ ಉಳಿದ ಇಂದ್ರಿಯಗಳ

ಮೂಶಾದರೂ ಅದೇ. ನಾವೆಲ್ಲ ಒಂದೇ ವಂಶಕ್ಕೆ ಸಂಬಂಧಿಸಿರುವುದರಿಂದ ಎಲ್ಲ ಅವಯವಗಳ ಮುಖ್ಯರಚನೆಯೂ, ದೇಹಗಳಲ್ಲಿ ಅವು ಆಕ್ರಮಿಸಿಕೊಂಡ ಸ್ಥಾನವೂ ಎಲ್ಲ ಪ್ರಾಣಿಗಳಲ್ಲಿಯೂ ಸದೃಶವಾಗಿರುವವು. ಆದರೆ ಭಿನ್ನಭಿನ್ನ ಪರಿಸ್ಥಿತಿಗಳಲ್ಲಿ ಇರಬೇಕಾಗುವುದರಿಂದ ಅವುಗಳ ಕೆಲವು ಭಾಗಗಳು ಮಾತ್ರ ಆಕಾರ ರಚನೆಗಳಲ್ಲಿ ತುಸು ಬದಲಾವಣೆಗಳನ್ನು ಹೊಂದಿರುವವು. ಉದಾ: ಹೃದಯರಚನೆ, ರಕ್ತಾಭಿಸರಣ ಮತ್ತು ಶುದ್ಧಾಶುದ್ಧ ರಕ್ತವಾಹಿನಿಗಳು. ಅದರಂತೆಯೇ ಕರುಳಿನೊಳಗಿನ ಕೊಳವಿಯು ಒಡೆದು ಉಸುರಾಡಿಸಲಿಕ್ಕೆ ಸಾಧನವಾದ "ಜಿಲ್‌ಗಟ" ಅಥವಾ "ಹೆಡ್‌ಗಟ" (Gill-gut or head-gut) ಎಂದೂ ಪಚನಕ್ರಿಯೆಯಲ್ಲಿ ಯಕೃತ್ತಿಗೆ ಸಹಾಯಮಾಡುವ "ಬಾಡಿಗಟ" ಅಥವಾ "ಲಿವ್ಹರ ಗಟ" (Body-gut or liver-gut) ಎಂದೂ ದ್ವಿವಿಧವಾಗಿ ಪರಿಣಮಿಸಿರುವುದು ಎಲ್ಲ ಬೆನ್ನೆಲುಬಿನ ಪ್ರಾಣಿಗಳಿಗೂ ಸಮಾನವಾಗಿರುವುದು. (೫) ಹಾಗೆಯೇ ಸ್ನಾಯುಗಳ ಟಿಸಲುಗಳಲ್ಲಿಯೂ, ಮತ್ತು ವಿಶಿಷ್ಟವಾದ ಮೂತ್ರ ಹಾಗೂ ಜನನೇಂದ್ರಿಯಗಳ ರಚನೆಯಲ್ಲಿಯೂ ಮನುಷ್ಯನು ಸತ್ಯವಾಗಿಯೂ ಬೆನ್ನೆಲುಬಿನ ಪ್ರಾಣಿಯಾಗಿರುವನೆಂದು ಹೇಳಬಹುದು.

ಮನುಷ್ಯನು ದ್ವಿಪಾದನಲ್ಲ, ಚತುಷ್ಪಾದ ಪ್ರಾಣಿಯು

ಅದರಂತೆಯೇ ಮನುಷ್ಯನೂ ಪಕ್ಷಿಗಳೂ ವಸ್ತುತಃ ಚತುಷ್ಪಾದ ಪ್ರಾಣಿಗಳೇ ಅಹುದೆಂದು ಹೇಳಬಹುದು. ದ್ವಿಚರಪ್ರಾಣಿಯಿಂದ ಮನುಷ್ಯನ ವರೆಗಿನ ಎಲ್ಲ ಭೂಚರವಾದ ಬೆನ್ನೆಲುಬಿನ ಪ್ರಾಣಿಗಳಲ್ಲಿ ನಾಲ್ಕೂ ಕಾಲುಗಳೊಳಗಿನ ಅಸ್ಥಿಪಂಜರವು ಒಂದೇತರದ್ದಾಗಿ ಅಷ್ಟೇ ಅವಯವಗಳಿಂದ ರಚಿಸಲ್ಪಟ್ಟಿರುವುದೆಂದು ಕಂಡುಬರುವುದು. ಪ್ರತ್ಯಕ್ಷವಾಗಿ ನಾಲ್ಕು ಕಾಲುಗಳುಳ್ಳ ಪಶುಗಳ ಮುಂಗಾಲುಗಳು, ಮನುಷ್ಯನ ಕೈಗಳು, ತೊಗಲಬಾವಲಿ ಮತ್ತೂ ಉಳಿದ ಪಕ್ಷಿಗಳ ರೆಕ್ಕೆಗಳು ಇವುಗಳಲ್ಲೆಲ್ಲ ಒಂದೇತರದ ಎಲುಬುಗಳಿರುವವು. ನಾಲ್ಕೂ ಪಾದಗಳಲ್ಲಿ ಪ್ರತಿಯೊಂದಕ್ಕೆ ಐದು ಬೆರಳುಗಳಿರುವವು. ಇವು ದ್ವಿಚರಪ್ರಾಣಿಯ ಕಾಲದಲ್ಲಿಯೇ ಹುಟ್ಟಿ, ಆನುವಂಶಿಕವಾಗಿರುವವೆಂಬ ಕಾರಣದಿಂದ ಇಂದಿನ ವರೆಗೂ ಹಾಗೆಯೇ ಉಳಿದುಕೊಂಡು ಬಂದಿರುತ್ತವೆ. ಹಾಗೆಯೇ ಕೀಲಗಳು (Joints), ಅಸ್ಥಿಬಂಧನಗಳು (Ligaments), ಸ್ನಾಯುಗಳು, ಮತ್ತೂ ಅವುಗಳ ನರಗಳು ಈ ಎಲ್ಲ ಮಹತ್ತ್ವದ ಬಾಬುಗಳಲ್ಲಿ ಮನುಷ್ಯನು ಚತುಷ್ಪಾದನಾಗಿದ್ದಾನೆ.

ಮನುಷ್ಯನು ಸಸ್ತನ ಪ್ರಾಣಿಯು ! ಚರ್ಮದ ಮೇಲಿರುವ ಚಿಕ್ಕ ಕೇಶಾಚ್ಛಾದನವೂ ಬೆವರಿನ ಮತ್ತು ನೆಣದ ಗ್ರಂಥಿಗಳೆಂಬ ಎರಡು ತರದ ಚರ್ಮಗ್ರಂಥಿಗಳೂ ಈ ಪ್ರಾಣಿಗಳ ದೇಹದ ಹೊರಭಾಗದ ಮೇಲೆ ಕಾಣುವ ವೈಶಿಷ್ಟ್ಯಗಳು. ನೆಣದ ಗ್ರಂಥಿಯೇ ಮುಂದೆ ಹೊಟ್ಟೆಯ ಮೇಲಿನ ಚರ್ಮದ ಮೇಲೆ ಸ್ತನವೆಂಬ ಅವಯವವನ್ನು ಹುಟ್ಟಿಸಿತು. ಯಾಕೆಂದರೆ ಮೊಲೆಯು ಹಾಲಿನ ಗ್ರಂಥಿ ಮತ್ತು ಹೊಟ್ಟೆಯ ಮೇಲಿನ ತೊಗಲಿನ ಮಡಿಕೆಗಳಿಂದ ಆಗಿರುವುದೆಂಬ ಮಾತು ನಿರ್ವಿವಾದವು. ಅವಕ್ಕೆ ಮೂಗು ಬಂದು ಸದ್ಯಕ್ಕಿನ ಕುಚಾಗ್ರಗಳು ಸಿದ್ಧವಾದವು. ಶರೀರದ ಒಳಭಾಗದಲ್ಲಿಯಾದರೂ ಕೆಲವು ವೈಶಿಷ್ಟ್ಯಗಳಿರುವವು. ಅವುಗಳಲ್ಲಿ ಪೊಳ್ಳಾದ ದೇಹವನ್ನು ದ್ವಿಭಾಗಿಸುವ ಸ್ನಾಯುಗಳ ಗೋಡೆಯು ಬಹು ಮಹತ್ತ್ವದ್ದಾಗಿದೆ. ಇದು ಎದೆ ಮತ್ತು ಹೊಟ್ಟೆಗಳ ನಡುವಿರುವುದೊಂದು ತೆಳ್ಳಗಿನ ಕರುಳುಪರೆ ಅಥವಾ ಹೃತ್ಪಟಲವು (Diaphragm). ಇದು ಎಲ್ಲ ಸಸ್ತನ ಪ್ರಾಣಿಗಳಲ್ಲಿಯೂ ಕಂಡುಬರುವುದು. ಇಷ್ಟೇ ಅಲ್ಲ; ಇದು ಬೇರೆ ಯಾವ ಪ್ರಾಣಿವರ್ಗಗಳಲ್ಲಿಯೂ ಇರುವುದಿಲ್ಲವೆಂಬುದನ್ನು ಲಕ್ಷದಲ್ಲಿಡಬೇಕು. ಸ್ತನ ಪ್ರಾಣಿಗಳ ತಲೆಬುರುಡೆಗಾದರೂ ಕೆಲವು ವಿಶಿಷ್ಟವಾದ ರಚನೆಗಳಿರುವವು. ಕೆಳಗಿನ ಮತ್ತು ಮೇಲಿನ ದವಡೆಗಳೂ ಹಾಗೂ ಕಣತಲೆ(ಹಣೆ ಮತ್ತು ಕಿವಿಗಳ ನಡುವಿನ ಭಾಗ)ಗಳಲ್ಲಿ ಈ ಮಾರ್ಪಾಟುಗಳು ಮುಖ್ಯವಾಗಿ ತೋರಿಬರುವವು. ಇದರ ಹೊರತಾಗಿ ಮಿದುಳು, ಮೂಸಿನೋಡುವ ಇಂದ್ರಿಯ, ಹೃದಯ, ಶ್ವಾಸಕೋಶ ಅಥವಾ ಪುಪ್ಪುಸಗಳು, ಒಳಗಿನ ಹಾಗೂ ಹೊರಗಿನ ಜನನೇಂದ್ರಿಯದ ಭಾಗಗಳು, ಮೂತ್ರಪಿಂಡ ಮತ್ತು ಉಳಿದ ಅವಯವಗಳಲ್ಲಿಯೂ ಹಲಕೆಲವು ಸಮಾನವಾದ ವೈಶಿಷ್ಟ್ಯಗಳು ಮುಖ್ಯಮುಖ್ಯ ಭಾಗಗಳಲ್ಲಿಯೂ ಸಣ್ಣಸಣ್ಣ ಭಾಗಗಳಲ್ಲಿಯೂ ಒಂದೇ ತೆರನಾಗಿ ಈ ಜಾತಿಯ ಎಲ್ಲ ಪ್ರಾಣಿಗಳಲ್ಲಿಯೂ ಕಂಡುಬರುವವು. ಇದರಿಂದ ಸ್ತನಮೃಗಗಳು ಉರಗಮನ ಮತ್ತು ದ್ವಿಚರಗಳಿಂದ ಬಹುಕಾಲದ ಹಿಂದೆಯೇ ಹುಟ್ಟಿರಬೇಕೆಂಬುವುದು ನಿರ್ವಿವಾದವಾಗಿ ಸಿದ್ಧವಾಗುತ್ತದೆ.

ಮನುಷ್ಯನು ಸಸ್ತನ ಪ್ರಾಣಿಯು

ಮನುಷ್ಯನನ್ನು ಪ್ಲಾಸೆಂಟಲಗಳ ( Placentals ) ವರ್ಗದಲ್ಲಿಯೂ ಹಾಕಬಹುದು ಈ ವರ್ಗದ ಪ್ರಾಣಿಗಳಿಗೆ ಈ ಹೆಸರು ಬಂದಿರುವುದು

ಮನುಷ್ಯನು ಮಾಸದ ಚೀಲವಿರುವ ಪ್ರಾಣಿಗಳ ವರ್ಗದಲ್ಲೂ ಬರುವನು

ಪ್ಲಾಸೆಂಟಾ ಎಂಬ ಅವಯವದ ಮೇಲಿಂದ. ಇದನ್ನು "ಪುನರ್ಜನ್ಮ"ವೆಂದು ಕೆಲವರು ಭಾಷಾಂತರಿಸುತ್ತಾರೆ. ಕೂಸುಬಿದ್ದ ಕೆಲವು ಹೊತ್ತಿನ ಮೇಲೆ ಈ "ಮಾಸದ ಚೀಲವು" ಹೊರಕ್ಕೆ ಬರುತ್ತದೆ. ಮಾಸವು ಬೀಳದಿದ್ದರೆ ತಾಯಿಗೆ ಅಪಾಯಕರವೆಂದು ತಿಳಿಯುತ್ತಾರೆ. ಅದನ್ನೇ ಇಂಗ್ಲಿಷದಲ್ಲಿ ಪ್ಲಾಸೆಂಟಾ ಎಂದು ಕರೆಯುತ್ತಾರೆ. ಮರಿಯು ತಾಯಿಯ ಗರ್ಭದಲ್ಲಿರುವಾಗ ಬಹುಕಾಲದ ವರೆಗೆ ಇದರಿಂದಲೇ ಅದು ಪೋಷಿಸಲ್ಪಡುತ್ತದೆ. ಪಿಂಡದ ಸುತ್ತಲಿರುವ ಕೋರಾಯಿನ್ (Chorion) ಎಂಬ ಪರದೆಯಲ್ಲಿ ಹುಟ್ಟಿ ಬೆಳೆಯುವ ಜುಟ್ಟು ಅಥವಾ ಗೊಂಡೆಗಳಂತಹ ವಸ್ತುವೇ "ಪ್ಲಾಸೆಂಟಾ" ಎಂದು ಕರೆಯಲ್ಪಡುತ್ತದೆಂದೂ ಹೇಳಬಹುದು. ಅದು ತಾಯಿಯ ಗರ್ಭಾಶಯದ ಒಳಮಗ್ಗಲಿಗೆ ಇರುವ ಪರದೆಯನ್ನು ಒತ್ತುತ್ತಿರುತ್ತದೆ. ಇವೆರಡೂ (ತಾಯಿಯ ಪರದೆ ಮತ್ತು ಪಿಂಡದ ಪರದೆಗಳು) ರಚನೆಗಳ ನಡುವಿರುವ ಚರ್ಮವು ಈ ಭಾಗದಲ್ಲಿ ಬಹಳೇ ತಿಳುವಾಗಿರುವುದರಿಂದ ತಾಯಿಯ ರಕ್ತದೊಳಗಿನ ಸತ್ತ್ವವೇ ನೆಟ್ಟಗೆ ಈ ಕೂಸಿನ ರಕ್ತದೊಳಗೆ ಹೋಗಿ ಕೂಡಿಕೊಳ್ಳಬಹುದು. ಪಿಂಡದ ರಕ್ಷಣೆಗೆ ಇದು ಅತ್ಯುತ್ತಮವಾದ ಹಂಚಿಕೆಯು; ಮತ್ತು ವಿಕಾಸವಾದದಲ್ಲಿ ಇದು ಬಹುಕಾಲದ ಮೇಲೆ ಉದಯಕ್ಕೆ ಬರುತ್ತದೆ. ಇದರಿಂದ ಪಿಂಡವು ರಕ್ಷಕವಾದ ಗರ್ಭಾಶಯದಲ್ಲಿ ಹೆಚ್ಚು ಕಾಲದ ವರೆಗೆ ಬದುಕಿ, ಅದು ಹೆಚ್ಚಾಗಿ ಬೆಳೆಯಲಿಕ್ಕೆ ಬಹಳ ಅನುಕೂಲವಾಗುವುದು. ಇದು ಮಾರ್ಸುಪಿಯಲ್, ಮತ್ತು ಮೋನೋಟ್ರೀಮ ಎಂಬ ಮೊದಲಿನ ಪ್ರಾಣಿಗಳಲ್ಲಿ ಇರುವುದಿಲ್ಲ. ಇದರ ಹೊರತಾಗಿ ಇನ್ನೂ ಬೇರೆ ಸಾಧರ್ಮ್ಯಗಳೂ ಇರುವವು. ಮಸ್ತಿಷ್ಕದ ಬೆಳವಣಿಗೆ, ಮತ್ತು ಮಾರ್ಸುಪಿಯಲ ಎಲುಬಿನ ಅಭಾವ ಇವು ಅವುಗಳಲ್ಲಿ ಮುಖ್ಯವಾದವುಗಳು.

ಆ ಮೇಲೆ "ಶ್ರೇಷ್ಠ"ರ ವರ್ಗವು ಬರುವುದು. ಇವುಗಳಲ್ಲಿ ವೃಕ್ಷವಾಸಕ್ಕೆ ಬೇಕಾಗುವ ಉದ್ದವಾದ ಎಲುಬುಗಳಿರುವವು. ಕೈಕಾಲುಗಳಿಗೆ ಐದೈದು ಬೆರಳುಗಳಿದ್ದು, ಹೆಬ್ಬೊಟ್ಟೆಗೆ ಉಳಿದ ಬೊಟ್ಟುಗಳು ವಿರುದ್ಧವಾಗಬಹುದಾದುದರಿಂದ ಗಿಡದ ಟೊಂಗೆ ಮೊದಲಾದವುಗಳನ್ನು ಹಿಡಿದುಕೊಳ್ಳಲಿಕ್ಕೆ ಬಹು ಸುಲಭವಾಗುವಂತಿರುವುದು. ಅವಕ್ಕೆ ತುಸು ಹೆಚ್ಚು ಕಡಿಮೆ

ಮನುಷ್ಯನು ಪ್ರಾಯಮೇಟ ವರ್ಗದಲ್ಲಿಯೂ ಬರುತ್ತಾನೆ

ಉಗುರುಗಳು ಬಂದಿದ್ದರೂ ಪಂಜರಗಳಿರುವುದಿಲ್ಲ. ಹಲ್ಲುಗಳ ರಚನೆಯು ಪೂರ್ಣತೆಯನ್ನು ಪಡೆದಿದೆ. ಎಂದರೆ ನಾಲ್ಕು ತರದ ಹಲ್ಲುಗಳು ಅವಕ್ಕುಂಟು; ಮುಂದಿನ ಅಥವಾ ಕಚ್ಚುವ ಹಲ್ಲು, ಸೂಲದ ಹಲ್ಲು, ದವಡೇಹಲ್ಲು, ಮತ್ತು ಸಣ್ಣ ಅಥವಾ ಸುಳ್ಳುದವಡೇಹಲ್ಲುಗಳೇ ಈ ನಾಲ್ಕು ತರದ ಹಲ್ಲುಗಳು. ತಲೆಬುರುಡೆ ಮತ್ತು ಮಿದುಳಿನಲ್ಲಾದರೂ ಕೆಲವು ಹೆಚ್ಚುಕಡಿಮೆಗಳಿವೆ. ಇವೆಲ್ಲವುಗಳಿಂದ ಮನುಷ್ಯನು "ಶ್ರೇಷ್ಠ"ರ ವರ್ಗಕ್ಕೆ ಸೇರುವನೆಂದು ಹೇಳಬಹುದು. ಅರ್ಧಕಪಿಗಳೂ, ಕಪಿಗಳೂ ಮತ್ತು ಮನುಷ್ಯನೂ ಈ ಶ್ರೇಷ್ಠರ ವರ್ಗದಲ್ಲಿದ್ದ ಉಪಭಾಗಗಳೆಂದು ಮೇಲೆ ಹೇಳಿದ್ದೇವೆ. ಮನುಷ್ಯನು ಕಪಿಜಾತಿಗೆ ಹೇಗೆ ಸೇರುವನೆಂಬುದನ್ನು ಮುಂದಿನ ಪ್ರಕರಣದಲ್ಲಿ ನೋಡೋಣ. (ವಿಶ್ವಕೂಟ. ಪು. ೨೨–೨೭).

ಒಟ್ಟಿನ ಮೇಲಿಂದ ಮನುಷ್ಯನನ್ನು ಉಳಿದ ಪ್ರಾಣಿಗಳೊಡನೆ ಕೆಳಗೆ ಬರೆದಂತೆ ಹೋಲಿಸಬಹುದು: (೧) **ದೇಹರಚನೆ**ಯಲ್ಲಿ ಮನುಷ್ಯನು ಉಳಿದ ಪ್ರಾಣಿಗಳಂತೆಯೇ ಇರುವನು. ಅವನ ಶರೀರದೊಳಗಿನ ಎಲುಬುಗಳನ್ನೆಲ್ಲ ಅವಕ್ಕೆ ಸಮಾನವಾದ ಉಳಿದ ಪ್ರಾಣಿಗಳ ಎಲುಬುಗಳೊಡನೆ ಹೋಲಿಸಬಹುದು. ಅವನ ಸ್ನಾಯುಗಳೆಲ್ಲ ಉಳಿದ ಪ್ರಾಣಿಗಳ ಸ್ನಾಯುಗಳಿಗೆ ಸರಿಯಾಗಿ ಹೊಂದುವವು. ಅವನ ದೇಹದಲ್ಲಿರುವ ೫೦೦ ಸ್ನಾಯುಗಳಲ್ಲಿ ಒಂದೂ ಕೂಡ ಅವನ ವೈಶಿಷ್ಟ್ಯವಾಗಿಲ್ಲ. ಮತ್ತು ಉಳಿದ ಪ್ರಾಣಿಗಳಲ್ಲಾದರೂ ಆ ಆ ಸ್ನಾಯುಗಳು ಆಆ ಎಲುಬುಗಳೊಡನೆ ಸಂಬಂಧಿಸಲ್ಪಟ್ಟು ಅದೇ ಸ್ಥಾನದಲ್ಲಿ ಅದೇ ವ್ಯವಸ್ಥೆಯಿಂದ ಇದ್ದುಕೊಂಡು, ಮನುಷ್ಯನ ದೇಹದಲ್ಲಿ ಮಾಡುವ ಕೆಲಸವನ್ನೇ ಮಾಡುವವು. ನರಗಳೂ ರಕ್ತವಾಹಿನಿಗಳೂ ಕೂಡ ಇದಕ್ಕೆ ಅಪವಾದವಾಗಿಲ್ಲ. ಮಿದುಳು ಸಹಿತ ಇದೇ ನಿಯಮವನ್ನನುಸರಿಸುತ್ತದೆ. (೨) ರೋಗಗಳು–ಮನುಷ್ಯನು ಕೆಳಗಿನ ಪ್ರಾಣಿಗಳ ಸಂಸರ್ಗದಿಂದ ಅವುಗಳ ರೋಗವನ್ನು ತಾನು ತೆಗೆದುಕೊಳ್ಳುವನಲ್ಲದೆ, ಅವಕ್ಕೂ ತನ್ನ ಕೆಲವು ರೋಗಗಳನ್ನು ಕಳಿಸಿಕೊಡುವನೆಂದು (Communicates) ಹೇಳಬಹುದು. ಉದಾ: ಕಾಲರಾಬೇನೆಯು, ತದ್ದು, ಗಜಕರ್ಣ ಮೊದಲಾದವುಗಳು. ಗಜಕರ್ಣವಂತೂ ಬಹಳೇ ಸಾಂಸರ್ಗಿಕವಾದ ರೋಗವು. ಪಶುರೋಗ ಶಾಲೆಯುಲ್ಲಿ ಕೆಲಸ ಮಾಡುವ ಎಷ್ಟೋ ಜನರಿಗೆ ಪಶುಗಳಿಂದ ತೀರ ಅಲ್ಪಕಾಲದಲ್ಲಿಯೇ ಈ ರೋಗವು ಬಂದು ಸೇರುವುದೆಂಬುದು ಎಲ್ಲರ ಅನುಭವದ ಮಾತು. ಇದರ ಬಗ್ಗೆ ಡಾರ್ವಿನ್ನನು

ಮನುಷ್ಯನಿಗೂ ಉಳಿದ ಪ್ರಾಣಿಗಳಿಗೂ ಇರುವ ಸಾಮ್ಯವು.

ಬರೆಯುವುದೇನೆಂದರೆ " ಅವು (ಪಶು)ಗಳ ಅವಯವಗಳೂ ರಕ್ತವೂ ಒಂದೇ ತರದ್ದಾಗಿದೆಯೆಂಬುವುದು ಇದರಿಂದ ಸ್ಪಷ್ಟವಾಗಿ ಸಿದ್ಧವಾಗುವುದು. (೩) ಔಷಧಿಗಳು– ಎಷ್ಟೋ ಓಷಧಿಗಳಿಂದ ನಮ್ಮ ದೇಹದ ಮೇಲಾಗುವಂತಹ ಪರಿಣಾಮಗಳೇ ಉಳಿದ ಪ್ರಾಣಿಗಳ ಮೇಲಾದರೂ ಆಗುವವು. ಎಷ್ಟೋ ಜಾತಿಯ ಮಂಗಗಳು ಚಹಾ, ಕಾಫಿ, ಸೆರೆ ಮುಂತಾದವುಗಳನ್ನು ಬಹು ಪ್ರೀತಿಯಿಂದ ಕುಡಿಯುತ್ತವೆ. ತಂಬಾಕು ಸೇದುವುದಾದರೂ ಅವಕ್ಕೆ ಬಹಳೇ ಸೇರುತ್ತದೆನ್ನಬಹುದು. "ಈಶಾನ್ಯ ಆಫ್ರಿಕೆಯೊಳಗಿನ ಜನರು ಅಲ್ಲಿಯ ವನ್ಯಕಪಿಗಳನ್ನು ಹಿಡಿಯಬೇಕಾದರೆ ಒಂದು ವಿಶಿಷ್ಟ ಸಾಧನವನ್ನು ಅವಲಂಬಿಸುವರು. ಸರಾಯಿಯಿಂದ ತುಂಬಿದ ಪಾತ್ರೆಗಳನ್ನು ಅವು ವಾಸಿಸುವ ಸ್ಥಳದ ಸಮೀಪಕ್ಕೆ ಒಯ್ದು ಇಡುತ್ತಾರೆ. ಆ ಪಾತ್ರೆಗಳನ್ನು ನೋಡಿದೊಡನೆ ಸುತ್ತಲಿನ ಗಿಡಗಳ ಮೇಲಿದ್ದ ಮಂಗಗಳೆಲ್ಲ ಓಡಿ ಬಂದು ಆ ಸೆರೆಯನ್ನು ಯಥೇಚ್ಛವಾಗಿ ಪಾನಮಾಡುತ್ತವೆ. ಆ ಮೇಲೆ ತುಸು ಅವಕಾಶದಲ್ಲಿಯೇ ಆ ಮಂಗಗಳು ಪ್ರಜ್ಞಾಹೀನವಾಗಿ ಬೀಳುವವು. ಈ ರೀತಿಯಿಂದ ಜನರು ಸುಲಭವಾಗಿ ಆ ಕ್ರೂರ ಕಪಿಗಳನ್ನು ಹಿಡಿಯುವ ಹಂಚಿಕೆಯನ್ನು ಹುಡುಕಿತೆಗೆದಿದ್ದಾರೆ. " ಎಂದು ಆ ಪ್ರದೇಶದಲ್ಲಿ ಎಷ್ಟೋ ವರುಷಗಳವರೆಗೆ ವಾಸಮಾಡಿ ಕಪಿಗಳ ಸ್ವಭಾವದ ಅಭ್ಯಾಸವನ್ನು ಮಾಡಿದ ಬ್ರೆಮ ( Bream ) ಸಾಹೇಬರು ಉಲ್ಲೇಖಿಸಿದ್ದಾರೆ. ಇದರ ಅರ್ಥವೇನೆಂದರೆ, ಮನುಷ್ಯ ಮತ್ತು ವಾನರರ ಜ್ಞಾನ ನರಗಳ ರಚನಾಕ್ರಮವೂ ವ್ಯವಸ್ಥೆಯೂ ( Nervous system ) ಒಂದೇ ತರದವಾಗಿರುವುದರಿಂದ ಸೆರೆ ಮೊದಲಾದ ವಸ್ತುಗಳಿಂದ ಮನುಷ್ಯನ ಮೇಲಾಗುವ ಪರಿಣಾಮಗಳೇ ಮಂಗಗಳ ಮೇಲಾದರೂ ತಪ್ಪದೇ ಆಗುವವು. ( ೪ ) ಯಾವ ಆಂತರಂಗಿಕ ಪರತಂತ್ರ ಜೀವಿಗಳಿಂದ(Parasites) ಮನುಷ್ಯನ ನಾಶವಾಗುತ್ತದೆಯೋ ಅವುಗಳಿಂದಲೇ ಪಶುಗಳಾದರೂ ನಾಶವಾಗುತ್ತವೆ. ಎರಡನೆಯವರ ಮೇಲೆ ಅವಲಂಬಿಸಿ ತಮ್ಮ ಹೊಟ್ಟೆಯನ್ನು ತುಂಬಿಕೊಳ್ಳುವ ಪ್ರಾಣಿಗಳಿಗೆ ಪರತಂತ್ರಜೀವಿಗಳೆಂದು ಹೆಸರು. ಎಂದರೆ ಯಾರ ಆಶ್ರಯದಲ್ಲಿ ಇವು ವಾಸಮಾಡುವವೋ ಆ ಪ್ರಾಣಿಗಳನ್ನೇ ತಿಂದು ಜೀವಿಸುವವು. ಮನುಷ್ಯ ಶರೀರದ ಒಳಭಾಗದಲ್ಲಿ ಇಂತಹ ಕೆಲವು ಹುಳಗಳು ಸೇರಿದವೆಂದರೆ ಅವನು ನಾನಾರೋಗಗಳಿಂದ ಪೀಡಿತನಾಗುವನೆಂದು ಬೇರೆ ಹೇಳಬೇಕಾಗಿಲ್ಲ. ಕಿಂಬಹುನಾ, ಮನುಷ್ಯನ ರೋಗಗಳೆಲ್ಲ ಇಂತಹ ಹುಳಗಳಿಂದಲೇ ಹುಟ್ಟು

ತ್ತವೆಂದು ಹೇಳಬಹುದು. ಈ ನಾಶಕರ ವರ್ಗದ ಪ್ರಾಣಿಗಳಲ್ಲಿ ಯಾವ ಜಾತಿಯ ಕ್ರಿಮಿಗಳಿಂದ ಮನುಷ್ಯನಿಗೆ ವಿಶೇಷವಾಗಿ ಅಪಾಯವಾಗುತ್ತದೆಯೋ ಅವುಗಳಿಂದಲೇ ಪಶುಗಳ ದೇಹಕ್ಕಾದರೂ ವಿಪುಲವಾಗಿ ಕೇಡಾಗುವುದು. (೫) ಕಾಲಕ್ರಮದ ನಿಯಮ:—ಮಹತ್ತ್ವವಾದ ಕೆಲವು ಜೀವನ ವ್ಯಾಪಾರಗಳು ನಿಯಮಿತ ಕಾಲಾವಧಿಗಳಲ್ಲಿಯೇ ಜರುಗುವವು. ಕೋಳಿಯು ತನ್ನ ತತ್ತಿಗಳಮೇಲೆ ಕುಳಿತುಕೊಂಡಿತೆಂದರೆ, ಅಲ್ಲಿಂದ ಎಷ್ಟು ದಿವಸಗಳಮೇಲೆ ಮರಿಗಳು ತತ್ತಿಗಳನ್ನೊಡೆದು ಹೊರಗೆ ಬರುವವೆಂಬುದನ್ನು ನಾವು ನಿಶ್ಚಿತವಾಗಿ ಹೇಳಬಹುದು. ಬಾತುಕೋಳಿಯು ತನ್ನ ತತ್ತಿಗಳ ಮೇಲೆ ಕುಳಿತುಕೊಂಡರೆ ಕೋಳಿಗಿಂತಲೂ ಒಂದು ವಾರ ಹೆಚ್ಚು ಹತ್ತುವುದೆಂದು ನಾವು ನಿಶ್ಚಯಿಸುತ್ತೇವೆ. ಇದೇ ನಿಯಮವು ಸಸ್ತನ ಪ್ರಾಣಿಗಳ ಗರ್ಭಾವಸ್ಥೆಯ ಕಾಲಕ್ಕೂ ಈಯುವಿಕೆಗೂ ಹತ್ತುತ್ತದೆಂದು ಹೇಳಬಹುದು. ತುಸು ವಿಚಾರಮಾಡಿ ನೋಡಿದರೆ ಈ ಸಂಗತಿಯು ಬಲು ವಿಚಿತ್ರವಾಗಿರುವುದೆಂದು ತೋರದಿರಲಾರದು. ಎಂದರೆ ಬೇರೆ ಬೇರೆ ಮೃಗಗಳು ಮರಿಗಳನ್ನು ಈಯಬೇಕಾದರೆ ಬೇರೆ ಬೇರೆ ಕಾಲಾವಧಿಗಳು ಬೇಕಾಗುವವು. ಈ ಕಾಲಾವಧಿಗಳೆಲ್ಲ ಏಳು ದಿವಸಗಳ ಒಂದು ವಾರದ ಕೆಲವು ಪಟ್ಟುಗಳಾಗಿರುವವೆಂಬುದು ಮೇಲೆ ಹೇಳಿದ ಸಂಗತಿಗಿಂತ ಹೆಚ್ಚು ಆಶ್ಚರ್ಯಕರವಾದ ಸಂಗತಿಯಾಗಿದೆ. ಎಂದರೆ ಈ ಕಾಲಕ್ರಮಗಳೆಲ್ಲ ಚಂದ್ರನ ಕಲಾವೃದ್ಧಿಗಳಮೇಲೆ ಅವಲಂಬಿಸಿರುತ್ತವೆ. ಉಳಿದ ಕೆಲವು ಕಾಲಾವಧಿಗಳಾದರೂ ಪ್ರಾಣಿಗಳ ಜೀವನ ವ್ಯಾಪಾರಗಳಲ್ಲಿ ಕಂಡುಬಂದರೂ ಏಳು ದಿವಸಗಳ ಕಾಲವು ಬಲು ಸಾಮಾನ್ಯವಾದ ಮಾತೆಂದು ಗೊತ್ತಾಗಿದೆ ಕೆಲವು ವ್ಯಾಪಾರಗಳಿಗೆ ಒಂದುವಾರ ಕಾಲವು ಬೇಕಾಗಿದ್ದರೆ, ಮತ್ತೆ ಕೆಲವಕ್ಕೆ ಎರಡುವಾರ ಮೂರುವಾರ ಹೀಗೆ ೪೮ ವಾರಗಳವರೆಗೆ ಕಾಲಗಳು ಕ್ಲೃಪ್ತವಾಗಿವೆ. ಕ್ರಿಮಿ, ಪಕ್ಷಿ, ಸ್ತನಪ್ರಾಣಿ, ಮತ್ತು ಮನುಷ್ಯ ಮೊದಲಾದ ಎಲ್ಲ ಜೀವಿಗಳಿಗೆ ಇದು ಸಾಮಾನ್ಯವಾದ ನಿಯಮವು. ಇದು ಹೀಗೆಯೇ ಏಕಿರಬೇಕು, ಇವೆಲ್ಲ ಚಂದ್ರನ ಮೇಲೆ ಏಕೆ ಅವಲಂಬಿಸಿರಬೇಕು, ಚಂದ್ರನ ಕಲಾವೃದ್ಧಿಗಳಿಗೂ ಈ ಪ್ರಾಣಿಗಳ ಜೀವನ ವ್ಯಾಪಾರಕ್ಕೂ ಸಂಬಂಧವೇನು, ಇವೇ ಮೊದಲಾದ ಪ್ರಶ್ನೆಗಳ ಬಗ್ಗೆ ಇನ್ನೂವರೆಗೆ ನಿಶ್ಚಿತವಾದ ಜ್ಞಾನವು ದೊರಕಿಲ್ಲ. ಆದರೆ ಪ್ರಾಣಿಗಳೆಲ್ಲ ಮೊದಲು ಸಮುದ್ರದ ದಡದಲ್ಲಿರತಕ್ಕವಾದುದರಿಂದ, ಸಮುದ್ರದ ಏರಿಳಿತಗಳಮೇಲೆ ಪ್ರಾಣಿಗಳ ಆಯುಷ್ಯವು ಅವಲಂಬಿಸಿತ್ತು. ಆದರೆ ಈ ಭರತಿ ಓಹೋಟಿಗಳು ಚಂದ್ರನ

ಮೇಲೆ ಅವಲಂಬಿಸಿರುವವೆಂಬುದು ಸಹಜವಿದೆ. ಈ ರೀತಿಯಾಗಿ ಅಪ್ರತ್ಯಕ್ಷ ರೀತಿಯಿಂದಾದರೂ ಚಂದ್ರನ ಕಲಾವೃದ್ಧಿಗಳಿಗೂ ಪ್ರಾಣಿಗಳ ಜೀವನ ವ್ಯಾಪಾರಗಳಿಗೂ ಸಂಬಂಧವು ಹುಟ್ಟಿರಬೇಕೆಂದು ತರ್ಕಮಾಡಿದ್ದಾರೆ. (೬) ಗಾಯುಗಳ ಮಾಯುವಿಕೆ:–ಮನುಷ್ಯನ ಗಾಯುಗಳು ಯಾವರೀತಿಯಿಂದ ಮಾಯುವವೋ ಅದೇ ರೀತಿಯಿಂದಲೇ ಪಶುಗಳ ಗಾಯುಗಳಾದರೂ ಮಾಯುವವೆಂದು ಗೊತ್ತಾಗಿದೆ. ವಿಕಾಸವಾದದ ನಿಚ್ಚಣಿಕೆಯಲ್ಲಿ ಆ ಆ ಪ್ರಾಣಿಗಳು ಕೆಳಗಿನ ತರಗತಿಯಲ್ಲಿದ್ದಂತೆ, ಮತ್ತು ಆ ಆ ಅವಯುವಗಳು ಕೀಳ್ತರಗತಿಯವಿದ್ದಂತೆ, ಅವುಗಳ ಮಾಯುವಿಕೆಯ ಶಕ್ತಿಯಾದರೂ ಹೆಚ್ಚಾಗಿರುವುದು. ಎಂದರೆ ತೀರ ಕೆಳಗಿನ ಪ್ರಾಣಿಗಳ ದೇಹದ ಬಹುಭಾಗವನ್ನು ಕೂಡ ಕಡಿದು ಹಾಕಿದರೂ ಅದು ಮತ್ತೆ ಪುನಃ ಚಿಗಿತು ಮೊದಲಿನಂತೆ ಪೂರ್ಣವಾಗಬಹುದು. ಆದರೆ ಮನುಷ್ಯನ ಕೈಯೊಂದನ್ನು ಕಡಿದು ಹಾಕಿದರೆ ಅದು ತಿರುಗಿ ಚಿಗಿಯುವುದು ಶಕ್ಯವಿಲ್ಲ. ಮನುಷ್ಯ ದೇಹದ ಮೇಲಿನ ಚಿಕ್ಕ ಚಿಕ್ಕ ಗಾಯುಗಳು ಮಾತ್ರ ಮಾಯುವವು. ಎಂದರೆ ಉತ್ಕ್ರಾಂತಿಯ ಮೇಲಮೇಲಿನ ಮೆಟ್ಟಲುಗಳನ್ನು ಏರುತ್ತ ಹೋದಂತೆ ಆ ಗಾಯುಗಳ ಮಾಯುವ ಶಕ್ತಿಯು ಕಡಿಮೆಯಾಗುತ್ತ ಹೋಗುವುದೆಂದು ಇದರ ಅರ್ಥವು. (೭) ಹಡೆಯುವುದು ಅಥವಾ ಈಯುವುದು:–ಪ್ರಜನನ ಶಕ್ತಿಯಿಲ್ಲದಿದ್ದರೆ ಆ ಆ ವರ್ಗದ ಪ್ರಾಣಿಗಳು ಬಹುದಿವಸ ಬದುಕಿರಲಾರವೆಂಬುವುದು ಸ್ಪಷ್ಟವಿದೆ. ಮೊತ್ತ ಮೊದಲು ಹೆಣ್ಣು ಗಂಡೆಂಬ ಲಿಂಗಗಳ ಕಲ್ಪನೆಯೇ ಇರಲಿಲ್ಲ. ಒಂದೇ ಪ್ರಾಣಿಯಲ್ಲಿ ಹೆಣ್ಣು ಮತ್ತು ಗಂಡಿನ ಎರಡೂ ಅವಯುವಗಳಿರುತ್ತಿದ್ದವು. ಎಂದರೆ ತೀರ ಕೆಳಗಿನ ಪ್ರಾಣಿಗಳು ತಾವೇ ದ್ವಿಧಾಭಿನ್ನವಾಗಿ ಅಥವಾ ಮೊಗ್ಗೆಯೊಡೆದು ತಮ್ಮ ಜಾತಿಯನ್ನು ಬೆಳಿಸುತ್ತವೆ. ನಿಜವಾಗಿ ಹೇಳಬೇಕಾದರೆ ಇದೊಂದೇ ಸಂಗತಿಯಿಂದ (The fact of budding) ವಿಕಾಸವಾದವು ಸಿದ್ಧವಾಗುವಂತಿದೆ. "ಪ್ರಾಣಿಗಳನ್ನು ಹುಟ್ಟಿಸುವ ಕ್ರಿಯೆಯು ಎಲ್ಲ ಸಸ್ತನ ಪ್ರಾಣಿಗಳಲ್ಲಿಯೂ ಒಂದೇ ತೆರನಾಗಿರುವುದು. ಗಂಡು ಪ್ರಾಣಿಯು ಹೆಣ್ಣಿನ ಮನವೊಲಿಸಿಕೊಳ್ಳುವ ಮೊದಲನೇ ಪ್ರಯತ್ನದಿಂದ, ಕೂಸಿನ ಜನನ ಮತ್ತೂ ಬೆಳೆವಣಿಗೆಯಾಗುವವರೆಗಿನ ಎಲ್ಲ ಕ್ರಿಯೆಗಳೂ ಸಮಾನವಾಗಿಯೇ ಇರುವವು, ಎಂದು ಡಾರ್ವಿನ್ನನು ಹೇಳುತ್ತಾನೆ. ಮಾನವಜಾತಿಯಲ್ಲಿ ಹೆಂಗಸಿಗಿಂತ ಗಂಡಸು, ಆಕಾರ, ಎತ್ತರ, ದೈಹಿಕಶಕ್ತಿ, ಹೆಚ್ಚಾದ ಕೂದಲು ಮೊದಲಾದ ಕೆಲವು ಸಂಗತಿಗಳಲ್ಲಿ ಭಿನ್ನನಾಗಿದ್ದಾನೆ. ಗಂಡು

ಹೆಣ್ಣುಗಳ ನಡುವಿರುವ ಇಂತಹ ಭೇದವು ಉಳಿದ ಎಷ್ಟೋ ಸಸ್ತನಪ್ರಾಣಿಗಳಲ್ಲಿಯೂ ಇರುವುದೆಂಬುದು ಲಕ್ಷದಲ್ಲಿಡಬೇಕಾದ ಮಾತು. ೮) ನಿರುಪಯುಕ್ತವಾದ ಅವಯವಗಳು:-ಕೆಲವು ಅವಯವಗಳು ಒಂದು ಕಾಲದಲ್ಲಿ ನಮಗೆ ಅತ್ಯುಪಯುಕ್ತವಾಗಿ ನಮ್ಮ ದೇಹರಚನೆಯಲ್ಲಿ ಯೋಗ್ಯವಾದ ಸ್ಥಾನವನ್ನು ಪಡೆದಿದ್ದವು. ಆದರೆ ಆ ಪರಿಸ್ಥಿತಿಯು ಬರಬರುತ್ತ ಬದಲಾಗಿ, ಸದ್ಯಕ್ಕೆ ಅವು ತೀರ ನಿರುಪಯುಕ್ತವಾಗಿವೆ. ಅವುಗಳ ಗುರುತು ಮಾತ್ರ ಇನ್ನೂವರೆಗೆ ನಮ್ಮ ದೇಹವಲ್ಲಿ ಉಳಕೊಂಡಿವೆಯೆಂದು ಹೇಳಬಹುದು. ಉಳಿದ ಪ್ರಾಣಿಗಳಲ್ಲಾದರೂ ಇಂತಹ ನಿರುಪಯುಕ್ತ ಅವಯವಗಳಿರುವವು. ಉದಾ:- ಒಳಗಿನ ಮಗ್ಗಲು ತುದಿಯಲ್ಲಿ ತುಸು ಹೊರಳಿದ ಕಿವಿಗಳು ಮನುಷ್ಯನಿಗಷ್ಟೇ ಇರುವವೆಂದಲ್ಲ. "ಬಬೂನ" (Baboon) ಎಂಬ ಜಾತಿಯ ಮಂಗಗಳಿಗೂ ಇಂಥ ಕಿವಿಗಳೇ ಇರುವವು. ಅದರಂತೆಯೇ ಮೂರನೆಯ ಕಣ್ಣೆವೆಯು ಕೆಲವು ಉರಗಮನ ಹಾಗೂ ದ್ವಿಚರಗಳಲ್ಲಾದರೂ ಕಂಡುಬರುವುದು. ಇದು ಸ್ತನಮೃಗಗಳ ಕೆಳಗಿನ ಎರಡು ಗುಂಪು (ಮೋನೋಟ್ರೇಮ ಮತ್ತು ಮಾರ್ಸುಪಿಯಲ್)ಗಳಲ್ಲಿಯೂ ಕಡಲ್ಗುದುರೆಯಂತಹ ಮೂರನೆಯ ಜಾತಿಯ ಕೆಲವು ಪ್ರಾಣಿಗಳಲ್ಲಿಯೂ ಚೆನ್ನಾಗಿಯೇ ಒಡೆದು ಕಾಣುವಂತೆ ಬೆಳೆದಿರುತ್ತದೆ. ಆದರೆ ಮನುಷ್ಯ, ಕಪಿವಂಶ, ಮತ್ತು ಉಳಿದ ಸ್ತನಮೃಗಗಳಲ್ಲಿ ಅದು ಕೇವಲ ನಿರುಪಯುಕ್ತವಾಗಿ ಹೋಗಿದೆ. ಅದರ ಗುರುತುಗಳೆಂದು ತುಸು ಮಡಿಕೆಯು ಮಾತ್ರ ಅಲ್ಲಿ ಮೂಡಿರುವುದು. ಹಾಗೆಯೇ ಘ್ರಾಣೇಂದ್ರಿಯವು ಎಷ್ಟೋ ಸ್ತನಮೃಗಗಳಿಗೆ ಬಹು ಮಹತ್ವದ ಅವಯವವಾಗಿದ್ದರೂ ನಮಗೆ ಅದರಿಂದ ಅಷ್ಟು ವಿಶೇಷ ಉಪಯೋಗವಾಗುವಂತಿಲ್ಲ. ಆದರೂ ಬಿಳೇ ಬಣ್ಣದ ಸುಧಾರಿಸಿದ ಮನುಷ್ಯರಿಗಿಂತ ಆ ಅವಯವದ ಉಪಯೋಗವು ಕಪ್ಪು ಬಣ್ಣದ ಜನರಲ್ಲಿ ಹೆಚ್ಚಾಗಿರುವುದರಿಂದ ಅವರ ಘ್ರಾಣೇಂದ್ರಿಯವು ಹೆಚ್ಚಾಗಿ ಬೆಳೆದಿರುವುದು. ಆದರೆ ಅವರಿಗೆ ಕೂಡ ಅದರ ಉಪಯುಕ್ತತೆಯು ಹೇಳಿಕೊಳ್ಳುವಷ್ಟು ಆಗುವುದಿಲ್ಲವೆಂದು ಹೆಳಬಹುದು. ಮತ್ತು ಈ ಅವಯವವನ್ನು ಮನುಷ್ಯನು ತನ್ನ ಹಿತಕ್ಕಾಗಿ ಬೆಳಿಸಿಕೊಂಡನೆಂದು ವಿಕಾಸವಾದವು ಹೇಳುವುದಿಲ್ಲ. ಅದು ಹೇಳುವುದೇನೆಂದರೆ:-ನಾಸಿಕವು ನಮ್ಮ ಯಾವನೋ ಒಬ್ಬ ಪೂರ್ವಜನಿಗೆ ಬಹಳೇ ಅವಶ್ಯವಾಗಿತ್ತು. ಆ ನಮ್ಮ ಪೂರ್ವಜನಿಂದಲೇ ನಾವದನ್ನು ಸದ್ಯಕ್ಕಿನ ಅಪೂರ್ಣ

ಸ್ಥಿತಿಯಲ್ಲಿ ಆನುವಂಶಿಕ ಧರ್ಮವೆಂದು ತೆಗೆದುಕೊಂಡಿದ್ದೇವೆ. ಆದರೆ ನಿಗ್ರೋ ಜನರೂ ಹಿಂದುಜನರೂ ಕತ್ತಲೆಯಲ್ಲಿ ಕೂಡ ವಾಸನೆಯ ಮೇಲಿಂದ ಮನುಷ್ಯರನ್ನು ಗುರುತುಹಿಡಿಯುತ್ತಾರೆಂದು ಅನುಭವಬಂದಿದೆ! ಇದೇ ಪ್ರಕಾರವಾಗಿ ಮನುಷ್ಯನು ಜನ್ಮತಃ ಬತ್ತಲೆಯಾಗಿರುವನೆಂಬ ಧರ್ಮದಿಂದ ಉಳಿದ ಎಲ್ಲ ಸ್ತನ ಮೃಗಗಳಿಂದ ಭಿನ್ನನಾಗಿದ್ದಾನೆ. ಅವನ ಶರೀರದ ಮೇಲಿರುವ ಸೂಕ್ಷ್ಮವಾದ ಕೇಶರಾಜಿಗಳು ಕೆಳಗಿನ ಪ್ರಾಣಿಗಳ ಮೈಮೇಲೆ ನಿರಪವಾದವಾಗಿ ಇರುವ ಕೂಡಲಿನ ಹೊದಿಕೆಯ ಅವಶೇಷಗಳೇ ಸರಿ. ಆದರೆ ಗರ್ಭದ ಆರನೇ ತಿಂಗಳಲ್ಲಿ ಮೆತ್ತಗಿನ ಉಣ್ಣೆಯಂತಹ ಕೇಶಗಳ ಹೊದಿಕೆಯು ಮನುಷ್ಯನ ಪಿಂಡದ ಮೇಲಾದರೂ ಇರುವುದೆಂದು ಕಂಡುಬಂದಿದೆ. ಗರ್ಭವು ಬೆಳೆಬೆಳೆದಂತೆ ಅದು ಮಾಯವಾಗುತ್ತ ಹೋಗುತ್ತದೆ. ಅದೇ ತರದಿಂದ ನಮ್ಮ ಸದ್ಯಕ್ಕಿನ ಕಣ್ಣೆವೆಗಳು ಕೂಡ ಆನುವಂಶಿಕವೆಂತಲೇ ಹೇಳಬಹುದು. ಅದೇ ಹುಟ್ಟಿದಾಗ ಕೂದ ಎಷ್ಟೋ ಜನರ ಮುಖದ ಮೇಲೂ ಉಳಿದ ಅವಯವಗಳ ಮೇಲೂ ಉದ್ದವಾದ ಕೂದಲುಗಳಿರುವವೆಂದು ನೋಡಿದವರು ಹೇಳುತ್ತಾರೆ. ಅದರಂತೆಯೇ ಕರುಳಿನೊಳಗಿನ (Alimentary canal) ಕ್ರಿಮಿರೂಪವಾದ ಅಪೆಂಡಿಕ್ಸವೆಂಬ ಭಾಗವಾದರೂ ನಿರುಪಯುಕ್ತವಾದ ಅವಯವವಾಗಿದೆ. ಹೊಟ್ಟೆಯಲ್ಲಿ "ಅಪ್ಪೆಂಡಿಸೈಟೀಸ" ಆಗಿರುವುದರಿಂದ "ಆಪರೇಶನ್" ಮಾಡಿಸಿಕೊಳ್ಳಬೇಕಾಗಿರುವುದೆಂದು ಎಷ್ಟೋ ಜನರು ಹೇಳುತ್ತಿರುತ್ತಾರಲ್ಲ! ಈ ಭಾಗದಲ್ಲಿಯೇ ಆದ ರೋಗವದು. ಮತ್ತು ಆಧುನಿಕಯುಗದ ಪ್ರಮುಖವಾದ ರೋಗಗಳಲ್ಲದು ಒಂದಾಗಿದೆಯೆಂದು ಹೇಳಬಹುದು. ಶಾಕಾಹಾರಿಗಳು ತಮ್ಮ ಆಹಾರವನ್ನು ಬದಲುಮಾಡಿದಾಗ ನಿರುಪಯೋಗವಾಗಿ ಉಳಿದ ಅವಯವದ ಗುರುತಿದು. ಹಿಂದೆ ಹೇಳಿದ ಓರಾಂಗಯುಟಾನವೆಂಬ ಕಪಿಯಲ್ಲಾದರೂ ಈ ಅವಯವವಿರುವುದು. ಹಾಗೆಯೇ ಪೃಷ್ಠವಂಶದ ತುದಿಗಿರುವ ಸಣ್ಣೆಲುಬು ಒಂದು ಕಾಲದಲ್ಲಿ ನಮಗೆಲ್ಲರಿಗೂ ಇದ್ದ ಬಾಲದ ಗುರುತಾಗಿರುವುದೆಂದು ಬಲ್ಲವರು ಹೇಳುತ್ತಾರೆ. ನಮಗೆ ಸದ್ಯಕ್ಕೆ ಅದರ ಉಪಯೋಗವು ಇಲ್ಲವೇ ಇಲ್ಲ. ಗರ್ಭಾವಸ್ಥೆಯಲ್ಲಿ ಪಿಂಡವು ಬಾಲ್ಯಾವಸ್ಥೆಯಲ್ಲಿರುವಾಗ ಈ ಬಾಲವು ಅದರ (ಪಿಂಡದ) ಕಾಲುಗಳಿಗಿಂತ ಕೂಡ ಉದ್ದವಾಗಿರುವುದೆಂದೂ ಆಗದು ಬೇಕಾದಂತೆ ಜೋತಾಡುತ್ತಿರುವುದೆಂದೂ ಪಿಂಡಶಾಸ್ತ್ರಜ್ಞರು ವರ್ಣಿಸುತ್ತಾರೆ. ಈ ಬಾಲವು

ಮನುಷ್ಯನ ಪ್ರಾಚೀನ ಪೂರ್ವಜರಿಗೆ ಬಹು ಉಪಯುಕ್ತವಾಗಿರಲಿಕ್ಕೆಬೇಕು. (೯) ಪಿಂಡದ ಬೆಳೆವಣಿಗೆ:— ಪ್ರತಿಯೊಂದು ವ್ಯಕ್ತಿಯ ಪಿಂಡದ ಬೆಳೆವಣಿಗೆಯೆಂದರೆ ಅದರ ಪೂರ್ವಜರ ವಿಕಾಸದ ಇತಿಹಾಸವೇ ಅಹುದೆಂದು ಶಾಸ್ತ್ರಜ್ಞರು ನಿರ್ಣಯಿಸಿದ್ದಾರೆ. ಮನುಷ್ಯಪಿಂಡದ ಗರ್ಭಾಶಯದೊಳಗಿನ ಬೆಳೆವಣಿಗೆಯಾದರೂ ಇದಕ್ಕೆ ಅಪವಾದವಾಗಿಲ್ಲ. ಸುಮಾರು ೧/೧೨೦ ಇಂಚು ವ್ಯಾಸವುಳ್ಳ ಒಂದೇ ತರದ ತತ್ತಿಯಿಂದ ಎಲ್ಲ ಪ್ರಾಣಿಗಳೂ ಹುಟ್ಟಿ, ಅದರ ದ್ವಿಗುಣೀಭಾವದಿಂದಲೇ ಬೆಳೆಯುತ್ತ ಹೋಗುತ್ತವೆಂದು ಈ ಮೊದಲೇ ಹೇಳಿರುವೆವು. ಮನುಷ್ಯಪಿಂಡದ ಗರ್ಭಾವಸ್ಥೆಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರೆ, ಆ ಆ ಅವಸ್ಥೆಗಳೆಲ್ಲ ಕೆಳಗಿನ ಪ್ರಾಣಿಗಳ ಪೂರ್ಣಾವಸ್ಥೆಯನ್ನು ತೋರಿಸುತ್ತವೆಂದು ಕಂಡುಬರುತ್ತದೆ. ಎಂದರೆ ಮಾನವೋತ್ಪತ್ತಿಯು ಈ ಜಗತ್ತಿನಲ್ಲಿ ಆಗುವ ಮೊದಲು, ಪ್ರಾಣಿವರ್ಗಗಳ ವಿಕಾಸವು ಹೇಗಾಗುತ್ತಹೋಗುತ್ತದೆಂಬುವುದನ್ನು ಈ ಪಿಂಡಶಾಸ್ತ್ರ ( Ontogeny ) ವೊಂದರಿಂದಲೇ ಕೂಡ ನಿರ್ಣಯಿಸಬಹುದೆಂದು ಈಗಿನವರ ವಿಶ್ವಾಸವಿದೆ. (ಅ) ನಾವು ಮೇಲೆ ಹೇಳಿದಂತೆ ಒಂದೇ ಜೀವಕೋಶದಿಂದ ಸಾಕಷ್ಟು ಜೀವಕೋಶಗಳು ಹುಟ್ಟಿದವೆಂದರೆ, ಒಳಗಿನ ಜೀವಾಣುಗಳು ನೀರಾಗುತ್ತವೆ; ಮತ್ತು ಹೊರಭಾಗದ ಅಣುಗಳು ತುಸು ಗಟ್ಟಿಯಾಗಿ ಒಂದು ಪರದೆಯ ರೂಪವನ್ನು ಹೊಂದುತ್ತವೆ. ಎಂದರೆ ಪಿಂಡವು ಆ ಕಾಲದಲ್ಲಿ ಒಂದು ನೀರು ತುಂಬಿದ ಚೀಲವಾಗುವುದೆಂದು ಹೇಳಬಹುದು. (ಬ) ಮನುಷ್ಯನ ಬೆನ್ನು ಪ್ರಾರಂಭದಲ್ಲಿ ರೇಷಾರೂಪವಾಗಿ ಕಾಣಿಸಿಕೊಂಡು, ಆ ರಚನೆಯಿಂದಲೇ ಮುಂದೆ ಅದು ಬೆಳೆದು ದೊಡ್ಡದಾಗುವುದು. ಈ ರೇಷಾರೂಪ ರಚನೆಯು ಮೀನಗಳ ಬೆನ್ನೆಲುಬಿಗೆ ಸರಿಯಾಗಿ ಹೊಂದುವುದು. (ಕ) ರಕ್ತಾಭಿಸರಣದ ಬೆಳೆವಣಿಗೆಯಾದರೂ ಇದೇ ಮಾತನ್ನೇ ತೋರಿಸುತ್ತದೆ. ಮನುಷ್ಯನ ಬೆಳೆವಣಿಗೆಯಲ್ಲಿ ಮೊದಲಿನ ಮೀನಗಳಲ್ಲಿಯಂತೆ ೧೨ ಆದಿನಾಡಿಗಳ ಮುಖ್ಯ ಕಮಾನುಗಳಿರುವವು. ಮುಂದೆ ಬವಲಾಗುತ್ತಹೋದಂತೆ ಅವೆಲ್ಲ ಮಾಯವಾಗಿ ಎಡಗಡೆಗೆ ಒಂದು ಮಾತ್ರ ಉಳಿಯುತ್ತದೆ. ಇದು ಮೀನಗಳಿಂದ ವಿಕಾಸವಾದ ದ್ವಿಚರಗಳಲ್ಲಿ ಕಂಡುಬರುವುದೆಂದು ಬೇರೆ ಹೇಳಬೇಕಾಗಿಲ್ಲ. ಆಗ ಅದರಲ್ಲಿ ಈಗಿನಂತೆ ಭಿನ್ನವಾದ ಭಾಗಗಳಿರುವುದಿಲ್ಲ. ಮುಂದೆ ಶುದ್ಧ ರಕ್ತವಾಹಿನಿಯು ಆದಿನಾಡಿಯು ಕಾಣಲಾರಂಭಿಸುವುದು. ಬೆನ್ನೆಲುಬಿನಗುಂಟ ಇಳಿದು ಕೆಳಕ್ಕೆ ಹೋಗುವ

ಮೊದಲು ಇದು ಎಡಗಡೆಗೆ ತುಸು ಡೊಂಕಾಗಿ ಹೊರಳುತ್ತದೆ. ಇಂತಹ ಹೃದಯುರಚನೆಯೇ ಸ್ತನಮೃಗಗಳಲ್ಲಾದರೂ ಇರುವುದೆಂಬುದು ಪ್ರತ್ಯಕ್ಷವಾಗಿ ಸಿದ್ಧವಾದ ಮಾತು. ಪಕ್ಷಿಗಳಲ್ಲಿ ಈ ಬಾಗು (Curve) ಬಲಗಡೆಗೆ ಇರುತ್ತದೆ; ಎಡಗಡೆಗೆ ಅಲ್ಲ. ಆದುದರಿಂದ ಹೃದಯಾಕಾರವು ಮೊದಲು ಹನ್ನೆರಡು ಕಮಾನುಗಳಿಂದ ಹೊರಟು ಕಡೆಗೆ ಒಂದೇ ಆಗಿ ಉಳಿಯುವುದೆಂಬುದರ ಅರ್ಥ ವೇನೆಂಬುವುದನ್ನು ವಾಚಕರೇ ತರ್ಕಿಸಲಿ ! (ಈ) ಮುಂದೆ ಕೆಲ ದಿನಗಳು ಹೋದಮೇಲೆ, ಅವಯುವಗಳು ಒಡೆಯುಹತ್ತುವವು. " ಆಗ ಹಲ್ಲಿ ಮತ್ತು ಸ್ತನ ಮೃಗಗಳ ಕಾಲುಗಳು, ಪಕ್ಷಿಗಳ ರೆಕ್ಕೆ ಮತ್ತು ಕಾಲುಗಳು, ಮನುಷ್ಯನ ಕೈಕಾಲುಗಳು ಇವೆಲ್ಲ ಒಂದೇರೂಪದಿಂದ ಬೆಳೆಯುವವೆಂಬುವುದರಲ್ಲಿ ಸಂದೇಹವೇ ಇಲ್ಲವೆಂ"ದು ಬೇಯುರ (Baer) ಸಾಹೇಬರು ಹೇಳುತ್ತಾರೆ. ಕಿಂಬಹುನಾ, ಮನುಷ್ಯನ ಕೈಕಾಲುಗಳು ಮೊತ್ತಮೊದಲು ಉಳಿದ ಬೆನ್ನೆಲುಬಿನ ಪ್ರಾಣಿಗಳಂತೆಯೇ ಇರುವವು. ಮುಂದೆ ಕೆಲಕಾಲದ ವರೆಗೆ ಮೀನಗಳ ರೆಕ್ಕೆಗಳು (Fins) ಹೇಗೆ ಬೆಳೆಯುವವೋ ಹಾಗೆಯೇ ಮನುಷ್ಯನ ಕೈಕಾಲುಗಳು ಬೆಳೆಯುತ್ತಹೋಗುವವೆಂದು ಆ ಶಾಸ್ತ್ರದ ಅಭ್ಯಾಸವನ್ನು ಮಾಡಿದವರು ಹೇಳುತ್ತಾರೆ. (ಫ) ಮೊತ್ತಮೊದಲು ಮಲಮೂತ್ರಗಳ ದ್ವಾರವು ಒಂದೇ ಇದ್ದು ಅದಕ್ಕೆ ಒಂದೇ ತೂತು ಇರುತ್ತದೆ. ಈ ರಚನೆಯೇ ಪಕ್ಷಿ, ಉರಗಮನ, ದ್ವಿಚರ, ಮೀನ, ಮಳೆಹುಳ ಮೊದಲಾದ ಸಾವಿರಾರು ಪ್ರಾಣಿಗಳಿಗೆಲ್ಲ ಸಾಧಾರಣವಾಗಿದೆ. ಆದರೆ ಮುಂದೆ ಮಾತ್ರ ಇದು ಮನುಷ್ಯನಲ್ಲಿ ಕಾಣದಂತಾಗುತ್ತ ಹೋಗುತ್ತದೆ. (ಗ) ಪೃಷ್ಠವಂಶದ ಕೆಳಭಾಗಕ್ಕಿರುವ ಎಲುಬು ಬಾಲದಂತೆಯೇ ಇಳಿಬಿದ್ದಿರುತ್ತದೆ; ಇಷ್ಟೇ ಅಲ್ಲ, ಕೆಲವು ಕಾಲದ ವರೆಗೆ ಅದು ಆಗಿನ ಕೈಕಾಲುಗಳಿಗಿಂತ ಬಹಳೇ ಉದ್ದವಾಗಿರುತ್ತದೆ. ಇದರಿಂದ ಮನುಷ್ಯರಿಗೆ ಬಾಲಗಳಿದ್ದುವೆಂದು ಸಹಜವಾಗಿಯೇ ಸಿದ್ಧವಾಗುವುದಿಲ್ಲವೇ ? ( Easy outline of Evolution. p. p. 22-30 ).

---

*

# ೮

# ನಮ್ಮ ಅರ್ವಾಚೀನ ಪೂರ್ವಜರು

## ಅಥವಾ

## ಮನುಷ್ಯನು ಮಂಗನ ಮರಿಯೇ ?

"ಪ್ರೈಮೇಟ" ಎಂದರೆ ಉತ್ಕೃಷ್ಟ ಅಥವಾ ಶ್ರೇಷ್ಠವಾದ ಪ್ರಾಣಿಗಳೆಂಬುವು ದನ್ನು ಮೇಲೆ ಹೇಳಿದ್ದೇವೆ. ಮನುಷ್ಯನಾದರೂ ಇದೇ ವರ್ಗದಲ್ಲಿ ಬರುವನು. ಈ ಭೂತಲದ ಮೇಲೆ ಇಂದಿನವರೆಗೆ ಹುಟ್ಟಿ ಬೆಳೆದ ಪ್ರಾಣಿಗಳಲ್ಲಿ ಈ "ಶ್ರೇಷ್ಠ" ಪ್ರಾಣಿಗಳೇ ಕಡೆಯವು. ಎಂದರೆ ತೀರ ಚಿಕ್ಕವು. ಇವು ಹಿಂದಿನ ಪ್ರಾಣಿಗಳನ್ನೆಲ್ಲ ಹಿಮ್ಮೆಟ್ಟಿಸಿ, ಹೋದ ಪ್ರಕರಣದಲ್ಲಿ ವರ್ಣಿಸಿದ ಅವುಗಳ ಕೆಲವು ವಿಶಿಷ್ಟವಾದ ಶರೀರರಚನೆಗಳಿಂದಲೂ, ಅವೆಲ್ಲಕ್ಕೂ ಹೆಚ್ಚಿನದಾದ ಬುದ್ಧಿಶಕ್ತಿಯಿಂದಲೂ ಈ ಜಗತ್ತಿನ ಸಾರ್ವಭೌಮತ್ವವನ್ನು ಪಡೆದಿವೆಯೆಂದು ಹೇಳಬಹುದು. ಸೃಷ್ಟಿಜ್ಞಾನವೆಂದರೆ ಸೃಷ್ಟಿಯೊಡೆತನವೆಂದು ಪಂಡಿತವರ್ಯನಾದ ಬೇಕನ್ನನು ಹೇಳುತ್ತಿದ್ದನು. ಎಂದರೆ ಮನುಷ್ಯನು ತನ್ನ ಪ್ರಬಲವಾದ ಬುದ್ಧಿಶಕ್ತಿಯಿಂದ ನಾನಾತರದ ಹಂಚಿಕೆಗಳನ್ನು ಹುಡುಕಿತೆಗೆದು ತನ್ನ ಜೀವನಯಾತ್ರೆಯನ್ನು ಸುಸೂತ್ರವಾಗಿ ಸಾಗಿಸಿಕೊಳ್ಳುತ್ತಾನೆ. ಜೀವನಕಲಹದಲ್ಲಿ ಇವನನ್ನು ಹಿಂದೊಗೆಯುವ ಯಾವ ಪ್ರಾಣಿಗಳೂ ಇನ್ನೂವರೆಗೆ ಹುಟ್ಟಿಲ್ಲ. ತದ್ವಿಪರೀತವಾಗಿ ಅವೆಲ್ಲ ಅವನಿಗಧೀನವಾಗದಿದ್ದರೂ, ಸಾವಿರಾರು ಪ್ರಾಣಿಗಳು ಅವನಿಗೆ ಅಂಜುವವೆಂಬುವುದರಲ್ಲಿ ಸಂದೇಹವಿಲ್ಲ. ಎಷ್ಟೋ ಪ್ರಾಣಿಗಳನ್ನು ಅವನು ತಂದು, ಸಾಕಿ, ಬುದ್ಧಿಗಲಿಸಿ, ಈಲುಮಾಡಿಕೊಂಡು, ತನ್ನ ಅಂಕಿತದಲ್ಲಿಟ್ಟುಕೊಳ್ಳುತ್ತ, ಅವುಗಳಿಂದ ಸಾವಿರಾರು ಕೆಲಸಗಳನ್ನು ಮಾಡಿಸಿಕೊಳ್ಳುತ್ತಾನೆಂಬುವುದು ನಮ್ಮಲ್ಲಿ ಎಲ್ಲರಿಗೂ ಗೊತ್ತುಂಟು. ನಾಯಿ, ಕುರಿ, ಆಕಳು, ಎಮ್ಮೆ, ಕುದುರೆ, ಆನೆ, ಒಂಟೆ ಮೊದಲಾದ ಸಾವಿರಾರು ಪ್ರಾಣಿಗಳು ಹಳ್ಳಿಗಳಲ್ಲಿ ಕೂಡ ನೋಡಲಿಕ್ಕೆ ಸಿಕ್ಕುವಂತಿವೆ. ಸರ್ಪ, ಸಿಂಹ, ವ್ಯಾಘ್ರ, ಕರಡಿ ಮೊದಲಾದ ಪ್ರಾಣಿಗಳು ಅವನನ್ನು ನಂಬಿಕೊಂಡಿರದಿದ್ದರೂ ಅವನ ಬಲೆಯಲ್ಲಿ ಸಿಕ್ಕುಬಿದ್ದು ಅವನು ಹೇಳುವ ಕೆಲಸವನ್ನು ಮಾಡುವ

ಮನುಷ್ಯನಿಗೆ ಭೌತಿಕ ಸೃಷ್ಟಿಯೆಲ್ಲ ಅಧೀನವಾಗಿದೆ.

ವೆಂಬುವುದನ್ನು ಸರ್ಕಸ ಮೊದಲಾದವುಗಳಲ್ಲಿ ನೋಡುವೆವು. ಇದು ಭೂವಾಸ ಮಾಡುವ ಪ್ರಾಣಿಗಳ ಮೇಲಿನ ಸಾರ್ವಭೌಮತ್ವವಾಯಿತು. ಇನ್ನು ಜಲಜಂತು ಗಳನ್ನು ನೋಡಿದರೆ, ಅಲ್ಲಿಯೂ ಕೂಡ ಮನುಷ್ಯನು ತನ್ನ ಬುದ್ಧಿಬಲದಿಂದ ಮೀನ ಮೊದಲಾದವುಗಳನ್ನು ಬಲು ಸುಲಭವಾಗಿಯೇ ಹಿಡಿದು ತನ್ನ ಹೊಟ್ಟೆ ಯನ್ನು ಹೊರಕೊಂಡರೆ, "ವ್ಹೇಲ್ಸ" ( Whales ) ಮೊದಲಾದ ಸಮುದ್ರ ಪಶುಗಳನ್ನು ತನ್ನ ಉತ್ಕೃಷ್ಟವಾದ ಶಸ್ತ್ರಾಸ್ತ್ರಗಳಿಂದ ಕೊಂದುಹಾಕಿಬಿಡುವನು. ಕಿಂಬಹುನಾ, ಅವನಿಗೆ ನೀರಿನ ಹೆದರಿಕೆಯೇ ಇಲ್ಲವೆಂದರೆ ಅತಿಶಯೋಕ್ತಿಯಾಗ ಲಾರದು. ನೀರಿನ ಮೇಲ್ಭಾಗದಲ್ಲಷ್ಟೇ ಅವನು ಬೇಕಾದಂತೆ ಓಡಾಡುವನೆಂದಲ್ಲ; ಸಮುದ್ರದ ಗಹನವಾದ ತಳವನ್ನೂ ಕೂಡ ಶೋಧಿಸಿ, ಅಲ್ಲಿಯ ರತ್ನಭಾಂಡಾರ ವನ್ನೊಡೆದ ಬಂಟನಾಗಿರುವನೆಂದು ಹೇಳಬಹುದು. ಅಗ್ನಿಯಂತೂ ಇಂದು ಮನುಷ್ಯನ ನಂಬಿಗೆಯ ಆಳಾಗಿದೆ. ಇಂದಿನ ವರೆಗೆ ಅಜಿಂಕ್ಯವಾಗಿ ತೋರುತ್ತಿದ್ದ ವಾಯು ಸಾಮ್ರಾಜ್ಯವೂ ಅವನ ಒಡೆತನಕ್ಕೆ ತಲೆಬಾಗಿಸುವ ಹವಣಿಕೆಯಲ್ಲಿದೆ. ಹೀಗೆ ಸೃಷ್ಟಿಯೊಳಗಿನ ಶಕ್ತಿಗಳೆಲ್ಲ ಅವನಿಗಧೀನವಾಗಿ ಹೋಗಿವೆಯೆನ್ನಬಹುದು. ಮನುಷ್ಯನ ಕೆಳಗಿನ ಪ್ರಾಣಿಗಳೆಲ್ಲ ನಿರಪವಾದವಾಗಿ ಸೃಷ್ಟಿಗಧೀನವಾಗಿ ಹೋಗಿ ದ್ದರೆ ಇಡೀ ಸೃಷ್ಟಿಯೇ ಮಾನವನಿಗಧೀನವಾಗಿದೆ. ಆ ಸೃಷ್ಟಿಯಿಂದಲೇ ಹುಟ್ಟಿದ ಮನುಷ್ಯನು ಆ ಸೃಷ್ಟಿಯನ್ನೆ ತಿರುಗಿ ತನ್ನ ಕಾಲಕೆಳಗೆ ಮೆಟ್ಟಿರುವನಲ್ಲ ! ಎಂತಹ ದ್ರೋಹವಿದು !! ಉಂಡಮನೆಯ ಗಳವೆಣಿಸುವ ಈ ಮನುಷ್ಯಸ್ವಭಾವಕ್ಕೆ ಮೇರೆಯೇ ಇಲ್ಲದಂತಾಯಿತಲ್ಲ !!! ನಾವು ಹಾವಿಗೆ ಹಾಲೆರೆದಂತಾಯಿತೆಂದು ಉಳಿದ ಪ್ರಾಣಿಗಳೂ ಸೃಷ್ಟಿದೇವಿಯೂ ತಿಳಿಯುತ್ತಿರಲಿಕ್ಕಿಲ್ಲವೇ? ಪ್ರಕೃತಿಯ ಶಕ್ತಿ ಗಳಿಗೂ ಮಾನವನ ಬುದ್ಧಿಗೂ ಅಖಂಡವಾಗಿ ಯುದ್ಧ ನಡೆದಿರುವುದೆಂದೂ, ಆ ಯುದ್ಧದಿಂದ ಮಾನವನು ಇನ್ನು ಹಿಂದಿರುಗುವುದು ಶಕ್ಯವಿಲ್ಲೆಂದೂ ಹಲವರು ತಿಳಿಯುತ್ತಾರೆ. ಸೃಷ್ಟಿಯ ಮೇಲಣ ತಮ್ಮ ಸಾಮ್ರಾಜ್ಯವಾದರೂ ಹೆಚ್ಚುತ್ತ ನಡೆದಿದೆಯೆಂದು ಅವರ ವಿಶ್ವಾಸವಿದೆ. ಆದರೆ ಇಷ್ಟೊತ್ತಿನವರೆಗೆ ಸೋತಿರುವೆ ನೆಂದು ತೋರಿಸುವ ವೈರಿಯು ಮತ್ತೇನು ಹಂಚಿಕೆಯನ್ನು ಯೋಚಿಸುತ್ತಿರುವನೋ ಯಾರಿಗೆ ಗೊತ್ತು! ಮತ್ತು ಸೃಷ್ಟಿದೇವಿಯ ಪ್ರತಿಕ್ರಿಯೆಗಳಾದರೂ ಎಷ್ಟು ಕ್ರೂರ ವಾಗಿರುವವೆಂಬುವುದರ ಕಲ್ಪನೆಯು ಜಾಣರಿದ್ದರೆ ನಮಗೆ ಚೆನ್ನಾಗಿಯೇ ಬರ ಬೇಕಾಗಿತ್ತು! ನನ್ನ ಒಂದೇ ಜ್ವಾಲಾಮುಖಿ—ಭೂಕಂಪಗಳ ಹೊಡೆತಕ್ಕೆ ಲಕ್ಷಾವಧಿ

ವರುಷಗಳವರೆಗೆ ಶ್ರಮಬಟ್ಟು ಕಟ್ಟಿದ ನಿನ್ನ ಸುಧಾರಣಾಸೌಧವೆಲ್ಲ ನಾಮಶೇಷವಾಗುವಂತೆ ಕುಕ್ಕರಿಸಿ ಬೀಳುವುದಲ್ಲ! ಎಂದು ಸೃಷ್ಟಿದೇವಿಯು ನಮ್ಮ ಒಣ ಹೆಮ್ಮೆಯನ್ನು ನೋಡಿ ನಗುತ್ತಿದ್ದರೆ ಆಶ್ಚರ್ಯವೇನು! ಬಾಬಿಲೋನಿಯಾ, ಇಜಿಪ್ತಗಳ ಗತಿಯನ್ನು ನೀನು ಮರೆತಿರುವೆಯಾ, ಎಂದು ಆಕೆಯು ಚೇಷ್ಟೆಮಾಡುತ್ತಿರಬಹುದು. ಇಂದಿಗೂ ಕೂಡ ನನ್ನ ಶಕ್ತಿಪ್ರತಾಪಗಳನ್ನು ಕಾಲಕಾಲಕ್ಕೆ ತೋರಿಸುತ್ತಲೇ ಬಂದಿರುವೆನಲ್ಲ ಎಂದು ತಿರಸ್ಕಾರದೃಷ್ಟಿಯಿಂದ ನಮ್ಮನ್ನು ನೋಡುತ್ತಿರಬಹುದು! ಆದರೆ ನನ್ನ ಬುದ್ಧಿಶಕ್ತಿಯೇನು ಸಾಮಾನ್ಯವೇ? ನಾನಿನ್ನು ಯುದ್ಧರಂಗವನ್ನು ಬಿಟ್ಟು ಓಡಿ ಹೋಗಲ್ಯಾ? ಛೀ, ಛೇ, ಅದು ಶಕ್ಯವಿಲ್ಲ; ಏನಾಗುವುದು ಆಗಿಹೋಗಲಿ; ಜಯಾಪಜಯಗಳು ಯಾರ ಪಾಲಿನವೆಂಬುವುದನ್ನು ನೋಡಿಯೇ ಬಿಡುವೆನು; ಎಂದು ಮಾನವನು ತನ್ನ ಮನಸಿಗೆ ಧೈರ್ಯವನ್ನು ತಂದುಕೊಳ್ಳುತ್ತಿರುವನು.

ಆದರೆ ಇಷ್ಟೆಲ್ಲ ಅಹಂಕಾರವು ಅವನಿಗೆ ಯಾತರಿಂದ ಬಂತು? ದೈಹಿಕಶಕ್ತಿಯಲ್ಲಿ ಅವನನ್ನು ಮೀರುವ ಸಾವಿರಾರು ಪ್ರಾಣಿಗಳು ಅವನಿಗಿಂತು ದಾಸಾನುದಾಸರಾಗಿ ಸೇವೆಮಾಡುವುದರ ಗೂಢವೇನು? ಅವನ ಶಾರೀರಿಕ ಶಕ್ತಿಯು ಆನೆ,ಸಿಂಹ, ವ್ಯಾಘ್ರಾದಿಗಳ ಮುಂದೆ ಪಚ್ಚೆಹಿಡಿದು ಹೋಗುತ್ತದೆ. ಆದರೆ ಅವೆಲ್ಲ ಅಂಜಿ ಕಾಡಿಗೆ ಓಡಿ ಹೋಗುವುದರ ಕಾರಣವೇನು? ಇದೆಲ್ಲ ಅವನ ತಲೆಕರಡಿಗೆಯಲ್ಲಿರುವ ಚಿಕ್ಕದಾದ ಆ ಮಿದುಳಿನ ಅದ್ಭುತತಂತ್ರವಲ್ಲದೆ ಮತ್ತೇನು? ತನಗೆ ಸಹಸಾ ಆಗಲಾರದ ಕೆಲಸಗಳನ್ನು ಬಲು ಸುಲಭವಾಗಿಯೇ ಮಾಡಿ ತೋರಿಸುವುದು ಅವನ ವಿಚಾರಬಲದ ಪ್ರಾಬಲ್ಯದಿಂದಲೇ ಅಲ್ಲವೇ? ಇಲ್ಲದ ಸಲ್ಲದ ತಂತ್ರಗಳನ್ನು ಹುಡುಕಿ, ಯೋಚನೆಗಳನ್ನು ಮಾಡಿ, ಹಂಚಿಕೆಗಳನ್ನು ಹಾಕಿ, ಮನುಷ್ಯನು ತನ್ನ ಕಾರ್ಯಗಳನ್ನು ಸಾಧಿಸಿಕೊಳ್ಳುತ್ತಾನೆ. ಒಂದಿಲ್ಲೊಂದು ರೀತಿಯಿಂದ ಉಳಿದ ಪ್ರಾಣಿಗಳೆಲ್ಲ ತನಗೆ ಬಾಗಿ ನಡೆಯುವಂತೆ ಮಾಡುತ್ತಾನೆ. ಈ ಬುದ್ಧಿಶಕ್ತಿಯಿಂದಲೇ ಭೌತಿಕಶಾಸ್ತ್ರ, ಲಲಿತಕಲೆ, ಭಾಷೆ, ಧರ್ಮ, ನೀತಿ ಮೊದಲಾದವುಗಳನ್ನು ಕಲ್ಪಿಸಿಕೊಂಡು ಸುಧಾರಣಾಶಿಖರವನ್ನು ಮುಟ್ಟಿರುತ್ತಾನೆ. ಇದರ ಬಲದಿಂದಲೇ ಮನುಷ್ಯನು ಉಳಿದ ಪ್ರಾಣಿಗಳಿಗಿಂತ ತಾನು ತೀರ ಭಿನ್ನನಾಗಿರುವೆನೆಂದು ಇಷ್ಟು ದಿನಗಳವರೆಗೆ ತಿಳುಕೊಂಡು, ಹೆಮ್ಮೆಪಟ್ಟದು. ಎಂತೆಯೇ ತಾನು ದೇವರ ಪ್ರತಿಬಿಂಬ, ಅಲ್ಲ, ಅಲ್ಲ, ತಾನೇ ಸಾಕ್ಷಾತ್ ದೇವರೆಂದು

ಈ ಒಡೆತನಕ್ಕೆ ಅವನ ಬುದ್ಧಿಯೇ ಕಾರಣವು

ಅವನು ಹೇಳಿಕೊಳ್ಳುತ್ತಿದ್ದನು. ತನ್ನನ್ನು ದೇವರು ಪ್ರತ್ಯೇಕವಾಗಿ ಹುಟ್ಟಿಸಿರುವನೆಂದೂ, ಶಾಶ್ವತವಾದ ಸುಖಕ್ಕೆ ತಾನು ಭಾಗಿಯೆಂದೂ, ತನ್ನ ಸಲುವಾಗಿಯೇ ಈ ಸೃಷ್ಟಿಯನ್ನೆಲ್ಲ ದೇವರು ಹುಟ್ಟಿಸಿರುವನೆಂದೂ ಅವನು ಭಾವಿಸಿದ್ದನು. ಅವನು ಹೀಗೆಲ್ಲ ಜಂಭಬಡೆಯುತ್ತಿದ್ದುದು ಅವನ ಆ ಬುದ್ಧಿಯ ಮಹಿಮೆಯಿಂದಲೇ ಅಲ್ಲವ ? ಎಂದಮೇಲೆ ಇಂತಹ ವಿಚಿತ್ರವಾದ ಮಾನವಪ್ರಾಣಿಯು "ಮಂಗನ ಮರಿ" ಯಾಗಿರುವುದು ಶಕ್ಯವಿದೆಯೇ ? ಎಂದು ಸ್ವಾಭಾವಿಕವಾಗಿಯೇ ನಮಗೆ ಶಂಕೆಯು ಬರದಿರಲಾರದು.

"ಶ್ರೇಷ್ಠ" ಪ್ರಾಣಿಗಳಲ್ಲಿ ಮೂರು ಉಪಭಾಗಗಳಿರುವವೆಂದು ಹೋದ ಪ್ರಕರಣದಲ್ಲಿಯೇ ಉಲ್ಲೇಖಿಸಿದೆ. ಅವುಗಳಲ್ಲಿ "ಲೆಮುರ" ( Lemur ) ಎಂದರೆ ಅರ್ಧಕಪಿಗಳೇ ಮೊದಲಿನ ವರ್ಗದವೂ ಹೆಚ್ಚು ಪ್ರಾಚೀನವಾದವೂ ಇರುವವೆಂದು ಹೇಳಬಹುದು. ಈ ಅರ್ಧಕಪಿಗಳ ಗರ್ಭಾಶಯವು ಎಲ್ಲ ಸಸ್ತನಮೃಗಗಳಲ್ಲಿರುವಂತೆ ದ್ವಿದಲವೆಂದರೆ ಎರಡು ಟಿಸಲುಗಳುಳ್ಳದ್ದಾಗಿದೆ. ಪೂರ್ಣಕಪಿ ಮತ್ತು ಮಾನವರಲ್ಲಿ ಅದರ ಎಡಬಲ ಭಾಗಗಳು ಕೂಡಿಕೊಂಡಿದ್ದು "ಪೇಯರ" ( Pear ) ಹಣ್ಣಿನ ಆಕಾರದ ಒಂದೇ ಗರ್ಭಕೋಶವಿರುವುದು. ಅದರಂತೆಯೇ ಕಣತಲೆಯ ( Temporal Bones) ತೆಗ್ಗುಗಳಿಗೂ ಕಂಣುಗುಂಡೆಗಳಿಗೂ ನಡುವೆ ಎಲುಬಿನದೊಂದು ಗೋಡೆಯು ಕಪಿಮಾನವರ ತಲೆಬುರುಡೆಯಲ್ಲಿ ಕಂಡುಬರುತ್ತಿದ್ದು, ಅದು ಅರ್ಧಕಪಿಗಳ ದೇಹದಲ್ಲಿ ಇಲ್ಲವೇ ಇಲ್ಲವೆಂದೂ, ಇದ್ದರೂ ಕೂಡ ತುಸು ಅಲ್ಪಪ್ರಮಾಣದಲ್ಲಿ ಮಾತ್ರ ಬೆಳೆದಿರುವುದೆಂದೂ ಹೇಳಬಹುದು. ಅರ್ಧಕಪಿಯು ಮಿದುಳಾದರೂ ಹೆಚ್ಚು ಸಪಾಟಾಗಿಯೂ ( ಹೆಚ್ಚೆಚ್ಚು ಮಡಿಕೆಗಳುಳ್ಳ ಮಿದುಳು ಹೆಚ್ಚು ಶ್ರೇಷ್ಠವಾದುದೆಂಬುದನ್ನು ಲಕ್ಷ್ಯದಲ್ಲಿಡತಕ್ಕದ್ದು. ಮನುಷ್ಯನ ಮಿದುಳಿನಲ್ಲಿ ಇಂತಹ ಲಕ್ಷಾವಧಿ ಮಡಿಕೆಗಳೂ ಗೆರೆಗಳೂ ಇರುವವೆಂದು ಬೇರೆ ಹೇಳಬೇಕಾಗಿಲ್ಲ. ) ಗೆರೆಗಳಿಲ್ಲದ್ದಾಗಿಯೂ ( ಎಂದರೆ ಎರಡು ಮಡಿಕೆಗಳು ಕೂಡುವ ಸ್ಥಾನದಲ್ಲಿ ಒಂದು ತಗ್ಗು ಅಥವಾ ಗೆರೆಯು ಬೀಳುವುದು.) ಇರುವುದು; ಅದರ ಆಕಾರವಾದರೂ ಬಲು ಸಣ್ಣದು. ಆದರೆ ಕಪಿ ಮತ್ತು ಮನುಷ್ಯರ ದೇಹದಲ್ಲಿ ಇವೆಲ್ಲ ಚೆನ್ನಾಗಿಯೇ ಬೆಳೆದಿರುವವು. ಇಂತಹ ಕೆಲವು ಮಹತ್ತ್ವವಾದ ಲಕ್ಷಣಗಳಿಂದ ಮನುಷ್ಯನು ಮಂಗನಾಗಿರುವನೆಂದು ಹೇಳಬಹುದು. ( ವಿಶ್ವಕೂಟ ಪು. ೩೮. )

ಮನುಷ್ಯನು ಕಪಿಯಾಗಿರುವನು

ಉಳಿದ ಪ್ರೈಮೇಟಗಳಲ್ಲಿಲ್ಲದ ವೈಶಿಷ್ಟ್ಯವೊಂದು ಕಪಿಗಳಿಗಿರುವುದು. ಅದರ ಕಾಲಿನ ಹೆಬ್ಬೊಟ್ಟು ಉಳಿದ ಎಲ್ಲ ಕಾಲುಬೆರಳುಗಳಿಗಿಂತ ಬಹಳ ಕಿರಿದಾಗಿದ್ದು ಅವಕ್ಕೆ ವಿರುದ್ಧವಾಗುವಂತೆ ಅದರ ರಚನೆಯಿರುತ್ತದೆ. (ನಮ್ಮ ಪಾದದ ಹೆಬ್ಬೆರಳು ಹೀಗೆ ಉಳಿದ ಬೆರಳುಗಳಿಗೆ ವಿರುದ್ಧವಾಗುವುದು ಶಕ್ಯವಿಲ್ಲ. ಆದರೆ ನಮ್ಮ ಅಂಗೈ ಹೆಬ್ಬೆರಳು ಮಾತ್ರ ಉಳಿದ ಬಟ್ಟುಗಳಿಗೆ ವಿರುದ್ಧವಾಗಿ ಬೇಕಾದ ವಸ್ತುಗಳನ್ನು ಕೈಯಿಂದ ಹಿಡಿಯುಲಿಕ್ಕೆ ಅನುಕೂಲವಾಗುವಂತೆ ಇರುತ್ತದೆ. ಇದರಂತೆಯೇ ಮಂಗನಲ್ಲಿ ಪಾದದ ಹೆಬ್ಬೆರಳು ಕೂಡ ಮಾಡಬಹುದೆಂದು ಇದರ ಅರ್ಥವು.) ಮೇಲಿನ ಸೂಲದ ಹಲ್ಲು ಮತ್ತು ಛೇದಕ ಹಲ್ಲುಗಳ (Incisors) ಎಲ್ಲಕ್ಕೂ ಮುಂದಿರುವ ಮೇಲಿನ ನಾಲ್ಕು ಮತ್ತು ಕೆಳಗಿನ ನಾಲ್ಕು ಹಲ್ಲುಗಳು ಕೂಡಿ ಛೇದಕದಂತಗಳೆಂದು ಕರೆಯಲ್ಪಡುತ್ತವೆ.) ನಡುವೆ ತುಸು ಅವಕಾಶವಿರುತ್ತದೆ. ಅದರಂತೆಯೇ ಕೆಳಗಿನ ಸೂಲದ ಹಲ್ಲು ಮತ್ತು ಸಣ್ಣ ಅಥವಾ ಸುಳ್ಳು ದವಡೇಹಲ್ಲುಗಳ ನಡುವಾದರೂ ತುಸು ಅವಕಾಶವಿರುತ್ತದೆ. ಮನುಷ್ಯರಂತೆ ಎದೆಯ ಮೇಲೆ ಎರಡೇ ಮೊಲೆಗಳಿರುವವು. ಗಲ್ಲಗಳ ಮೇಲೆ ಮಡಿಕೆ ಅಥವಾ ಚೀಲಗಳಿರುವವು. ಇವಕ್ಕೆ ಇಂಗ್ಲೀಷದಲ್ಲಿ "ಚೀಕ ಪೌಚಿಸ್" (Cheek-pouches) ಎಂದು ಕರೆಯುತ್ತಾರೆ. ಅದರಂತೆಯೇ "ನೇಟಲ್ ಕೆಲೋಸಿಟೀಜ" (Natal Callosities) ಎಂಬ ಅವಯವಗಳೂ ಮಂಗಗಳಿಗಿರುವವು.

ಪ್ರೈಮೇಟಗಳೂ ಮಂಗಗಳೂ

ಕಪಿಗಳಲ್ಲಿ ಎರಡು ಮುಖ್ಯವಾದ ಭಾಗಗಳಿರುವವು. ಅಮೇರಿಕೆಯ ಕಪಿಗಳ ಮೂಗು ಚಪ್ಪಟೆಯಾಗಿದ್ದು ಹೊರಳೆಗಳು ಅಧೋಮುಖವಾಗಿರದೆ (ನಮ್ಮ ಮೂಗಿನ ಹೊರಳೆಗಳು ಅಧೋಮುಖವಾಗಿರುವವು.) ಒಂದು ಎಡಕ್ಕೂ ಒಂದು ಬಲಕ್ಕೂ ಹೊರಳಿರುವವು. ಅವುಗಳ ಹಲ್ಲಿನ ಸಂಖ್ಯೆಯಾದರೂ ನಮ್ಮಂತೆ ೩೨ ಆಗಿರದೆ ೩೬ ಆಗಿರುವುದು. ಇತ್ತಕಡೆಗಿರುವ ಮಂಗಗಳ (ಏಸಿಯಾ, ಆಫ್ರಿಕಾ ಮತ್ತು ಯುರೋಪುಖಂಡಗಳಲ್ಲಿಯ ಮಂಗಗಳು ಎಂದರ್ಥ) ಮೂಗು ಇಕ್ಕಟ್ಟಿನದಾಗಿದ್ದು ನಮ್ಮಂತೆಯೇ ಅದೂ ಅಧೋಮುಖವಾಗಿರುವುದು. ಹೊರಳೆಗಳ ನಡುವೆ ಎಳೆ ಎಲುಬಿನದೊಂದು ಗೋಡೆಯಿರುವುದು. (ಇಂತಹ ಗೋಡೆಯು

ಮಂಗಗಳ ಎರಡು ಜಾತಿಗಳು

ನಮ್ಮ ಮೂಗುಗಳಲ್ಲಾದರೂ ಇರುವುದೆಂದು ಬೇರೆ ಹೇಳಬೇಕಾಗಿಲ್ಲ.) ಇವುಗಳ ಬಾಲಗಳು ಉದ್ದವಾಗಲಿ ಅಥವಾ ಗಿಡ್ಡಾಗಲಿ ಇರುವವು. ಆದರೆ ಅವು (ಬಾಲಗಳು) ಎಂದೂ "Prehensile" ಎಂದರೆ "ಹಿಡಿಯುವಂತಹವು" ಆಗಿರುವುದಿಲ್ಲ. ಗಲ್ಲದ ಮೇಲಿನ ಮಡಿಕೆ ಅಥವಾ ಚೀಲಗಳೂ, "ಸೀಟಿಲ ಕೆಲೋಸಿಟಿ" ಎಂಬ ತಗ್ಗುಗಳೂ ಬಹುಶಃ ಅವಕ್ಕಾದರೂ ಇರುವವು. ಕೈಹೆಬ್ಬಟ್ಟು ಉಳಿದ ಬೆರಳುಗಳಿಗೆ ವಿರುದ್ಧವಾಗಿದೆ. ಸಣ್ಣ ದವಡೇಹಲ್ಲು ಮತ್ತು ದವಡೇಹಲ್ಲುಗಳ ಸಂಖ್ಯೆಯೆಲ್ಲ ಒಂದೇ ಇದ್ದು ಮನುಷ್ಯನಂತೆ ಒಟ್ಟಿನಮೇಲೆ ಅವಕ್ಕೂ ೩೨ ಹಲ್ಲುಗಳಿರುವವು. ಇವು ಬಹುಶಃ ಏಶಿಯಾ ಆಫ್ರಿಕಾಖಂಡಗಳಲ್ಲಿ ವಾಸಮಾಡುತ್ತವೆ. ಬಾರ್ಬರೀ ಜಾತಿಯ ಮಂಗವೊಂದೇ ಯುರೋಪದಲ್ಲಿ ವಾಸಿಸುತ್ತದೆ. ಆಸ್ಟ್ರೇಲಿಯಾದಲ್ಲಿ ಬಹುಶಃ ಮಂಗಗಳೇ ಇಲ್ಲವೆಂದೆನ್ನಬಹುದು. ಈ ಅಧೋಮುಖನಾಸಿಕೆಯ ಕಪಿಗಳಲ್ಲಿ (Catarrhini) ಮಾನವಕಪಿಗಳೇ (Anthropoid apes) ಎಲ್ಲಕ್ಕೂ ಶ್ರೇಷ್ಠವಾದವುಗಳು. ಇವುಗಳಲ್ಲಿಯೇ ಪ್ರಸಿದ್ಧವಾದ ಗಿಬನ್, ಓರಾಂಗ, ಉಟಾನ, ಗೋರಿಲ್ಲಾ, ಮತ್ತು ಚಿಂಪಂಝೀ ಎಂಬ ನಾಲ್ಕು ತರದ ಮಂಗಗಳ ಅಂತರ್ಭಾವವಾಗುತ್ತದೆ. ಈ ಮಾನವಕಪಿಗಳಲ್ಲಿ ಕಾಲುಗಳಿಗಿಂತ ಕೈಗಳು ದೀರ್ಘವಾಗಿರುವವು. ಮನುಷ್ಯನಂತೆ ಅರ್ಧಮರ್ಧ ನೀಟಾಗಿ ಇವು ನಡೆಯಬಲ್ಲವು. ಇವಕ್ಕೂ ಮನುಷ್ಯನ ಕರುಳಿಗಿರುವಂತೆ "ಅಪ್ಪೆಂಡಿಕ್ಸ್" ಇರುವುದು. ಎದೆಯ ಎಲಬುಗಳು ಮನುಷ್ಯನಂತೆ ವಿಶಾಲವಾಗಿ ಸಪಾಟಾಗಿರುವವು. ಎಲ್ಲ ಮಂಗಗಳಲ್ಲಿಯೂ ಕೈ ಹೆಬ್ಬೆರಳು ಉಳಿದ ಬೆರಳುಗಳಿಗೆ ವಿರುದ್ಧವಾಗಿರುವುದು. ಪಾದದ ಅಂಗುಷ್ಠವಾದರೂ ಉಳಿದ ಬೆರಳುಗಳಿಗೆ ವಿರುದ್ಧವಾಗಬಲ್ಲದು. ಬೆನ್ನುಹುರಿಯು ತುಸು ಮಣಿವಿದ್ದು ತಲೆಬುರುಡೆಯು ಹಿಂದಿನ ಭಾಗಕ್ಕೆ ಜೋಡಿಸಲ್ಪಟ್ಟಿರುವುದು. ಸೂಲದ ಹಲ್ಲುಗಳು ದೊಡ್ಡವಾಗಿರುತ್ತವೆ; ಆದರಲ್ಲಿಯೂ ಗಂಡುಮಂಗಗಳಲ್ಲಿ ಇದು ವಿಶೇಷವಾಗಿರುತ್ತನೆಂದೆನ್ನಬಹುದು. ಮುಸುಡೆಯು ತುಸು ಹೆಚ್ಚುಕಡಿಮೆ ಯಾವಾಗಲೂ ಮುಂದೆ ಬಂದಿರುತ್ತದೆ. ತಲೆಬುರುಡೆಯ ಕಂಬಗಳು (Ridges) ವಿಶೇಷವಾಗಿ ಬೆಳೆದಿರುವವು. ಗಿಬನ್‌ಜಾತಿಯು ಒಂದು ಕಪಿವರ್ಗಕ್ಕೆ ಸ್ಪಷ್ಟವಾದ ಗದ್ದವಿರುತ್ತದೆಂದು ಕಂಡುಬಂದಿದೆ. ಗಿಬನ್ ಮತ್ತು ಓರಾಂಗಗಳಲ್ಲಿ ಕೈಗಳು ಬಹಳೇ ಉದ್ದವಾಗಿರುವವು; ಅವು ಎದ್ದು ನಿಂತಾಗ ಮೊಣಕಾಲು ದಾಟಿ ಕೈಗಳು ಜೀಸಾಡುತ್ತಿರುತ್ತವೆ.

ಹಿಂದಿನ ಕಾಲುಗಳು ಮಾತ್ರ ತೀರ ಚಿಕ್ಕವಿರುವವು. ಇವಕ್ಕೆ ಬಾಲವಿರುವುದಿಲ್ಲ; ಮತ್ತು ಇಂತಹ ಬಾಲವಿಲ್ಲದ ಮಂಗಗಳೇ ಮನುಷ್ಯನಿಗೆ ಹೆಚ್ಚು ಸಮೀಪವಾದ ವೆಂದು ನಿರ್ವಿವಾದವಾಗಿ ತರ್ಕಿಸಬಹುದು.

ನಾಲ್ಕು ತರದ ಮಾನವ ಕಪಿಗಳು

ಮೇಲೆ ನಾಲ್ಕು ತರದ ಮಾನವ-ಕಪಿಗಳನ್ನು ಉಲ್ಲೇಖಿಸಿದ್ದಾಯಿತು. ಅವುಗಳಲ್ಲಿ ಗಿಬನ್ ಮತ್ತು ಓರಾಂಗಜಾತಿಯ ಮಂಗಗಳೇ ಏಸಿಯಾಖಂಡದಲ್ಲಿ ವಾಸಿಸುತ್ತಿದ್ದು ಅವುಗಳ ಬಗ್ಗೆ ಇದ್ದ ನಮ್ಮ ಜ್ಞಾನವು ಹೆಚ್ಚು ವಿಶ್ವಸನೀಯವಾಗಿದೆ. (ಸನ್ ೧೮೬೩ರಲ್ಲಿ ಹಕ್ಸಲೇಯವರು ಈ ಮಾತನ್ನಾಡಿದ್ದರು. ಆ ಮಾತು ಇಂದಿಗೂ ಸತ್ಯವಿದೆಯೆಂದೆನ್ನಬಹುದು.) ಚಿಂಪಂಝೀ ಮತ್ತು ಗೋರಿಲ್ಲಾ ಕಪಿಗಳು ಆಫ್ರಿಕೆಯಲ್ಲಿ ಇರುತ್ತಿದ್ದು ಅವುಗಳ ಬಗ್ಗೆ ನಮ್ಮ ಜ್ಞಾನವು ಸಾಕಷ್ಟು ಮುಂದುವರಿದಿಲ್ಲ. ಆದುದರಿಂದ ಗಿಬನ್ ಮತ್ತು ಓರಾಂಗಗಳನ್ನೇ ಹಕ್ಸಲೇಯವರು ಮುಖ್ಯವಾಗಿ ಚರ್ಚಿಸಿದ್ದಾರೆ. ಅವರ ವರ್ಣನೆಯನ್ನೇ ನಾವಾದರೂ ಇಲ್ಲಿ ಅನುಸರಿಸಿರುವೆವು.

ಗಿಬನ್ ಕಪಿಯ ವರ್ಣನೆಯು

ಗಿಬನ್‌ಜಾತಿಯ ಮಂಗಗಳಲ್ಲಿ ಆರು ತರದ ವರ್ಗಗಳನ್ನು ಮಾಡಬಹುದು. ಅವು ಜಾವಾ, ಸುಮಾತ್ರಾ, ಬೋರ್ನಿಯೋ, ಮಲಾಕಾ, ಸಿಯಾಮ, ಆರಾಕಾನ, ಮತ್ತು ಹಿಂದುಸ್ಥಾನದ ಕೆಲವು ಭಾಗಗಳಲ್ಲಿ ವಾಸಿಸುತ್ತಿರುವವು. ತೀರ ದೊಡ್ಡವೆಂದರೆ ತಲೆಯಿಂದ ಕಾಲಿನವರೆಗೆ ೩ ಫೂಟುಗಳಮೇಲೆ ಕೆಲವು ಇಂಚುಮಾತ್ರ ಅವು ಎತ್ತರವಾಗಿರುತ್ತವೆ. ಎಂದರೆ ಉಳಿದ ಎಲ್ಲ ಮಾನವಕಪಿಗಳಿಗಿಂತ ಇದು ಚಿಕ್ಕದಾಗಿರುವುದು. ಅದರ ಅವಯವಗಳಾವವೂ ಬಹಳ ದಪ್ಪಾಗಿರುವುದಿಲ್ಲ. ಇದು ಮುಖ್ಯವಾಗಿ ಗುಡ್ಡಗಾಡು ಪ್ರದೇಶಗಳಲ್ಲಿಯೇ ತನ್ನ ವಾಸಸ್ಥಾನವನ್ನು ಹುಡುಕಿಕೊಂಡಿರುತ್ತದೆ. ಹಗಲೆಲ್ಲ ಎತ್ತರವಾದ ಗಿಡಗಳ ತುದಿಯಲ್ಲಿದ್ದುಕೊಂಡು, ಸಂಜೆಯಾದೊಡನೆ ಕೆಳಗಿಳಿದು ಬೈಲುಪ್ರದೇಶಕ್ಕೆ ಬರುವುದು. ಆದರೆ ಎಲ್ಲಿಯಾದರೂ ಮನುಷ್ಯರ ಸುಳಿವಾದೊಡನೆ ಅದು ಮತ್ತೆ ಕೂಡಲೇ ಗಿಡವನ್ನೇರುತ್ತದೆ. ಅದರ ಧ್ವನಿಯು ಬಲು ದಪ್ಪಾದದ್ದೆಂದು (Deep) ಅದನ್ನು ನೋಡಿದವರೆಲ್ಲ ಹೇಳುತ್ತಾರೆ; ಅದು (ಧ್ವನಿಯು) ಗೋಅಕ್, ಗೋಅಕ್, ಗೋಅಕ್, ಹಾ, ಹಾ, ಹಾ ಆಆಆ ಎಂಬ ಸಪ್ಪಳವನ್ನು ಹೋಲುವುದು. ಡುವಾಸಲ್ ಎಂಬ

ವರು ಈ ಕಪಿಯ ಚೀತ್ಕಾರವು ಏಷ್ಟೋ ಮೈಲುಗಳ ವರೆಗೆ ಕೇಳಿಸುತ್ತದೆಂದು ಬರೆದಿದ್ದಾರೆ; ಮಾರ್ಟಿನ್ ಎಂಬವರು ಅದರ ಧ್ವನಿಯು ಕಿವಿಗಳನ್ನು ಸಹಜವಾಗಿಯೇ ಗಡುಚಿಕ್ಕಿಸುವುದೆಂದು ಹೇಳುತ್ತಾರೆ. ವಾಟರಹೌಸ್ ಎಂಬವರು "ನಾನು ಕೇಳಿದ ಯಾವುದೇ ಗಾಯಕನ ಧ್ವನಿಗಿಂತಲೂ ಇದು ಹೆಚ್ಚು ಬಲಿಷ್ಠವಾಗಿದೆಯೆಂ"ದು ಅಭಿಪ್ರಾಯಬಟ್ಟಿದ್ದಾರೆ. ಹೀಗಿದ್ದರೂ ಇದು (ಕಪಿಯು) ಎತ್ತರದಲ್ಲಿ ಮನುಷ್ಯನ ಅರ್ಧದಷ್ಟು ಮಾತ್ರ ಇರುವುದೆಂಬುದನ್ನು ಮರೆಯಲಾಗದು. ಈ ಕಪಿಯನ್ನು ಹಿಡಿದು ಊಳುಮಾಡಿ ಕಲಿಸಿಕೊಟ್ಟರೆ ಅಲ್ಪಾವಧಿಯಲ್ಲಿಯೇ ಇದು ನೀಟಾಗಿ ಹಿಂಗಾಲುಗಳಮೇಲೆ ಎದ್ದುನಿಂತು ನಡೆಯಲಾರಂಭಿಸಬಲ್ಲದು. ಜಾರ್ಜ ಬೆನೆಟ್ಟ ಎಂಬವರು ತಮ್ಮ ಹತ್ತರವಿದ್ದ ಒಂದು ಮಂಗನ ವಿಷಯವಾಗಿ ಬರೆದಿರುವುದೇನೆಂದರೆ:- " ಸಪಾಟಾದ ನೆಲದಮೇಲೆ ಇದು ತಪ್ಪದಲೇ ನೀಟಾಗಿ ನಡೆಯುತ್ತದೆ; ಕೈಗಳು ಕೆಳಗೆ ಬೀಸಾಡುತ್ತಿರುವವು; ಅದರಿಂದ ಅದಕ್ಕೆ ತನ್ನ ದೇಹಸಾಮ್ಯವನ್ನು ಕಾಯ್ದುಕೊಳ್ಳಲಿಕ್ಕೆ ಒಳಿತಾಗಿ ಸಹಾಯವಾಗುವುದು. ಅಥವಾ ಅದು ಕೈಗಳನ್ನು ಮೇಲಕ್ಕೆ ಹೆಗಲಮೇಲೆ ನೆಟ್ಟಗೆಮಾಡಿಕೊಂಡು ನಡೆಯುತ್ತದೆ. ಅದರಿಂದ ಪರಕೀಯರಾರಾದರೂ ಅಡ್ಡಬಂದೊಡನೆ ಅಥವಾ ಏನಾದರೂ ಸಂಕಟವು ಇರುವುದೆಂದೆನಿಸಿದೊಡನೆ, ಅದು ಹಗ್ಗವನ್ನು ಹಿಡಿದುಕೊಂಡು ಮೇಲಕ್ಕೇರಿ ಹೋಗಲಿಕ್ಕೆ ಸಿದ್ಧವಾಗಿರುತ್ತದೆ. ಈ ರೀತಿಯಲ್ಲಿ ಅದು ತುಸು ವೇಗದಿಂದಲೇ ನಡೆಯುವುದೆಂದು ಹೇಳಬಹುದು. ಆದರೆ ಅದರ ವೇಗವ ನಡಿಗೆಯು ಸಣ್ಣಹುಡುಗರು ದಟ್ಟಡಿಯಿಟ್ಟು ಓಡುವುದನ್ನು ಹೋಲುತ್ತದೆಯೆಂದೆನ್ನಬಹುದು. ಅದಕ್ಕೆ ಹತ್ತುವ ಸಾಧನವೇನೂ ಸಿಗದಂತಿದ್ದರೆ, ಬೆನ್ನುಹತ್ತಿದವರು ಅವನ್ನು ಸುಲಭವಾಗಿ ಹಿಡಿಯಬಹುದು. " ಇದೇ ತರದ ಹಲವು ವರ್ಣನೆಗಳನ್ನು ಕೊಡಬಹುದು. ಡಾ. ಬರೋ ಎಂಬವರು ಅವು ಸಾಧಾರಣ ವೇಗದಿಂದಲೇ ಓಡುವವೆಂದೂ, ಬಹಳೇ ಅವಸರವಾದರೆ ಕೈಗಳನ್ನೂರಿ ಜಿಗಿಯುತ್ತಹೋಗುವವೆಂದೂ ಹೇಳುತ್ತಾರೆ. ಡಾ. ವಿನ್‌ಸ್ಲೋಲೆವಿಸ್ ಎಂಬವರು " ಅವು ಒಂದರ ಮುಂದೊಂದು ಕಾಲಿಡುತ್ತ ನಡೆಯುವುದಿಲ್ಲ. ಎರಡೂ ಕಾಲುಗಳನ್ನು ಒಮ್ಮೆಲೇ ಉಪಯೋಗಮಾಡಿ ಜಿಗಿಯುತ್ತಹೋಗುತ್ತವೆ"ಯೆಂದು ಬರೆದಿದ್ದಾರೆ. ಇಂತಹ ಇನ್ನೂ ಎಷ್ಟೋ ಜನರ ವರ್ಣನೆಗಳನ್ನು ಕೊಡುತ್ತಹೋಗಿ ಕಡೆಗೆ ಗಿಬನ್ ಜಾತಿಯ ಮಂಗವು ಮನುಷ್ಯನಂತೆ ನೀಟಾಗಿ

ನಡೆಯುವುದೆಂಬುವುದರಲ್ಲಿ ಸಂದೇಹವಿಲ್ಲವೆಂದು ಹಕ್ಸಲೀ ಸಾಹೇಬರು ಸಿದ್ಧಾಂತವನ್ನು ತೆಗೆಯುತ್ತಾರೆ.

ಅದರ ಸ್ವಭಾವವು

ಗಿಬನ್ ಕಪಿಯು ಸ್ವಭಾವತಃ ಸೌಮ್ಯವಾದ ಪ್ರಾಣಿಯು; ಸಿಟ್ಟಿಗೆಬ್ಬಿಸಿದರೆ ಮಾತ್ರ ಅದು ಬಲು ಬಿರುಸಾಗಿ ಕಡಿಯುವುದು. ಒಂದು ಮಂಗವು ತನ್ನ ಸೂಲದ ಹಲ್ಲುಗಳಿಂದ ಬಹು ಕ್ರೂರ ರೀತಿಯಿಂದ ಒಬ್ಬ ಮನುಷ್ಯನನ್ನು ಕಡಿಯಲು ಅವನು ಜೀವಕ್ಕೇ ಎರವಾಗಬೇಕಾಯಿತೆಂದು ಹೇಳುತ್ತಾರೆ. ಅದು ಹುಳಗಳನ್ನು ತಿಂದರೂ, ಪ್ರಾಣಿಗಳ ಮಾಂಸವನ್ನು ತಿನ್ನುವಂತೆ ತೋರುವುದಿಲ್ಲ. ನೀರು ಕುಡಿಯಬೇಕಾದರೆ ಅವು ಕೈಗಳನ್ನು ನೀರಲ್ಲಿ ಎದ್ದಿ ಅವನ್ನು ನೆಕ್ಕಿಕೊಳ್ಳುತ್ತವೆ. ಅವು ಕುಳಿತಲ್ಲಿಯೇ ನಿದ್ದೆಮಾಡುವವೆಂದು ಹಲವರು ಹೇಳುತ್ತಾರೆ. ಹೆಣ್ಣು ಕಪಿಗಳು ಸಣ್ಣ ಮರಿಗಳನ್ನು ನೀರಿನೆಡೆಗೆ ಒಯ್ದು ಅವುಗಳ ಮೋರೆಯನ್ನು ತೊಳಿಸುತ್ತವೆ; ಆಗ ಆ ಮರಿಗಳು ಒಲ್ಲೆವೆಂದು ಪ್ರತಿಬಂಧಿಸಿ ಬೇಕಾದಷ್ಟು ಚೀರಾಡಿದರೂ ತಾಯಿಯು ಕೇಳುವುದಿಲ್ಲೆಂದು ಡುವಾಸಲನೆಂಬ ಪ್ರವಾಸಿಯು ಉಲ್ಲೇಖಿಸಿದ್ದಾನೆ. ಪ್ರತಿಬಂಧದಲ್ಲಿಟ್ಟಾಗ ಅವು ಸೌಮ್ಯವಾಗಿದ್ದು ಬಲು ಪ್ರೀತಿಯುಳ್ಳವುಗಳಾಗಿರುತ್ತವೆ. ಅಚ್ಚೆಯ ಹುಡುಗರಂತೆ ಚೇಷ್ಟೆಮಾಡುವುದೂ ಹುಡುಗಾಟವಾಡುವುದೂ ಅವಕ್ಕೆ ಬಲು ಸೇರುತ್ತವೆ. ಆದರೆ ಅವುಗಳಲ್ಲಿಯೂ ಕೂಡ ಒಂದು ತರದ ಸದಸದ್ವಿವೇಕಬುದ್ಧಿಯು ಜಾಗೃತವಾಗಿರುತ್ತದೆಂಬಂತೆ ತೋರುತ್ತದೆ. ಜಾರ್ಜ ಬೆನೆಟ್ಟರು ಈ ಮಾತನ್ನು ಉದಾಹರಿಸಲಿಕ್ಕೆ ಒಂದು ಬಹು ರಮ್ಯವಾದ ಕಥೆಯನ್ನು ಉಲ್ಲೇಖಿಸಿದ್ದಾರೆ. ಅವರು ಸಾಕಿದ ಕಪಿಯೊಂದು ಅವರು ಪ್ರವಾಸಮಾಡುತ್ತಿದ್ದ ಹಡಗದೊಳಗಿನ ಸಾಮಾನುಗಳನ್ನೆಲ್ಲ ಚೆಲ್ಲಾಪಿಲ್ಲಿ ಮಾಡಿ ಕೆಡಿಸಿಬಿಡುವುದರಲ್ಲಿ ಬಲು ಸಂತೋಷವನ್ನು ತೆಗೆದುಕೊಳ್ಳುತ್ತಿತ್ತಂತೆ. ಇಂತಹ ಸಾಮಾನುಗಳಲ್ಲಿ ಸಾಬೂನಿನ ಒಂದು ತುಂಡನ್ನು ಅದು ಕೆಳಗೆ ಚೆಲ್ಲಿ ಕೊಟ್ಟಿದ್ದಕ್ಕೆ ಎರಡು ಮೂರು ಸಾರೆ ಬೈಸಿಕೊಂಡಿತ್ತು. “ ಒಂದು ದಿವಸ ಮುಂಜಾನೆ ನಾನು ಬರೆಯುತ್ತ ಕುಳಿತುಕೊಂಡಿದ್ದೆನು. ನನ್ನ ಮಂಗವೂ ಅಲ್ಲಿಯೇ ಕುಳಿತುಕೊಂಡಿತ್ತು. ನಾನೊಮ್ಮೆ ಕಣ್ಣೆತ್ತಿ ನೋಡಿದಾಗ ಅದು ಮತ್ತೆ ಆ ಸಾಬೂನಿನ ತುಣುಕನ್ನು ತೆಗೆದುಕೊಳ್ಳುವ ಪ್ರಯತ್ನದಲ್ಲಿತ್ತು. ಆದರೆ ನಾನದನ್ನು ನೋಡುತ್ತಿರುವೆನೆಂದು ಮಾತ್ರ ಅದಕ್ಕೆ ತಿಳಿಯಗೊಡಲಿಲ್ಲ. ನಾನು ಕುಳಿತ

ಕಡೆಗೆ ಅದು ತುಡುಗತನದಿಂದ ಮೇಲಿಂದಮೇಲೆ ನೋಡುತ್ತಿತ್ತು. ನಾನು ಬರೆಯುವವನಂತೆಯೇ ನಟಿಸಿದೆನು. ನಾನು ಬರೆಯುವುದರಲ್ಲಿ ತೊಡಗಿರುವೆನೆಂದು ತಿಳಿದು ಅದು ಆ ಚೂರನ್ನು ಸದ್ದಿಲ್ಲದೆ ತೆಗೆದುಕೊಂಡಿತು. ಮತ್ತು ಅದನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ಖೋಲಿಯಹೊರಗೆ ಹೋಗಹತ್ತಿತು. ಖೋಲಿಯ ಅರ್ಧಭಾಗವನ್ನು ದಾಟುವಷ್ಟರಲ್ಲಿ ಅದು ಅಂಜಬಾರದೆಂದು ನಾನು ಸೌಮ್ಯಸ್ವರದಿಂದಲೇ ಮಾತನಾಡಿದೆನು. ನಾನು ಅದನ್ನು ನೋಡಿದೆನೆಂಬ ಮಾತು ಅದಕ್ಕೆ ಕೂಡಲೇ ತಿಳಿಯಿತು. ಮತ್ತು ಅಪರಾಧಮಾಡಿದವರಂತೆ ಅದು ಸುಮ್ಮನೇ ತಿರುಗಿಬಂದು ಆ ಸಾಬೂನನ್ನು ಮೊದಲಿದ್ದಲ್ಲಿ ಇಟ್ಟುಬಿಟ್ಟಿತು. ಅದರ ಮೋರೆಯ ಮೇಲೆ ತಪ್ಪಿನ ಕಳೆಯು ಸುರಿಯುತ್ತಿತ್ತು. ಈ ಸಂಗತಿಯಲ್ಲಿ ಹೇಳಿಕೊಳ್ಳತಕ್ಕಂತಹ ಮಾತೇನೂ ಇರುವುದಿಲ್ಲ. ಅದು ಹೀಗೆ ಮಾಡಿದುದು ನೈಸರ್ಗಿಕಸ್ವಭಾವದ ಫಲವೇ ಅಹುದೆಂಬುವುದರಲ್ಲಿ ಸಂದೇಹವಿಲ್ಲ. ಆದರೆ ಅದರ ಮೊದಲಿನ ಹಾಗೂ ಕಡೆಯ ಕೃತಿಗಳನ್ನು ನೋಡಿದರೆ, ತಾನು ತಪ್ಪು ಮಾಡಿರುವೆನೆಂಬ ಪ್ರಜ್ಞೆಯು ಅದಕ್ಕಿರುವುದೆಂದು ಸ್ಪಷ್ಟವಾಗಿ ಕಂಡುಬರುವಂತಿತ್ತು. ...... ಮತ್ತು ಈ ತರದ ಜ್ಞಾನವು ಮಾನವಬುದ್ಧಿಯ ದ್ಯೋತಕವಲ್ಲದಿದ್ದರೆ ಮತ್ತೇನಾಗುವುದು ಶಕ್ಯವಿದೆ ? ”

ಓರಾಂಗ ಉಟಾನವು

ಓರಾಂಗ ಉಟಾನವು ನಾಲ್ಕು ಫೂಟುಗಳಗಿಂತ ಹೆಚ್ಚು ಎತ್ತರವಾಗಿರುವುದಿಲ್ಲ. ಆದರೆ ಅದರ ದೇಹವು ಮಾತ್ರ ಬಹಳ ಕೊಬ್ಬಿದ್ದಿರುತ್ತದೆ. ಸುಮಾತ್ರಾ ಮತ್ತು ಬೋರ್ನಿಯೋ ದ್ವೀಪಗಳೇ ಅದರ ಮುಖ್ಯವಾದ ವಾಸಸ್ಥಾನಗಳು. ಅದು ಎಂದೂ ಪರ್ವತಗಳ ಮೇಲೆ ವಾಸಿಸುವುದಿಲ್ಲ; ಕೆಳಗಿನ ಸಪಾಟಾದ ನೆಲವೇ ಅದಕ್ಕೆ ಬಲು ಸೇರುತ್ತದೆ. ಆದರೆ ಬಹು ದಟ್ಟವಾದ ಮತ್ತು ಕತ್ತಲೆಯಿಂದ ವ್ಯಾಪ್ತವಾದ ಅಡವಿಗಳು ಮಾತ್ರ ಅಲ್ಲಿರಬೇಕು. ಗಂಡು ಮಂಗಗಳು ಬೇರೆ ಬೇರೆಯಾಗಿಯೇ ಇರುತ್ತವೆ. ಆದರೆ ಮುದುಕಾದ ಹೆಣ್ಣು ಮಂಗಗಳೂ ಅಶಕ್ತವಾದ ಗಂಡು ಮಂಗಗಳೂ ಎರಡು ಮೂರರ ಗುಂಪುಗಳನ್ನು ಕಟ್ಟಿಕೊಂಡು ಅಡ್ಡಾಡುತ್ತಿರುತ್ತವೆ. ಮರಿಗಳು ಎಷ್ಟೋ ದಿವಸಗಳವರೆಗೆ ತಾಯಿಯ ಸಂಗಡಲೇ ಇರುವವು. ತಾಯಿಯು ಹತ್ತುವಾಗ ಅವು ತಮ್ಮ ಕೈಗಳಿಂದ ತಾಯಿಯ ಎದೆಯನ್ನು ಗಟ್ಟಿಯಾಗಿ ಹಿಡಿದುಕೊಳ್ಳುತ್ತವೆ. ಹತ್ತು ಹದಿನೈದು ವರುಷಗಳಾದವೆಂದರೆ

ಅವಕ್ಕೆ ಯೌವನವು ಪ್ರಾಪ್ತವಾಗುತ್ತದೆ. ಅವುಗಳ ಒಟ್ಟು ಆಯುಷ್ಯವು ಸುಮಾರು ೪೦–೫೦ ವರುಷಗಳವರೆಗೆ ಇರುವುದೆಂದು ಹೇಳಬಹುದು. ಈ ಕಪಿಯು ಬಹು ಮಂದವಾದ ಪ್ರಾಣಿಯು. ಗಿಬನ್ನ ಕಪಿಯ ಚಪಲತೆಯ ಗಂಧವೂ ಕೂಡ ಇದಕ್ಕಿರುವುದಿಲ್ಲ. ತೀರ ಹಸಿವೆಯಾದಾಗ ಮಾತ್ರ ಅದು ತನ್ನ ಜಾಡ್ಯದಿಂದ ಚೇತರಿಸಿಕೊಳ್ಳುತ್ತದೆ. ಕ್ಷುಧೆಯು ಶಾಂತವಾದೊಡನೆ ಅದು ಮತ್ತೆ ಕುಂಭ ಕರ್ಣನೇ! ಹಗಲು ಒಂದು ಗಿಡದ ತುದಿಯಿಂದ ಮತ್ತೊಂದು ಗಿಡಕ್ಕೆ ಹಾರಾಡುತ್ತಿರುತ್ತದೆ. ಎಷ್ಟೋ ದಿವಸಗಳ ವರೆಗೆ ಅದು ಸ್ಥಾನಾಂತರವನ್ನೂ ಕೂಡ ಮಾಡುವುದಿಲ್ಲ. ಒಮ್ಮೊಮ್ಮೆ ಒಂದೇ ಗಿಡದಮೇಲೆ ಎಷ್ಟೋ ದಿವಸಗಳನ್ನು ಕಳೆಯುವುದೆಂದು ಹೇಳುತ್ತಾರೆ. ಆದರೆ ರಾತ್ರಿಯನ್ನು ಮಾತ್ರ ಅದು ಎಂದೂ ಗಿಡಗಳ ತುದಿಯಮೇಲೆ ಕಳೆಯುವುದಿಲ್ಲ. ಸಂಜೆಯಾದೊಡನೆ ಕೆಳಗಿನ ಟೊಂಗೆಗಳಿಗೆ ಇಳಿದು, ಬಹಳ ಎಲೆಗಳಿದ್ದ ಸ್ಥಳದಲ್ಲಿ ಒಂದು ತರದ ಗೂಡನ್ನು ಕಟ್ಟಿಕೊಂಡು ರಾತ್ರಿಯಲ್ಲಿ ನಿದ್ದೆ ಹೋಗುವುದು. ಮುಂಜಾನೆ ಅದು ಎಂದೂ ಬೇಗನೇಳುವುದಿಲ್ಲ. ಅದು ಬಹುಶಃ ಮುಂಜಾನೆಯ ೯ ಗಂಟೆಗೆ ಎಚ್ಚರಾಗಿ ಸಂಜೆಯ ಐದು ಗಂಟೆಗೆ ಮತ್ತೆ ನಿದ್ರಾಧೀನವಾಗುವುದು. ಅದು ಅಂಗಾತ ಮಲಗುವುದೇ ಹೆಚ್ಚು. ಆದರೆ ಬೇಸರಾದಾಗ ಭುಜಗಳ ಮೇಲೂ ಒಮ್ಮೊಮ್ಮೆ ಮಲಗಿಕೊಂಡು, ಕೈಮೇಲೆ ತನ್ನ ಕೈಯನ್ನಿಟ್ಟು ಸುಖವಾಗಿ ನಿದ್ರೆಮಾಡುವುದು. ಹವೆಯಲ್ಲಿ ಚಳಿಯಿದ್ದಾಗ ಮೈಮೇಲೆ ಎಲೆಗಳನ್ನು ಹೊದ್ದುಕೊಳ್ಳುತ್ತದೆ; ಮತ್ತು ತಲೆಯನ್ನಂತೂ ಆಚ್ಛಾದಿಸಿಕೊಳ್ಳಲಿಕ್ಕೆ ಅದು ಎಂದೂ ಮರೆಯುವುದಿಲ್ಲ. ಆದುದರಿಂದಲೇ ಓರಾಂಗ ಕಪಿಯು ಗಿಡಗಳಮೇಲೆ ಗುಡಿಸಲುಗಳನ್ನು ಕಟ್ಟುವುದೆಂದು ಎಷ್ಟೋ ಜನರು ಕಥೆಗಳನ್ನು ಹುಟ್ಟಿಸಿದ್ದಾರೆ.

ಓರಾಂಗ ಕಪಿಯ ಸ್ವಭಾವವು.

ಅದು ಬಹು ಸಾವಕಾಶವಾಗಿ, ಸಾವಧಾನವಾಗಿ ಗಿಡನನ್ನು ಹತ್ತುವುದರಿಂದ ಆ ಕಾಲದಲ್ಲಿ ಅದು ಮನುಷ್ಯನನ್ನೇ ಹೋಲುವಂತೆ ತೋರುತ್ತದೆ. ನೆಲದ ಮೇಲೆ ನಡೆಯುವಾಗ ಅದು ನಾಲ್ಕೂ ಕಾಲುಗಳನ್ನು ಊರುವುದು. ಮೊತ್ತಮೊದಲು ಮನುಷ್ಯನಿಗಿಂತ ಅದು ವೇಗದಿಂದ ಓಡಿದರೂ, ಅಲ್ಪ ವೇಳೆಯಲ್ಲಿಯೇ ಅದು ಹಿಂದೆ ಬೀಳುವುದೆಂಬುವುದರಲ್ಲಿ ಸಂದೇಹವಿಲ್ಲ. ಅದರ ಮುಂಗಾಲುಗಳು ಬಹಳೇ ಉದ್ದವಾಗಿರುವವೆಂಬುದೇ ಇದಕ್ಕೆ ಕಾರಣವು. ತನ್ನ ಹಿಂದಿನ ಕಾಲುಗಳ ಮೇಲೆ

ಅದು ಎಂದೂ ಎದ್ದು ನಿಲ್ಲಲಾರದು. ಸಾಕಿದರೆ ಅದು ಮನುಷ್ಯನನ್ನು ಸಂಪೂರ್ಣವಾಗಿ ನಂಬುತ್ತದೆ. ಕಿಂಬಹುನಾ, ಮನುಷ್ಯನ ಸಹವಾಸವನ್ನು ಅವು ಒಳ್ಳೇ ಉತ್ಸುಕತೆಯಿಂದ ಪ್ರೀತಿಸುತ್ತದೆಂದು ಹೇಳಬಹುದು. ಆದರೂ ಸ್ವಭಾವತಃ ವನ್ಯವಾಗಿ ಲಜ್ಜಾಯುಕ್ತವಾಗಿರುವುದು. ಬಾಣಗಳಿಂದ ಹೊಡೆದರೆ ಅವು ಸಿಟ್ಟಿಗೆದ್ದು ಶತ್ರುಗಳ ಮೈಮೇಲೇರಿ ಬಂದು, ಸಿಕ್ಕರೆ ಅವನನ್ನು ಕೊಂದು ಬಿಡುತ್ತವೆ. ಆದರೆ ತುಬಾಕಿಯ ಮುಂದೆ ಅದರ ಆಟವು ನಡೆಯಲಾರದೆಂಬುದು ಸ್ಪಷ್ಟವಿದೆ.

ಹೀಗೆ ಗಿಬನ್ ಮತ್ತು ಓರಾಂಗ ಕಪಿಗಳನ್ನು ವಿಸ್ತಾರವಾಗಿ ವರ್ಣಿಸಿ ಹರ್ಕ್ಸಲೇ ಸಾಹೇಬರು ತೆಗೆಯುವ ಸಿದ್ಧಾಂತವೇನೆಂದರೆ: (೧) ಮಾನವಕಪಿಯು ನೆಲದಮೇಲೆ ನೀಟಾಗಿ ನಡೆಯಬಲ್ಲದು. (೨) ಎರಡು ಮೂರು ಮೈಲುಗಳ ವರೆಗೆ ಕೇಳಬರುವಷ್ಟು ಅದರ ಧ್ವನಿಯು ಬಲಿಷ್ಠವಾಗಿರುವುದು. (೩) ಸಿಟ್ಟಿಗೆಬ್ಬಿಸಿದರೆ ಅದು ಬಹು ಕ್ರೂರತನವನ್ನು ತೋರಿಸುತ್ತದೆ. (೪) ತನಗೆ ಮಲಗಲಿಕ್ಕೆಂದು ಅದು ಗೂಡುಗಳನ್ನು ಕಟ್ಟಿಕೊಳ್ಳುತ್ತದೆ. ( Natural History of Man-like Apes )

ಇದರ ಮೇಲಿಂದ ತೆಗೆಯ ಬಹುದಾದ ಸಿದ್ಧಾಂತಗಳು

ಚಿಂಪಂಝಿಯ ಬಾಹುಗಳು ಓರಾಂಗ ಮತ್ತು ಗಿಬನ್‌ಗಳಿಂದ ಸಣ್ಣವು. ಆದರೂ ಹಿಂಗಾಲುಗಳಿಗಿಂತ ಮುಂಗೈಗಳು ದೊಡ್ಡವೆಂದು ಹೇಳಬಹುದು. ಅದು ಎದ್ದು ನಿಲ್ಲುವುದು ಶಕ್ಯವಿದ್ದರೂ ಸ್ವಾಭಾವಿಕವಾಗಿ ನಾಲ್ಕೂ ಅವಯವಗಳನ್ನು ಊರಿಯೇ ಅಡ್ಡಾಡುವುದು. ಮನುಷ್ಯನಂತೆ ಅಂಗೈ ಮೇಲೂ ಮೋರೆಯ ಮೇಲೂ ಕೂದಲುಗಳಿರುವುದಿಲ್ಲ. ಚಿಂಪಂಝಿ ಕಪಿಗಳು ಗುಂಪುಗಟ್ಟಿಕೊಂಡು ಅಡವಿಯಲ್ಲಿರುವವು. ಗಿಡಗಳ ಮೇಲೆ ಗೂಡುಗಳನ್ನು ಕಟ್ಟಿಕೊಂಡು ಅಲ್ಲಿ ತಮ್ಮ ರಾತ್ರಿಯನ್ನು ಕಳೆಯುವವು.

ಚಿಂಪಂಝೀ

ಗೋರಿಲ್ಲಾ ಕಪಿಯು ಚಿಂಪೇಝಿಗಿಂತ ಬಲು ದೊಡ್ಡದು. ಪೂರ್ಣವಾಗಿ ಬೆಳೆದ ಕೋತಿಯು ಐದೂವರೆ ಫೂಟು ಎತ್ತರವಾಗಿರುವುದು. ಅದರ ಮುಸುಡಿಯು ಚೆನ್ನಾಗಿ ಮುಂದಕ್ಕೆ ಹಾಯ್ದಿರುತ್ತದೆ. ಸೂಲದ ಹಲ್ಲುಗಳು ಬಲು ದೊಡ್ಡವು. ಬಾಹುಗಳಾದರೂ ದೊಡ್ಡವಿದ್ದು

ಗೋರಿಲ್ಲಾ ಕಪಿಯು

ಎದ್ದು ನಿಂತಾಗ ಮೊಣಕಾಲಿನವರೆಗೆ ಅವು ಇಳಿಬಿದ್ದಿರುವವು. ಕಪ್ಪಾದ ಅಂಗೈ ಅಂಗಾಲುಗಳು ಕೂದಲಿಲ್ಲದೆ ಬತ್ತಲೆಯಾಗಿರುವವು. ಗೋರಿಲ್ಲಾ ಕಪಿಯು ಬಹುಶಃ ಗಿಡದ ಮೇಲೆಯೇ ತನ್ನ ಕಾಲವನ್ನು ಕಳೆಯುವುದು. ಮತ್ತು ಗಂಡು ಮಂಗವು ಗೂಡನ್ನು ಕಟ್ಟಿಕೊಟ್ಟರೆ ಹೆಣ್ಣು ತನ್ನ ಮರಿಗಳನ್ನು ಅಲ್ಲಿ ಇಟ್ಟು ಜೋಪಾನಮಾಡುವುದು.

ಕೈಕಾಲುಗಳ ರಚನೆಯಲ್ಲಿ ಗೋರಿಲ್ಲಾ ಕಪಿಯು ಮನುಷ್ಯನನ್ನು ಬಹಳವಾಗಿ ಹೋತರೆ, ಚಿಂಪಂಝಿಯು ತಲೆಬುರುಡೆಯಲ್ಲಿ ಮನುಷ್ಯನ ಸಮೀಪಕ್ಕೆ ಬರುತ್ತದೆ. ಓರಾಂಗವು ಮಿದುಳಿನ ಬೆಳವಣಿಗೆಯಲ್ಲಿ ಮನುಷ್ಯನ ಆಪ್ತನಾದರೆ, ಗಿಬನ್ ಕಪಿಯು ಎದೆಯ ಆಕಾರದಲ್ಲಿ ಮನುಷ್ಯನ ಸಂಬಂಧವನ್ನು ಬೆಳೆಯಿಸಬೇಕೆನ್ನುತ್ತದೆ.

ಇಷ್ಟಾದರೂ "ಸದ್ಯಕ್ಕೆ ಅಸ್ತಿತ್ವದೊಳಗಿದ್ದ ತೀರ ಕಡಿಮೇತರದ ಮನುಷ್ಯನಿಗೂ ಮತ್ತು ಬೆಳವಣಿಗೆಯ ಶಿಖರವನ್ನು ಮುಟ್ಟಿದ ಸದ್ಯಕ್ಕಿನ ಮಂಗಗಳಿಗೂ ಮಹದಂತರವಿರುವುದೆಂಬುದನ್ನು ಮರೆಯಲಾಗದು.

ಮನುಷ್ಯನಿಗೂ ಕಪಿಗೂ ಇರುವ ನಿಜವಾದ ಸಂಬಂಧ

ಅವುಗಳ ರಚನೆಯು ತೀರ ಭಿನ್ನವಾಗಿರುವುದರಿಂದ ಅವು ಒಂದರಿಂದೊಂದು ಹುಟ್ಟಿರುವುದು ಶಕ್ಯವಿಲ್ಲೆಂದು ನಾವು ಒಪ್ಪಲೇ ಬೇಕಾಗುವುದು. ನಿಗ್ರೋ ಮನುಷ್ಯನು ಕೆಲವು ಸಂಗತಿಗಳಲ್ಲಿ ತೀರ ಕಪಿಯಾಗಿ ತೋರುವನೆಂಬುದು ನಿಜವಿದ್ದರೂ, ಅವನು ಎಷ್ಟಾದರೂ ಮನುಷ್ಯನೇ; ಅದು ಕಪಿಯೇ. ಚಿಂಪಂಝಿಯ ಮಿದುಳಿನಕಿಂತ ಅವನ (ಹುಚ್ಚನ) ಮಿದುಳು ದೊಡ್ಡದಾಗಿರದಿದ್ದರೂ, ಅಥವಾ ಅವನ ಬುದ್ಧಿಯು ಅದಕ್ಕಿಂತ ಹೆಚ್ಚಾಗಿರದಿದ್ದರೂ ಒಬ್ಬ ಹುಚ್ಚ ಮನುಷ್ಯನನ್ನು ಕೂಡ ಅಪೂರ್ಣವಾಗಿ ಬೆಳೆದ ಮನುಷ್ಯನೆಂದೇ ಹೇಳಬೇಕಾಗುವುದಲ್ಲದೆ ಅವನ್ನು ಮಂಗನೆಂದು ಹೇಳುವುದು ಎಂದೂ ಸಯುಕ್ತಿಕವಾಗಲಾರದು. ಆದುದರಿಂದ ಮನುಷ್ಯ ಮತ್ತು ಕಪಿಗಳಿಗೆ ಡಾರ್ವಿನ್ನನ ತತ್ತ್ವವು ನಿಜವಾಗಿ ಹತ್ತುತ್ತದೆಂದು ತಿಳಿಯಬೇಕಾಗಿದ್ದರೆ, ನಾವು ಮನುಷ್ಯ ಮತ್ತು ಕಪಿಗಳಿಗೆ ಸಾಮಾನ್ಯನಾದ ಮೂರನೆಯವನೊಬ್ಬ ಪೂರ್ವಜನನ್ನು ಹುಡುಕಬೇಕು. ಮತ್ತು ಆ ಪೂರ್ವಜನಿಂದಲೇ ಮನುಷ್ಯ ಮತ್ತು ಕಪಿಗ

ಳೆಂಬ ಎರಡು ಬೇರೆ ಬೇರೆ ಟಿಸಿಲುಗಳು ಒಡೆದು ಬೆಳೆವಣಿಗೆಯನ್ನು ಹೊಂದಿ ಸದ್ಯಕ್ಕಿನ ಮನುಷ್ಯರನ್ನೂ ಕಪಿವರ್ಗಗಳನ್ನೂ ಹುಟ್ಟಿಸಿರುವವೆಂದು ತೋರಿಸಬೇಕಾಗುವುದು. " ( ಆಧುನಿಕ ಶಾಸ್ತ್ರವೂ ವಿಚಾರವೂ ಪು. ೭೧ ) ಆದುದರಿಂದ ಮನುಷ್ಯನು ಸಾಕ್ಷಾತ್ ಕಪಿಪುತ್ರ ಅಥವಾ ಮಂಗನ ಮರಿಯಲ್ಲವೆಂಬುದನ್ನು ಎಲ್ಲರೂ ಲಕ್ಷ್ಯದಲ್ಲಿಡಬೇಕು. ಬಹಳವಾದರೆ ನಾವು ಮೇಲೆ ತೋರಿಸಿದಂತೆ, ಅವರಿಬ್ಬರೂ ದೂರಿನ ಕಕ್ಕನ ಮಕ್ಕಳೆಂದು ಹೇಳಬಹುದು.

---

# ೯

# ಮನುಷ್ಯನ ಉತ್ಪತ್ತಿ

ಮನುಷ್ಯ ಮತ್ತು ಕಪಿಗಳು

ಹೋದ ಎರಡು ಪ್ರಕರಣಗಳಲ್ಲಿ ಮನುಷ್ಯನು ಉಳಿದ ಪ್ರಾಣಿಗಳಿಗೆ ಹೇಗೆ ಸಂಬಂಧಿಕನಾಗಿರುವನೆಂಬುದನ್ನು ತೋರಿಸಿದೆವು. ಒಂದೇ ಒಂದಾದ ಜೀವ ಕೋಶದಿಂದ ಜಗತ್ತಿನ ಮೇಲೆ ಇಂದು ಅಸಂಖ್ಯಾಕವಾಗಿ ಕಾಣಬರುವ ಪ್ರಾಣಿಗಳೆಲ್ಲ ಹುಟ್ಟಿದವೆಂದು ವಿವರಿಸಿದೆವು. ಜಲಚರ, ದ್ವಿಚರ, ಖೇಚರ, ಭೂಚರ, ಮತ್ತು ಮನುಷ್ಯನನ್ನೊಳಗೊಂಡ ಸ್ತನಮೃಗಗಳು—ಎಂದು ವಿಕಾಸವಾದದ ಸಾಧಾರಣ ರೂಪರೇಷೆಗಳನ್ನು ಎಳೆದೆವು. ದ್ವಿಚರದಿಂದಲೇ ಬೇರೊಂದು ಟಿಸಿಲು ಒಡೆದು ಈಗಿನ ಖೇಚರಗಳು ಹುಟ್ಟಿದವೆಂದು ವರ್ಣಿಸಿದೆವು. ಮುಂದೆ ಸ್ತನಮೃಗಗಳಲ್ಲಿ ಮೂರು ಗುಂಪುಗಳಿರುವವೆಂದೂ, ಅವುಗಳಲ್ಲಿಯೇ ೧೧ ಭಾಗಗಳನ್ನು ಮಾಡುವರೆಂದೂ ಹೇಳಿ ಹನ್ನೊಂದನೆಯ ಭಾಗವೇ ಉತ್ಕ್ರಾಂತಿಯ ಕನಿಷ್ಠ(Youngest) ವಾದರೂ ಶ್ರೇಷ್ಠವಾದ ವರ್ಗವಾಗಿರುವುದೆಂದು ಹೇಳಿದೆವು. ಇದರಲ್ಲಿ ಅರ್ಧ ಕಪಿ, ಕಪಿ ಮತ್ತು ಮಾನವರೆಂಬ ಮೂರು ಉಪಭಾಗಗಳನ್ನು ಮಾಡಿ, ಕಪಿಗೂ ಮಾನವನಿಗೂ ಇರುವ ಸಾಮ್ಯಾಸಾಮ್ಯಗಳನ್ನು ಚರ್ಚಿಸಿದೆವು. ಕಪಿಗಳಲ್ಲಿ ದಪ್ಪವಾದ ಮೂಗುಳ್ಳ ಅಮೇರಿಕೆಯ ಕಪಿಗಳೆಂದೂ, ಅಧೋಮುಖನಾಸಿಕೆಯ ಏಸಿಯಾ ಆಫ್ರಿಕೆಗಳ ಕಪಿಯೆಂದೂ ಎರಡು ವಿಭಾಗಗಳನ್ನು ಮಾಡಿದೆವು. ಏಸಿಯಾದಲ್ಲಿ ಓರಾಂಗ ಮತ್ತು ಗಿಬನ್ ಕಪಿಗಳಿರುವವೆಂದೂ ಆಫ್ರಿಕೆಯಲ್ಲಿ ಗೋರಿಲ್ಲಾ ಮತ್ತು ಚಿಂಪಂಝೀ ಕಪಿಗಳಿರುವವೆಂದೂ ಅಲ್ಲಿಯೇ ಹೇಳಿಕೊಟ್ಟೆವು. ಇವುಗಳಲ್ಲಿ ಏಸಿಯಾದ ಕಪಿಗಳ ಗುಣಸ್ವಭಾವ ವರ್ಣನೆಯನ್ನು ವಿಸ್ತಾರವಾಗಿ ಮಾಡಿ ಮನುಷ್ಯನಿಗೂ ಅವುಗಳಿಗೂ ತೀರ ನಿಕಟವಾದ ಸಂಬಂಧವಿರುವುದೆಂಬುದು ಸಿದ್ಧವಾಗುತ್ತದೆಂದು ತೋರಿಸಿದೆವು. ಈ ನಾಲ್ಕು ಜಾತಿಯ ಮಂಗಗಳಲ್ಲಿ ಕೆಲವುಗಳಿಗೆ ಬಾಲವಿರುವುದೆಂದೂ, ಕೆಲವು ಬಾಲರಹಿತವಿರುವವೆಂದೂ ಹೇಳಬಹುದು. ಈ ಮಂಗಗಳ ದೇಹರಚನೆಯೂ ಮನುಷ್ಯ ಶರೀರರಚನೆಯೂ ಎಲ್ಲ ಚಿಕ್ಕ ಚಿಕ್ಕ ಬಾಬುಗಳಲ್ಲಿ ಕೂಡ ಒಂದೇತೆರನಾಗಿರುವುದೆಂಬುದೂ ಹಿಂದಿನ ಪ್ರಕರಣದಿಂದ ವಾಚಕರಿಗೆ ಗೊತ್ತಾಗುವಂತಿದೆ. ಇಷ್ಟೇ ಅಲ್ಲ; ಹಕ್ಸಲೇ ಸಾಹೇ

ಬರು ಹೇಳುವಂತೆ "ಇವುಗಳ ಮಿದುಳುಗಳನ್ನು ತುಲನಾತ್ಮಕ ರೀತಿಯಿಂದ ನಿರೀಕ್ಷಿಸಿದರೆ ಚಿಂಪಾಂಜಿ-ಓರಾಂಗಗಳಿಗೂ ಮನುಷ್ಯನಿಗೂ ನಡುವೆ ರವೆಯಷ್ಟಾದರೂ ಭೇದವಿಲ್ಲೆಂದು ಹೇಳಬಹುದು. ಆದರೆ ಅರ್ಧಕಪಿ ಮತ್ತು ಕಪಿಗಳ ನಡುವಿನ ವೈಶೇಷ್ಯ ಅಥವಾ ವ್ಯತ್ಯಾಸವು ಮಾತ್ರ ಹೆಚ್ಚಾಗಿರುವುದು." ಒಟ್ಟಿನ ಮೇಲೆ ಕಪಿ ಮತ್ತು ಮಾನವರ ಶರೀರ ತುಲನೆಯನ್ನು ಮಾಡಿ ಅವರು ಹೇಳುವುದೇನೆಂದರೆ:— "ದುರಾಗ್ರಹವಿಲ್ಲದೆ ಸೂಕ್ಷ್ಮವಿಚಾರಮಾಡುವ ಪ್ರತಿಯೊಬ್ಬನಿಗೂ ತುಲನಾತ್ಮಕ ಶಾರೀರಶಾಸ್ತ್ರವು ಮನುಷ್ಯ ಮತ್ತು ಕಪಿಗಳ ಶರೀರಗಳು **ಹೋಲುವುದೆಂ**ಬುದನ್ನಷ್ಟೇ ಅಲ್ಲ; ಆದರೆ ಅವು ಎಲ್ಲ ಮಹತ್ತ್ವದ ಭಾಗಗಳಲ್ಲಿ ತುಸು ಹೆಚ್ಚುಕಡಿಮೆ **ಒಂದೇ** ಆಗಿರುವವೆಂಬ ಬಹುಮಹತ್ತ್ವದ ಸಿದ್ಧಾಂತವನ್ನು ಮನವಟ್ಟಾಗುವಂತೆ ತಿಳಿಸಿ ಕೊಡದಿರಲಾರದು. (ಕಪಿಗಳಲ್ಲಿರುವಂತೆ) ಅದೇ ಕ್ರಮವಾಗಿ ಹಾಗೆಯೇ ವ್ಯವಸ್ಥಿತವಾದ ಅವೇ ಎರಡುನೂರು ಎಲುಬುಗಳಿಂದ ನಮ್ಮ ಅಸ್ಥಿಪಂಜರವು ಸಿದ್ಧವಾಗಿದೆ; ಅವೇ ೩೦೦ ಸ್ನಾಯುಗಳು ನಮ್ಮ ಚಲನೆಗೆ ಸೂತ್ರಗಳಾಗಿವೆ; ಅದೇ ಕೂದಲು ನಮ್ಮ ದೇಹವನ್ನು ಆಚ್ಛಾದಿಸಿರುತ್ತದೆ; ಅವೇ ಜ್ಞಾನ ದ್ರವ್ಯ ಕೋಶಗಳಿಂದ (Ganglionic cells) ಅದ್ಭುತವಾದ ನಮ್ಮ ಮಿದುಳು ರಚಿಸಲ್ಪಟ್ಟಿದೆ; ಅದೇ ನಾಲ್ಕು ಭಾಗಗಳುಳ್ಳ ಹೃದಯವು ರಕ್ತಾಭಿಸರಣ ಕ್ರಿಯೆಯನ್ನು ನಡೆಸುವುದು; ಅವೇ ಮುವ್ವತ್ತೆರಡು ಹಲ್ಲುಗಳು ಅದೇ ಕ್ರಮದಿಂದ ನಮ್ಮ ಬಾಯಿಯಲ್ಲಿ ಸ್ಥಾನಾಪನ್ನವಾಗಿವೆ; ಅದೇ ಲಾಲಾ ಕೋಶವು, ಅದೇ ಯಕೃತ್ತು, ಅದೇ ಪಾಚಕರಸವು, ನಮ್ಮ ಪಚನಕ್ರಿಯೆಯನ್ನು ಸಾಗಿಸುತ್ತವೆ; ಅದೇ ತರದ ಜನನೇಂದ್ರಿಯಗಳಿಂದ ನಮ್ಮ ಮಾನವ ಜಾತಿಯು ಇನ್ನೂ ವರೆಗೆ ಬದುಕಿಕೊಂಡಿದೆ." ಆದರೆ ಇದರಿಂದ ಮಾನವರೂ ಕಪಿಗಳೂ ಒಂದೇ ಎಂದು ಮಾತ್ರ ಯಾರೂ ತಿಳಿಯಲಾಗದು. ತುಸು ಹೆಚ್ಚು ಸೂಕ್ಷ್ಮವಾಗಿ ಪರಿಕಿಸಿದರೆ ಇವರಿಬ್ಬರ ಆಕಾರ ಮತ್ತು ರೂಪಗಳಲ್ಲಿ ತುಸು ಹೆಚ್ಚುಕಡಿಮೆಗಳಿರುವವವೆಂಬುದು ಸ್ಪಷ್ಟವಾಗದಿರದು. ಆದರೆ ಈ ವ್ಯತ್ಯಾಸಗಳೂ ಅಷ್ಟು ಮಹತ್ತ್ವದವಾಗಿಲ್ಲವೆಂಬುದು ನೆನಪಿನಲ್ಲಿಡಬೇಕಾದ ಮಾತು. ಯಾಕೆಂದರೆ ಈ ತರದ ವ್ಯತ್ಯಾಸಗಳು ಸುಧಾರಿಸಿದವರು ಮತ್ತು ಕಾಡು ಜನರು ಇವರ ನಡುವೆಯೂ ಕಂಡು ಬರುತ್ತವೆ. ಸುಧಾರಿಸಿದ ಮನುಷ್ಯನೊಬ್ಬನನ್ನು ಆಫ್ರಿಕೆಯ ಕಾಡು ಮನುಷ್ಯನ ಸಮೀಪಕ್ಕೆ ನಿಲ್ಲಿಸಿದರೆ, ಅವರಲ್ಲಿರುವ ಭೇದವು ನಮಗೆ ಆಶ್ಚರ್ಯವನ್ನು ಹುಟ್ಟಿ,

ಸುವಂತಹದಾಗಿರುವುದು. ಅದೇಕೆ ? ಒಂದೇ ಕುಲದ ಒಂದೇ ದೇಶದಲ್ಲಿಯ ಮನುಷ್ಯರಿಬ್ಬರನ್ನು ನೋಡಿದರೂ ಕೂಡ ಈ ತರದ ತಾರತಮ್ಯಗಳು ಕಂಡು ಬರದಿರಲಾರವು. ನಾವು ಬೀದಿಯಲ್ಲಿ ಹೋಗುವಾಗ ಕೇವಲ ನೋಟದ ಮೇಲಿಂದಲೇ "ಇವನು ಕಲಿತವನಿರಬೇಕು," "ಇವನು ಮೂಢನಾಗಿರಬೇಕು," ಎಂದು ಹಲವು ಸಾರೆ ತರ್ಕಿಸುವೆವು. ಕಿಂಬಹುನಾ, ವ್ಯಕ್ತಿವ್ಯಕ್ತಿಗೂ ಇಂತಹ ಕಿರುಕುಳ ಭೇದಗಳಿರುವವೆಂದು ಹೇಳಬಹುದು. ವಿಶ್ವವೈಷಮ್ಯ (The law of Universal Dissimilarity) ನಿಯಮವನ್ನು ಹೇಳುತ್ತಿದ್ದಾಗ "ಲೈಬನೀಜ"ನಿಗೆ (ಇವನೊಬ್ಬ ಜರ್ಮನಿಯ ಪಂಡಿತನು) ಅವಿಶಿಷ್ಟವಾದ ಎಂದರೆ ಭೇದವಿಲ್ಲದಂತಹ (ಒಂದೇ ಗಿಡದ) ಎರಡು ಎಲೆಗಳನ್ನು ತೋರಿಸುವೆವೆಂದು ಯಾರೋ ಒಬ್ಬರು ಪಣತೊಟ್ಟು ಹೇಳಿದರಂತೆ. ಅದಕ್ಕೆ ಆ ಪಂಡಿತನು ಸಮ್ಮತಿಸಲು, ಸಂಜೆಯವರೆಗೂ ತೋಟದಲ್ಲಿ ಅಲೆದಾಡಿ ಎಷ್ಟು ಹುಡುಕಿದರೂ ಒಂದೇತೆರನಾಗಿರುವ ಎರಡು ಎಲೆಗಳು ಸಿಗದ್ದರಿಂದ "ಲೈಬನೀಜ" ಪಂಡಿತನ ವಿಶ್ವವೈಷಮ್ಯವನ್ನು ಸುಮ್ಮನೇ ಅವರು ಒಪ್ಪಿಕೊಳ್ಳಬೇಕಾಯಿತೆಂದು ಆಖ್ಯಾಯಿಕೆಯಿರುವುದಷ್ಟೇ ? ಎಂದರೆ ಯಾವ ಎರಡು ವಸ್ತುಗಳೂ ಎಲ್ಲ ಬಾಬುಗಳಲ್ಲಿ ಕೇವಲ ಒಂದೇ ಒಂದಾಗಿರುವುದು ಶಕ್ಯವಿಲ್ಲ. ಹಾಗೆ ಇದ್ದುದೇ ಆದರೆ, ಆ ವಸ್ತುಗಳು ಎರಡೆಂದು ಕರೆಯಲ್ಪಡದೆ ಒಂದೇ ಆಗಿ ಬಿಡುತ್ತಿದ್ದವು. ಎಂದಮೇಲೆ ಕೇವಲ ಒಂದೇತರದ ಕಣ್ಣು, ಕಿವಿ, ಮೊದಲಾದ ಅವಯವಗಳಿರುವುದಂತೂ ಅಶಕ್ಯವೇ ಸರಿ. ಹೆಚ್ಚೇನು ? ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಅಕ್ಕತಂಗಿಯರೂ ಕೂಡ ಹಾಗೆಯೇ ಇರಲಾರರೆಂಬುದನ್ನು ನಾವು ನಿತ್ಯಶಃ ನೋಡುವುದಿಲ್ಲವೇ ? ಆದರೆ ಈ ವೈಯಕ್ತಿಕ ವೈಪರೀತ್ಯಗಳಿಂದ ಅವರ ಮುಖ್ಯ ಹೋಲಿಕೆಯು ಮಾತ್ರ ನಾಮಶೇಷವಾಗಲಾರದಷ್ಟೇ ? ಮತ್ತು ಆ ವೈಶೇಷ್ಯಗಳಾದರೂ ಆ ಆ ವ್ಯಕ್ತಿಯ ಬೆಳೆವಣಿಗೆಯ ಮೇಲೆಯೇ ಅವಲಂಬಿಸಿರುವವೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಆದರೆ ಇದೆಲ್ಲ ಸಾಮ್ಯವು ಏತರಿಂದ ಸಿದ್ಧವಾಗುತ್ತದೆ ? ತುಲನಾತ್ಮಕ ಶಾರೀರಶಾಸ್ತ್ರ ಮತ್ತು ಪಿಂಡಶಾಸ್ತ್ರ (ವೈಯಕ್ತಿಕ ಪಿಂಡದ ಬೆಳೆವಣಿಗೆಯಲ್ಲಿ ಆ ಜಾತಿಯ ಇತಿಹಾಸದ ಪುನರಾವೃತ್ತಿಯೇ ಆಗುತ್ತದೆಯೆಂಬುದನ್ನು ಗರ್ಭದ ಬೆಳವಣಿಗೆಯಿಂದ ತೋರಿಸಿಕೊಡುವ ಶಾಸ್ತ್ರ)ಗಳಿಂದಲೇ ಇಷ್ಟೊತ್ತಿನವರೆಗೆ ನಾವೀ

ಈ ವಿಷಯವನ್ನು ಹೇಗೆ ನಿಶ್ಚಯಿಸುವರು ?

ಪ್ರಶ್ನೆಯನ್ನು ಬಿಡಿಸಲೆಳಸಿದೆವು. ಆದರೆ ಇನ್ನು ಮುಂದೆ ಈ ಸಿದ್ಧಾಂತಗಳಿಗೆ ಪುಷ್ಟಿಯನ್ನು ಕೊಡುವಂತಹ ಕುರುಹುಗಳೇನಾದರೂ ಪೃಥ್ವಿಯ ಗರ್ಭದಲ್ಲಿ ಸಿಗಬಹುದೇ? ಎಂಬುದನ್ನು ನೋಡುವುದು ಅವಶ್ಯವು. ಇವೇ ಮೂರು ಪ್ರಮಾಣ ಗಳನ್ನು ಹೇಕೇಲನು "ಮುಖ್ಯವಾದ ಲೇಖಪ್ರಮಾಣಗಳೆಂ"ದು (Principal Documents) ಕರೆದಿದ್ದಾನೆ.

ಪರ್ಥಸ (Perthes) ನೆಂಬ ಫ್ರೆಂಚ ಪಂಡಿತನು ಸೋಮ (Somme) ನದಿಯ ಕೊಳ್ಳದಲ್ಲಿ ಈ ತರದ ಪ್ರಯೋಗಗಳನ್ನು ಎಲ್ಲಕ್ಕೂ ಮೊದಲು ಸುರುವುಮಾಡಿದನು. ಅಲ್ಲಿ ಅವನಿಗೆ ಮ್ಯಾಮಥ (Mammoth), ರೆನೋಸಿರಸ್ (Rhinoceros) ಮತ್ತು ಉಳಿದ ಎಷ್ಟೋ ತರದ ಪ್ರಾಣಿಗಳ ಅವಶೇಷಗಳು ದೊರೆತವು; ಹಾಗೂ ವಿಚಿತ್ರ ಆಕಾರವುಳ್ಳ ಬೆಣಚಿ ಕಲ್ಲಿನ ಎಷ್ಟೋ ವಸ್ತುಗಳೂ ಅಲ್ಲಿ ಕಂಡುಬಂದವು. ಇವಕ್ಕೆಲ್ಲ "ಬೆಕ್ಕಿನ ನಾಲಿಗೆ" ಗಳೆಂದು ಅವನು ಹೆಸರು ಕೊಟ್ಟಿದ್ದಾನೆ. (ಯಾಕೆಂದರೆ ಅವೆಲ್ಲ ಬಹುಶಃ ಬೆಕ್ಕಿನ ನಾಲಿಗೆಯನ್ನು ಹೋಲುತ್ತವೆಂದು ಬೇರೆ ಹೇಳಬೇಕಾಗಿಲ್ಲ.) ಮುಂದೆ ಇ. ಸ. ೧೮೪೧ ರಲ್ಲಿ ಕೊಯ್ಯುವುದಕ್ಕಾಗಿ ಮನುಷ್ಯನ ಹಸ್ತದಿಂದಲೇ ನಿರ್ಮಿತವಾಗಿರ ಬಹುದಾದ ಒಂದು ಬೆಣಚಿಕಲ್ಲಿನ ಆಯುಧವು ಅವನಿಗೆ ಸಿಕ್ಕಿತು. ಅವನು ಇವುಗ ಳನ್ನೆಲ್ಲ ಪರೀಕ್ಷೆಮಾಡಿ ೧೮೪೭ರಲ್ಲಿ ಈ ಬಗ್ಗೆ ಒಂದು ಪುಸ್ತಕವನ್ನೇ ಬರೆದನು. ಆದರೆ ಅತ್ತಕಡೆಗೆ ಯಾರೂ ಲಕ್ಷವನ್ನೀಯಲಿಲ್ಲ. ಆದರೂ ಮುಂದೆ ಕೆಲವು ವರುಷಗಳಾದಮೇಲೆ, ಇದೇ ತರದ ಇನ್ನೂ ಹಲವು ಪ್ರಯತ್ನಗಳು ಮಾಡಲ್ಪಟ್ಟ ನಂತರ, ಈ ಶೋಧಗಳಲ್ಲಿ ಏನೋ ತಥ್ಯವಿರುವುದೆಂದು ಶಾಸ್ತ್ರಜ್ಞರು ಒಪ್ಪಿಕೊಳ್ಳ ಲಾರಂಭಿಸಬೇಕಾಯಿತು.

"ಪರ್ಥಸ" ನೆಂಬವನ ಶೋಧಗಳು

ಮುಂದೆ ಥೇಮ್ಸ ಮೊದಲಾದ ನದಿಗಳ ಕೊಳ್ಳಗಳಲ್ಲಿಯೂ ಇದೇ ತರದ ಅವಶೇಷಗಳು ಸಿಕ್ಕಮೇಲೆ ಆಗಿನ ಪಂಡಿತರೆಲ್ಲ ಈ ವಿಷಯದ ಬಗ್ಗೆ ವಿಶೇಷ ಅಭಿರುಚಿಯನ್ನು ವ್ಯಕ್ತಮಾಡಹತ್ತಿದರು. ಎಷ್ಟೋ ಜನರು ಅದಕ್ಕಾಗಿಯೇ ಟೊಂಕಕಟ್ಟಿ ಹಗಲಿರುಳೂ ಅದರ ಅಭ್ಯಾಸವನ್ನೇ ಮಾಡಹತ್ತಿದರು. ಅವರೇ ಮುಂದೆ ಇವೆಲ್ಲ ವಸ್ತುಗಳು ಪ್ರಾಚೀನ ಶಿಲಾಯುಗದ (Paleolithic Age) ಅವಶೇಷಗಳೆಂದು ನಿಶ್ಚಯಿಸಿದರು. ಇವು ಬಹುಶಃ ಉಸುಕು

ಬೇರೆ ಶೋಧಗಳು

ಅಥವಾ ಇಟ್ಟಿಗೆಗಳಿದ್ದ ನೆಲದ ಹೊಟ್ಟೆಯಲ್ಲಿ ಸಿಕ್ಕುತ್ತವೆ. ಮತ್ತು ಇವುಗಳೊಡನೆ ಆ ಕಾಲದ ಪ್ರಾಣಿಗಳ ಅವಶೇಷಗಳೂ ತಪ್ಪದೇ ಸಿಗುವವೆಂಬ ಮಾತು ಬಹು ಮಹತ್ತ್ವದ್ದು. ಆದರೆ ಇವುಗಳಿಂದ ಆ ಕಾಲದವರ ಅಶಿಕ್ಷಿತಸ್ಥಿತಿಯು ಮಾತ್ರ ಒಡೆದುಕಾಣದಿರಲಾರದು. ಈಗಿದ್ದ ಜನರಲ್ಲಿ ಆಸ್ಟ್ರೇಲಿಯಾದೊಳಗಿನ ಕಾಡು ಜನರು ಆಗಿನವರ ಜೋಡಿಗೆ ಬರಬಹುದು. ದಪ್ಪಾದ ಕೊಡಲಿಗಳು, ಒಂದು ಮಗ್ಗಲಿಗೆ ಸಣ್ಣಾಗುವಂತೆ ಮಸೆದು ಮಾಡಿದ ಸಣ್ಣ ಕಲ್ಲುಗಳು, ತೊಗಲು ತಯಾರುಮಾಡಲಿಕ್ಕೆ ಉಪಯೋಗಿಸಲ್ಪಡಬಹುದಾದ Scrape ದಂತಹ ವಸ್ತುಗಳು, ತೂತು ತೆಗೆಯಲಿಕ್ಕೆ ಬೇಕಾಗುವಂತೆ ಮನೆಮಾಡಲ್ಪಟ್ಟ ಬೆಣಚ ಕಲ್ಲುಗಳು ಮತ್ತು hache ಅಥವಾ ಸೆಲ್ಟ್ (Celts) ಎಂಬ ವಸ್ತುಗಳೇ ಆ ಕಾಲದ ಮುಖ್ಯವಾದ ಗುರುತುಗಳು. ಈ hache ದಿಂದಲೇ ಮುಂದೆ ನವಶಿಲಾಯುಗದ (Neolithic Age) ಜನರು ಕೊಡಲಿ, ಬಾಚಿ, ಉಳಿ ಮತ್ತು ಕೀಲಗಳನ್ನು ಮಾಡಿಕೊಂಡರೆಂದು ಹೇಳಬಹುದು. ಆದರೆ ಅವನ್ನು ಬಹು ಅಡ್ಡತಿಡ್ಡಾಗಿ ಕೆತ್ತಿದ್ದಾರೆ. ಸಾಣೇಹಿಡಿದ ಲಕ್ಷಣಗಳಾಗಲಿ, ಬೆಳಗಿದ (Polish) ಲಕ್ಷಣಗಳಾಗಲಿ ಕಂಡು ಬರುವುದಿಲ್ಲ. ಮಂಡವಾದ ಕಡೆಯಿಂದ ಅವನ್ನು ತಮ್ಮ ಕೈಯಲ್ಲಿ ಹಿಡಿದುಕೊಂಡು ಚೂಪಾದ ಮಗ್ಗಲಿನಿಂದ ಅವರು ತಮ್ಮ ಕೆಲಸಗಳನ್ನು ಮಾಡಿಕೊಳ್ಳುತ್ತಿದ್ದರು. ಅವಕ್ಕೆ ಈಗಿನಂತೆ ಕಟ್ಟಿಗೆಯ ಹಿಡಿಕೆಗಳಿರಲಿಲ್ಲ. ಆದರೆ ನಾವು ನವಶಿಲಾಯುಗಕ್ಕೆ ಬಂದೆವೆಂದರೆ ಇದರ ವಿಪರೀತವಾದ ಸ್ಥಿತಿಯು ಗೋಚರವಾಗುವುದು. ಮೇಲೆ ಹೇಳಿದ ವಸ್ತುಗಳಿಗೆಲ್ಲ ನಿರಪವಾದವಾಗಿ ಹಿಡಿಕೆಗಳಿರುವವೆಂದು ಕಂಡುಬರುತ್ತದೆ. ಈ hache ಗಳು ಕಪಿಗಳ ಮುಂದಿನ ಸುಧಾರಣೆಯನ್ನು ತೋರಿಸುತ್ತವೆ. ಓರಾಂಗ ಅಥವಾ ಚಿಂಪಂಜಿಯೂ ಕೂಡ ತೆಂಗಿನ ಕಾಯಿಗಳನ್ನು ಒಡೆಯಲಿಕ್ಕಾಗಲಿ, ನೆಲದೊಳಗಿಂದ ಬೇರುಗಳನ್ನು ಕೆದರಿ ತೆಗೆಯುವುದಕ್ಕಾಗಲಿ, ಅಥವಾ ಕೊಳೆತ ಗಿಡಗಳ ಹೊದರುಗಳಿಂದ ಹುಳಗಳನ್ನು ಕಿತ್ತು ತೆಗೆಯುವುದಕ್ಕಾಗಲಿ, ಸ್ವಾಭಾವಿಕವಾಗಿಯೇ ನೆಲದಮೇಲೆ ಸಿಗಬಹುದಾದ ಕಲ್ಲುಗಳಲ್ಲಿ ತನಗೆ ಉಪಯುಕ್ತವಾದವುಗಳನ್ನು ಆರಿಸಿಕೊಳ್ಳಬಹುದಾಗಿತ್ತು. ಪ್ರಾಚೀನ ಶಿಲಾಯುಗದ ಜನರು ಇದೇ ತರದ ಕಲ್ಲುಗಳಿಗೆ ತುಸು ಕೃತ್ರಿಮರೂಪುಗೊಟ್ಟು ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳುತ್ತಿದ್ದರೆಂದು ತಿಳಿದರೆ ತಪ್ಪಾಗದು. ಆದರೆ ಇವು ಮನುಷ್ಯಕೃತವೇ ಇರಬೇಕೆಂಬ ಬಗ್ಗೆ ಸಂದೇಹವಿರಲಿಕ್ಕೆ ಆಸ್ಪದವಿಲ್ಲ.

ಈಗ್ಯೂ ಕೂಡ ಆಸ್ಟ್ರೇಲಿಯಾದೊಳಗಿನ ಕಾಡುಮನುಷ್ಯರು ಉಪಯೋಗಿಸುತ್ತಿರುವ ಕಲ್ಲಿನ ಆಯುಧಗಳನ್ನು ಇವುಗಳೊಡನೆ ಕೂಡಿಸಿ ತಂದಿಟ್ಟರೆ ಅವೆರಡನ್ನೂ ವಿಂಗಡಿಸಿ ಕೊಡುವುದು ಬಲು ಕಠಿಣವಾಗುತ್ತದೆಂದು ಕಂಡುಬಂದಿದೆ. ಆದರೆ ಅವನ್ನೆಲ್ಲ ಉತ್ತಮರೀತಿಯಿಂದ ವ್ಯವಸ್ಥೆಪಡಿಸಿಟ್ಟರೆ, ಲೋಹಯುಗಕ್ಕೆ (Iron Age) ತುಸು ಹಿಂದಿನ ಹದನವಾದ ಉತ್ತಮವಾದ ಕೊಡಲಿ, ಮತ್ತು ಬಾಣದ ತಲೆಗಳು ಮೊದಲಾದ ವಸ್ತುಗಳೆಲ್ಲ ಈ (ಹಳೆಯ ಶಿಲಾಯುಗದ) ಪ್ರಾಚೀನವಸ್ತುಗಳಿಂದಲೇ ಕ್ರಮೇಣವಾಗಿ ಸುಧಾರಣೆಹೊಂದಿ ಅಸ್ತಿತ್ವದಲ್ಲಿ ಬಂದಿರಬೇಕೆಂಬ ಮಾತು ನಿಚ್ಚಳವಾಗದಿರದು.

ಮಾನವರ ಎಲುಬುಗಳು ಮಾತ್ರ ಇಂತಹ ನದಿಗಳ ಕೊಳ್ಳಗಳಲ್ಲಿ ಸಿಕ್ಕುವುದು ಶಕ್ಯವಿಲ್ಲ. ಅವನ್ನು ನಾವು ಗುಹೆಗಳಲ್ಲಿಯೇ ಹುಡುಕಬೇಕಾಗುವುದು. ಇಂತಹ ಗುಹೆಗಳನ್ನಾದರೂ ಜರ್ಮನಿ, ಇಂಗ್ಲಂಡ, ಫ್ರಾನ್ಸ್, ಬೆಲ್ಜಿಯಮ್ ಮೊದಲಾದ ದೇಶಗಳಲ್ಲಿ ಎಷ್ಟೋ ಕಡೆಗೆ ಅಗಿದು ತೆಗೆದಿದ್ದಾರೆ. ಅವುಗಳಲ್ಲಿ ವಿಶೇಷ ಸಂಸ್ಕಾರ ಹೊಂದಿದ ಶಿಲಾಯುಧಗಳಾಗಲಿ, ಗಡಿಗೆಮಡಿಕೆಗಳಾಗಲಿ ಒಂದಾದರೂ ಕೂಡ ಸಿಕ್ಕುವುದಿಲ್ಲೆಂದು ಬೇರೆ ಹೇಳಬೇಕಾಗಿಲ್ಲ. ಅಲ್ಲಿ ದೊರೆಯುವ hache ಚೂರಿ ಮೊದಲಾದ ಕಲ್ಲಿನ ವಸ್ತುಗಳೂ, ಮೀನಹೊಡೆಯುವ ಬರ್ಚಿಯ ತಲೆ, ಮೊಳೆ, ಶಲಾಕೆ, ಮತ್ತು ಸೂಜಿ ಮೊದಲಾದ ಎಲುಬಿನ ವಸ್ತುಗಳೂ ಪ್ರಾಚೀನ ಶಿಲಾಯುಗವನ್ನೆ ತೋರಿಸುತ್ತವೆ. ಇವುಗಳ ಸಂಗಡ ಆ ಕಾಲದ ಪ್ರಾಣಿಗಳೂ ಸಿಕ್ಕುತ್ತವೆ. ಮ್ಯಾಮಥ್, ಉಣ್ಣೆಯುಳ್ಳ ರ್ಹಿನೋಸಿರಸ್, ಮತ್ತು ಗುಹೆಗಳೊಳಗಿರುವ ಕರಡಿಗಳು ಸಿಕ್ಕಲ್ಲೆಲ್ಲ ಪ್ರಾಚೀನಶಿಲಾಯುಗದ ಕಲ್ಲಿನ ವಸ್ತುಗಳು ಸಿಕ್ಕುವವೆಂದೂ ಇಂತಹ ಕಲ್ಲಿನ ವಸ್ತುಗಳು ಸಿಗುವಲ್ಲೆಲ್ಲ ಆ ಪ್ರಾಣಿಗಳು ಸಿಕ್ಕುವವೆಂದೂ ಶಾಸ್ತ್ರಜ್ಞರು ಸಾಧಾರಣವಾಗಿ ಸಿದ್ಧಮಾಡಿದ್ದಾರೆ.

ಮನುಷ್ಯನ ಎಲುಬುಗಳು

ಇಂತಹ ಗುಹೆಗಳು ಫ್ರಾನ್ಸ ಮತ್ತು ಬೆಲ್ಜಿಯಮ್ ದೇಶಗಳಲ್ಲಿ ಹೇರಳವಾಗಿ ಸಿಕ್ಕುವವೆಂದು ಹೇಳಬಹುದು. ಮನುಷ್ಯನ ಎಲುಬುಗಳೂ, ಅವನು ಉಪಯೋಗಿಸುತ್ತಿದ್ದ ವಸ್ತುಗಳೂ, ಮತ್ತು ಆ ಕಾಲದ ಪ್ರಾಣಿಗಳೂ ಈ ಪ್ರದೇಶಗಳಲ್ಲಿ ಒಂದೇ ಕಡೆಗೆ ಸಿಕ್ಕುವುದರಿಂದ ಅಲ್ಲಿ ಶಾಸ್ತ್ರಜ್ಞರು ಮಾಡಿದ

ಪ್ರಾಚೀನ ಶಿಲಾಯುಗದ ಜನರ ಅವಶೇಷಗಳು

ಪ್ರಯತ್ನಗಳು ಹೆಚ್ಚು ಸಫಲವಾಗಿವೆ. ಮುಂದೆ ರೇನ್‌ಡಿಯರ ಎಂಬ ಚಿಗರಿಯು ವಿಶೇಷವಾಗಿ ಕಂಡುಬರುತ್ತದೆ. ಅವರ ಕೋಡುಗಳಿಂದ ಮನುಷ್ಯನು ತನ್ನ ಆಯುಧಗಳನ್ನು ಸಿದ್ಧಮಾಡಿಕೊಳ್ಳುತ್ತಿದ್ದನು. ಬಾಣ ಮತ್ತು ಬರ್ಚಿಗಳ ತುದಿಗಳೂ, ಮೀನಗಳನ್ನು ಹೊಡೆಯುವ ಶಸ್ತ್ರಗಳೂ, ಶಲಾಕೆಗಳೂ, ಚರ್ಮ ವನ್ನು ಹೊಲಿಯುವ ಸೂಜಿಗಳೂ ಎಲುಬುಗಳಿಂದ ಮಾಡಲ್ಪಟ್ಟವು, ಅವುಗಳಲ್ಲಿ ಮೊದಲಿನಕಿಂತ ತುಸು ಸುಧಾರಣೆಯಾಗಿದೆಯೆಂಬುದು ಕಂಡುಬರುವಂತಿದೆ. ಇದೆಲ್ಲಕ್ಕಿಂತ ಹೆಚ್ಚು ವಿಚಿತ್ರವಾದ ಸಂಗತಿಯೆಂದರೆ ಸದ್ಯಕ್ಕಿನ ಎಸ್ಕಿಮೋ ಜನರಂತೆ ಆ ಕಾಲದ ಜನರಾದರೂ ಕಲಾಪ್ರಿಯರಾಗಿದ್ದರೆಂಬುವದು. ಬೆಣಚಿ ಕಲ್ಲಿನ ಹದನವಾದ ಮೊನೆಯಿಂದ ಅವರು ಕಲ್ಲುಗಳ ಮೇಲೂ ಎಲುಬುಗಳ ಮೇಲೂ ಚಿತ್ರಗಳನ್ನು ಕೊರೆಯುತ್ತಿದ್ದರು. ಮತ್ತು ಕಲ್ಲಿನ ಚೂರಿಗಳಿಂದ ಎಲುಬು ಮತ್ತು ಕೋಡುಗಳನ್ನು ಕೊರೆದು ತಾವು ಬೇಟೆಯಾಡುತ್ತಿದ್ದ ಪ್ರಾಣಿ ಗಳ ಮತ್ತು ತಮಗೆ ಆಶ್ಚರ್ಯಮಯವಾಗಿ ಕಂಡುಬಂದ ಬೇರೆ ವಸ್ತುಗಳ ಮೂರ್ತಿ ( image ) ಅಥವಾ ಗೊಂಬೆಗಳನ್ನು ಸಿದ್ಧಪಡಿಸುತ್ತಿದ್ದರು. ಈ ಕೆಲಸವನ್ನು ಅವರು ಬಹು ಉತ್ಕೃಷ್ಟವಾಗಿ ಮಾಡಿರುವರೆಂದು ಹೇಳಬಹುದು. ಆ ಚಿತ್ರಗಳನ್ನೂ ಗೊಂಬೆಗಳನ್ನೂ ನೋಡಿದರೆ, ಅದರಿಂದ ಅವರು ಬರೆಯ ಬೇಕಾಗಿದ್ದ ಅಥವಾ ಕೆತ್ತಬೇಕಾಗಿದ್ದ ವಸ್ತುಗಳಾವವೆಂಬುವುದರ ಬಗ್ಗೆ ಎಳ್ಳಷ್ಟಾ ದರೂ ಸಂದೇಹವುಳಿಯಲಾರದು. ಅವುಗಳಲ್ಲಿ ಮ್ಯಾಮಥ, ಗುಹೆಯ ಕರಡಿ, ರೇನಡೀಯರವೆಂಬ ಚಿಗರಿ, ಕಾಡುಕುದರೆ, ಕಾಡೆತ್ತುಗಳೇ ಮುಖ್ಯವಾದವು ಗಳು. ಮನುಷ್ಯರ ಚಿತ್ರಗಳನ್ನೂ ಅವರು ತೆಗೆಯುತ್ತಿದ್ದರು. ಆದರೆ ಅವಷ್ಟು ಚೆನ್ನಾಗಿಲ್ಲ. ಉಳಿದ ಪ್ರಾಣಿಗಳ ಇಷ್ಟು ಸುಂದರವಾದ ಚಿತ್ರಗಳನ್ನು ತೆಗೆಯ ಬಹುದಾದ ಆ ಜನರು ಮನುಷ್ಯರ ಚಿತ್ರಗಳನ್ನು ಮಾತ್ರ ಇಷ್ಟೇಕೆ ಹುಡು ಗಾಡಿಕೆಯಿಂದ ತೆಗೆದರೋ ತಿಳಿಯದು. ಆದರೆ ಇಷ್ಟರಿಂದ ಆ ಜನರು ಬರ್ಚಿ ಮತ್ತು ಶಲಾಕೆಗಳನ್ನು ಕೈಯಲ್ಲಿ ಹಿಡಿದುಕೊಂಡು ಆ ಪ್ರಾಣಿಗಳನ್ನು ಬೇಟೆ ಯಾಡುತ್ತಿದ್ದರೆಂಬುವುದು ಮಾತ್ರ ಸಿದ್ಧವಾಗುವಂತಿದೆ. ಆದರೂ ಇವುಗಳ ಮೇಲಿಂದ ( ಚಿತ್ರಗಳ ಮೇಲಿಂದ ) ಆ ಕಾಲದ ಜನರು ಹೇಗಿರಬಹುದೆಂಬುವು ದನ್ನು ಮಾತ್ರ ಕಲ್ಪಿಸುವುದು ಕಷ್ಟವಿದೆ. ಅದಕ್ಕಾಗಿ ನಾವು ಬೇರೆ ಪ್ರಮಾಣ ಗಳ ಕಡೆಗೇ ಹೊರಳಬೇಕಾಗುವುದು.

ಎಷ್ಟೋ ಗುಹೆಗಳಲ್ಲಿ ತಲೆಬುರುಡೆಗಳೂ, ಅಚ್ಚಳಿಯದಿದ್ದ ಸಂಪೂರ್ಣವಾದ ಅಸ್ಥಿಪಂಜರಗಳೂ ಸಿಕ್ಕಿರುವವು. ಎಷ್ಟೋ ಗುಹೆಗಳು, ಒಂದೊಂದು ಮನೆತನದ ಜನರ ಶವಗಳಿಗೆಲ್ಲ ಆಧಾರವಾಗಿರಬೇಕೆಂದೂ ಎಷ್ಟೋ ಜನರು ಕಲ್ಲುಗಳ ಹೊಡೆತಕ್ಕೆ ಸಿಕ್ಕು ಚಿಬ್ಬಿಯಾಗಿರುವರೆಂದೂ, ಎಷ್ಟೋ ಜನರು ನೀರಿನ ಸೆಳವಿಗೆ ಸಿಕ್ಕು ಪ್ರಾಣಬಿಟ್ಟಿರಬೇಕೆಂದೂ, ಬೇರೆ ಕೆಲವರು ಅಗಾಧವಾದ ಕೆಸರಿನಲ್ಲಿ ಸಿಕ್ಕು ಜೀವಕಳೆದುಕೊಂಡಿರಬೇಕೆಂದೂ ಇವುಗಳಮೇಲಿಂದ ಸಿದ್ಧವಾಗುವುದು. ಶೋಧಿಸಿ ತೆಗೆದ ಮನುಷ್ಯನ ಇಂತಹ ಅವಶೇಷಗಳಲ್ಲಿ ಮೂರು ಮುಖ್ಯವಾಗಿವೆಯೆಂದು ಹೇಳಬಹುದು. ಇ. ಸ. ೧೮೮೬ ರಲ್ಲಿ ಬೆಲ್ಜಿಯಮದೊಳಗಿನ ಒಂದು ಗುಹೆಯಲ್ಲಿ ಒಂದು ಹೆಣ್ಣು ಒಂದು ಗಂಡು ಹೀಗೆ ಎರಡು ಅಸ್ಥಿಪಂಜರಗಳು ಕೂಡಿಯೇ ದೊರೆತಿರುತ್ತವೆ. ಅವುಗಳ ಸಂಗಡ ಮೇಲೆ ವರ್ಣನೆ ಮಾಡಿದಂತಹ ಎಷ್ಟೋ ವಸ್ತುಗಳೂ ದೊರೆತಿರುತ್ತವೆ. ಅವುಗಳ ಕಣ್ಣುಗಳ ಮೇಲಿನ ಎಲುಬು ( ಹಣೆಯು ಮುಂದಿನ ಎಲುಬು ) ಕಣ್ಣುಗಳಿಗಿಂತ ಬಹಳೇ ಎತ್ತರವಾಗಿದೆ. ಆದರೆ ಹಣೆಯು ಹಿಂದೆ ಹೋಗಿದೆ. ದವಡೆಗಳು ದೊಡ್ಡವು.-ಇವೇ ತರದ ಇನ್ನೂ ಎಷ್ಟೋ ಲಕ್ಷಣಗಳ ಮೇಲಿಂದ ಅವು ಕಪಿಮಾನವರ (Ape-man)ಎಂದರೆ ಅರ್ಧಕಪಿಯೂ ಅರ್ಧಮಾನವನೂ ಆದ ಪ್ರಾಣಿಗಳ ಅಸ್ಥಿಗಳಿರಬೇಕೆಂದು ತರ್ಕಿಸಿದ್ದಾರೆ. ಪ್ರುಸಿಯಾದೊಳಗಿನ ನಿಯಾಂಡರ ( Neander ) ಕೊಳ್ಳದಲ್ಲೊಂದು ತಲೆಬುರುಡೆಯು ಸಿಕ್ಕಿದೆ. ಅದೂ ಕಪಿಮಾನವನದೆಂದು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಇವೆಲ್ಲಕ್ಕಿಂತ ಮಹತ್ತ್ವವಾದ ಅವಶೇಷವು ಸನ್ ೧೮೯೧ರಲ್ಲಿ ಜಾವಾದ್ವೀಪದೊಳಗೆ ಸಿಕ್ಕ ತಲೆಬುರುಡೆಯೆಂದು ಹೇಳಬಹುದು. ಇದನ್ನು ಶಾಸ್ತ್ರಜ್ಞರು ಪರಿಕಿಸಿ, ಇದಕ್ಕೆ "ಎದ್ದು ನಿಂತ ಕಪಿಮಾನವ"ನೆಂದು ಹೆಸರು ಕೊಟ್ಟಿದ್ದಾರೆ. ಮನುಷ್ಯ ಮತ್ತು ಕಪಿಗಳು ಸಾಮಾನ್ಯನಾದ ಆವುದೋ ಒಬ್ಬ ಪೂರ್ವಜನಿಂದ ಹುಟ್ಟಿ, ಬೆಳೆದು, ಇಲ್ಲಿಯೇ ಬೇರೆಬೇರೆಯಾದರೆಂದು ಹಲವರು ಇದಕ್ಕೂ ಮೊದಲೇ ತರ್ಕಿಸಿದ್ದರು. ಆದುದರಿಂದ ಈ ತಲೆಬುರುಡೆಗೆ ಇಷ್ಟು ಮಹತ್ತ್ವವು ಬಂದಿರುವುದೆಂದು ಹೇಳಬಹುದು.. ಎಂದರೆ ಮನುಷ್ಯ ಮತ್ತು ಕಪಿಗಳಿಗೆ ತಂದೆಯಾದ ಪ್ರಾಣಿಯು ಈ ಜಾವಾದಲ್ಲಿಯೇ ಬದುಕಿರಬೇಕೆಂದು ಅವರೆಲ್ಲರೂ ಅಭಿಪ್ರಾಯಬಡುತ್ತಾರೆ. ಮೇಲೆ ವಿವರಿಸಿದ ಮೂರೂ ಅಸ್ಥಿಗಳು ಮನುಷ್ಯರವಿರಬೇಕೆಂದು ಎಲ್ಲರೂ ಒಪ್ಪುತ್ತಾರೆ. ಆದರೆ

ಮಾನವನ ಜನ್ಮಭೂಮಿ

ಜಾವಾದೊಳಗೆ ದೊರಕಿದ ಮಾನವನೇ ಮನುಷ್ಯ ಜಾತಿಯ ಮೂಲಪುರುಷನಿರಬೇಕೆಂದು ಕೆಲವರ ತರ್ಕವಿದೆ. " ಒಂದು ದೃಷ್ಟಿಯಿಂದ ಇಷ್ಟು ದಿನಗಳವರೆಗೆ ನಾವು ಹುಡುಕುತ್ತಿದ್ದ 'ಆದಿಮಾನವ'ನು ಪ್ಲಾಯೋಸೀನಕಾಲದ ಈ ಜಾವಾದ ರಹಿವಾಸಿಯೇ ಎಂದು ಹೇಳಬಹುದು. ಮತ್ತು ಇಂಡೋ–ಮಾಲಾಗೇಸಿಯನ್‌ಗಳ ನಡುವಿರುವ ಉಷ್ಣಕಟಿಬಂಧದೊಳಗಿನ ಪ್ರದೇಶವೇ ಮಾನವವಂಶದ ತೊಟ್ಟಿಲು ಭೂಮಿಯೆಂದೂ ಧೈರ್ಯದಿಂದ ಹೇಳಬಹುದು " ( Easy outline of Evolution p 49. ) " ಈ ತಲೆಬುರುಡೆಯು ಚಿಂಪಂಜಿ ಮತ್ತು ತೀರ ಕೆಳಗಿನ ತರಗತಿಯ ಮಾನವನ ಎಂದರೆ 'ನಿಯೆಂಡರಥಾಲ'(Neanderthal) ಮನುಷ್ಯನ ನಡುವಿನದೊಂದು ಅವಸ್ಥೆಯನ್ನು ತೋರಿಸುತ್ತದೆಂದು ಹೇಳಬಹುದು. ಪ್ರೊ. ಹೇಕೆಲ್ಲರು ಹೇಳುವಂತೆ ಈ ಪ್ರಾಣಿಯು ದೀರ್ಘಕಾಲದ ವರೆಗೆ ಹುಡುಕಲ್ಪಟ್ಟಿದ್ದ ಕಳೆದು ಹೋದ ಕೊಂಡಿ ( Missing link ) ಯೇ ಆಹುದೆಂದು ಹೇಳಬಹುದು. ಎಂದರೆ ಮನುಷ್ಯಜಾತಿಯು ಅಲ್ಲಿಂದಲೇ ಸುರುವಾಗಿರಬೇಕೆಂಬುವುದನ್ನು ಅದು ತೋರಿಸುತ್ತದೆ. " ಎಂದರೆ ಮನುಷ್ಯನ ವೈಶಿಷ್ಟ್ಯಗಳಾದ (೧) ನೀಟಾಗಿ ಎರಡು ಕಾಲುಗಳಿಂದ ನಡೆಯುವುದು. (೨) ಸ್ಪಷ್ಟವಾಗಿ ಮಾತನಾಡುವುದು, ಮತ್ತು (೩) ವಿಚಾರಶಕ್ತಿಗಳೆಲ್ಲ ಇಲ್ಲಿಂದಲೇ ಸುರುವಾದವೆಂದು ಹೇಳಬಹುದು.

ಆದರೆ ಎಚ್. ಜಿ. ವೆಲ್ಸರವರು ಇದಕ್ಕೆ ತುಸು ಭಿನ್ನವಾದ ಅಭಿಪ್ರಾಯವುಳ್ಳವರಾಗಿರುವಂತೆ ತೋರುತ್ತದೆ. ನಿಯಾಂಡರಥಾಲದ ಮನುಷ್ಯರು ನಿಜವಾದ ಮನುಷ್ಯರಲ್ಲವೆಂದು ಅವರ ಅಭಿಪ್ರಾಯವಿದೆ. ನಿಯಂಡರಥಾಲ ಮತ್ತು ರ್ಹೊಡೇಸಿಯನ್ ಮನುಷ್ಯರು ಸುಮಾರು ೫೦–೬೦ ಸಾವಿರ ವರುಷಗಳ ಹಿಂದೆ ಇದ್ದರೆಂದು ಅವರು ತಿಳಿಯುತ್ತಾರೆ. ಇವರನ್ನು ಅವರು Sub-men ಎಂದರೆ ಕೆಳಗಿನ ಮಾನವರೆಂದೂ ( ಅರ್ಧಕಪಿ ಮತ್ತೂ ಅರ್ಧಮಾನವರ ಮುಂದಿನವರಾದರೂ ಇವರು ಇನ್ನೂ ಮನುಷ್ಯತ್ವವನ್ನು ಮುಟ್ಟಿರಲಿಲ್ಲವೆಂದು ಇದರ ಅರ್ಥವು. ) ಕರೆದಿದ್ದಾರೆ. ಸುಮಾರು ೩೦೦೦೦ ವರುಷಗಳ ಪೂರ್ವದಲ್ಲಿ "ನಿಜವಾದ ಮಾನವರು" ಹುಟ್ಟಿದರೆಂದು ಅವರು ಬರೆದಿದ್ದಾರೆ. " ನಿಜವಾದ ಮನುಷ್ಯರು " ಪ್ರಾರಂಭದಲ್ಲಿ ಎಲ್ಲಿ ಹುಟ್ಟಿದರೆಂಬುದನ್ನು ನಿಶ್ಚಯಿಸಿ ಹೇಳುವುದು ಶಕ್ಯವಿಲ್ಲೆಂಬುದನ್ನು ಒಪ್ಪಿ

ವೆಲ್ಸರವರ ಭಿನ್ನವಾದ ಅಭಿಪ್ರಾಯವು.

ಕೊಂಡು, ಮುಂದೆ ಬಹುಶಃ ಪಶ್ಚಿಮ ಯುರೋಪಖಂಡದಲ್ಲಿ ಎಂದರೆ ಸ್ಪೇನ ದೇಶದಲ್ಲಿ ಮನುಷ್ಯನ ಉತ್ಪತ್ತಿಯಾಯಿತೆಂದು ಅವರು ಹೇಳುತ್ತಾರೆ. (A short History of the world Chap. VIII–XI)

ಸುಮಾರು ೧೫–೧೬ ಸಾವಿರ ವರುಷಗಳ ಹಿಂದೆ ನವೀನ ಶಿಲಾಯುಗವು ಸುರುವಾಯಿತು. ಆ ಕಾಲದಲ್ಲಿ ಶಿಲಾಕಲೆಯು ಕಲ್ಪನಾತೀತವಾಗಿ ಬೆಳೆದಿತ್ತು.

ನವಶಿಲಾಯುಗವು.

ಅವರ ಜಾಣತನವು ಸಂಪೂರ್ಣತೆಯ ಮೇರೆಯನ್ನೇ ಮೀರಿತ್ತೆಂದರೂ ಸಲ್ಲುವಂತಿದೆ. ಮುಂದೆ ಲೋಹಯುಗದಲ್ಲಿ ಲೋಹದಿಂದ ಮಾಡಿಕೊಂಡ ಕೆಲಸಗಳನ್ನೆಲ್ಲ ಅವರು ಈ ಕಾಲದಲ್ಲಿ ಶಿಲೆಯಿಂದಲೇ ಮಾಡಿಕೊಳ್ಳುತ್ತಿದ್ದರು. ಅವರ ಕಲ್ಕೆಲಸವು ಉತ್ಕೃಷ್ಟವಾಗಿತ್ತು. ಅವನ್ನವರು ಸಾಣೇ ಹಿಡಿದು ಎಷ್ಟೋ ಸಾರೆ ಮಿರುಗುಹಾಕುತ್ತಿದ್ದರು. ಮುಂದೆ ಇದೇ ನವಶಿಲಾಯುಗದ ಜನರು ಯುರೋಪುದೇಶಕ್ಕೆ ಬಹುಶಃ ಪೂರ್ವದಿಂದಾಗಲಿ, ದಕ್ಷಿಣದಿಂದಾಗಲಿ, ಅಥವಾ ಎರಡೂ ಕಡೆಯಿಂದಾಗಲಿ, ಬಂದರೆಂದು ತರ್ಕಿಸಲ್ಪಟ್ಟಿದೆ. ಅವರು ಸುಧಾರಣೆಯ ಎಷ್ಟೋ ಮೆಟ್ಟಲುಗಳನ್ನೇರಿದ್ದರು. ನಾಯಿ, ಕುದುರೆ, ಎತ್ತು, ಕುರಿ, ಆಡು, ಹಂದಿ ಮೊದಲಾದ ಎಲ್ಲ ಸಾಕಿದ ಪ್ರಾಣಿಗಳೂ ಅವರ ಬಳಿಯುಲ್ಲಿದ್ದವು. ಕೃಷಿಮಾಡಿ ಬೆಳೆಸಿದ ಎಷ್ಟೋ ಧಾನ್ಯಗಳೂ ಹಣ್ಣುಹಂಪಲಗಳೂ ಕೂಡ ಅವರಿಗೆ ಗೊತ್ತಿದ್ದವು. ಪಾಕವಿದ್ಯೆಯನ್ನವರು ಅರಿತವರಾಗಿದ್ದರು. ನೂಲುತೆಗೆಯುವುದು, ನೇಯುವುದು, ಗಡಿಗೆಮಡಿಕೆಗಳನ್ನು ಮಾಡುವುದು ಇವೆಲ್ಲ ಅವರ ದಿನದ ಉದ್ಯೋಗಗಳು. ಅವರಲ್ಲಿಯೂ ಬಣಗಳೂ ವರ್ಗಗಳೂ ಇದ್ದವೆಂದು ಗೊತ್ತಾಗಿದೆ. ಅವರು ಹಳ್ಳಿಗಳಲ್ಲಿ ವಾಸಿಸುತ್ತಿದ್ದರು. ಸದ್ಯಕ್ಕಿನ ಇಬೇರಿಯನ್ (Iberian) ಮತ್ತು ಬಾಸ್ಕ (Basque) ಜನರು ಈ ಜನರ ವಂಶಜರೆಂದು ತಿಳಿಯಲ್ಪಡುತ್ತಾರೆ. ಇವರು ಜಗತ್ತನ್ನೆಲ್ಲ ವ್ಯಾಪಿಸಿದ್ದರೆಂದು ಹೇಳಬಹುದು. ಯಾಕೆಂದರೆ ಒಂದೇತರದ ಅವರ ಅವಶೇಷಗಳು ಯುರೋಪ, ಏಸಿಯಾ, ಅಮೇರಿಕಾಖಂಡಗಳಲ್ಲಿ ಆ ಕಾಲದ ಪ್ರಾಣಿಗಳ ಅಸ್ಥಿಗಳೊಡನೆ ಸಮನಾಗಿಯೇ ಸಿಕ್ಕುತ್ತವೆ. ಪ್ರಾಚೀನ ಶಿಲಾಯುಗದಲ್ಲಿಯಂತೆ ಈ ಕಾಲದಲ್ಲಾದರೂ ನರಮಾಂಸವನ್ನು ತಿನ್ನುವ ರೂಢಿಯಿತ್ತು. ಮನುಷ್ಯನು ಸುಧಾರಣೆಯಲ್ಲಿ ಮುಂದುವರೆದಂತೆ, ಅವನ ನರಮಾಂಸತಿನ್ನುವ ರೂಢಿಯು ಹೆಚ್ಚಾಯಿತೆಂಬ ಸಂಗತಿಯು ಬಲು ಆಶ್ಚರ್ಯದ ಮಾತು ! ನವೀನಶಿಲಾಯುಗದಲ್ಲಿ ಈ

ರೂಢಿಯ ಗುರುತುಗಳು ಬೇಕಾದಷ್ಟು ಸಿಕ್ಕುವಂತಿವೆ." ಅವರ ಧಾರ್ಮಿಕ ಕಲ್ಪನೆಗಳ ಬಗ್ಗೆ ತರ್ಕಮಾಡುವ ಯೋಗ್ಯಸಾಧನಗಳು ನಮಗೆ ಇನ್ನೂ ಉಪಲಬ್ಧವಾಗಿಲ್ಲ. ಸದ್ಯಕ್ಕೆ ಗೊತ್ತಿದ್ದ ಸಾಧನವೆಂದರೆ ಶವಗಳ ಸಂಗಡ ಹೂಳಿಟ್ಟ ವಸ್ತುಜಾಲವೇ ಸರಿ. ಅದರಮೇಲಿಂದ ಸತ್ತ ಜನರಿಗೆ ಒಂದುತರದ ಜೀವನವಿರುವುದೆಂದು ಅವರು ತಿಳಿಯುತ್ತಿದ್ದರೆಂದು ತರ್ಕಿಸಬಹುದು. "ಅವರಿಗೂ ತಿನ್ನಲಿಕ್ಕೆ ಆಹಾರ ಬೇಕು; ಕುಡಿಯಲಿಕ್ಕೆ ನೀರು ಬೇಕು; ಬೇಟೆಯಾಡಲಿಕ್ಕೆ ಆಯುಧಗಳು ಬೇಕು; ಮಲಗಲಿಕ್ಕೆ ಹಾಸಿಕೆ ಬೇಕು; ಕಿಂಬಹುನಾ, ಸೇವೆ ಮಾಡಲಿಕ್ಕೆ ಹೆಂಡಂದಿರೂ ಸಹಿತ ಬೇಕು." ಎಂಬ ಕಲ್ಪನೆಗಳು ಆ ಜನರಲ್ಲಿ ರೂಢವಾಗಿದ್ದವು. ಬಣಗಳ ನಾಯಕನೊಬ್ಬನು ಸತ್ತನೆಂದರೆ ಶವದ ಸಂಗಡ ಅವನ ಹಲವು ಹೆಂಡಂದಿರನ್ನೂ ಹೂಳುತ್ತಿದ್ದರೆಂದು ಹಲವು ಶಾಸ್ತ್ರಜ್ಞರು ಸಿದ್ಧಮಾಡಿದ್ದಾರೆ. ಆದರೆ ಇಂತಹ ಕುರುಹುಗಳು ಹೊಸ ಶಿಲಾಯುಗದಲ್ಲಿ ಸಾಮಾನ್ಯವಾಗಿ ಸಿಕ್ಕುವಷ್ಟು ಪ್ರಾಚೀನ ಶಿಲಾಯುಗದಲ್ಲಿ ಸಿಕ್ಕುವುದಿಲ್ಲ. ಆದುದರಿಂದ ಹೊಸ ಶಿಲಾಯುಗವ ಪ್ರಾರಂಭದಿಂದ ಇತ್ತೀಚೆಗೆ ಪರಲೋಕಕಲ್ಪನೆಯು ಜನರಲ್ಲಿ ಭರದಿಂದ ರೂಢವಾಯಿತೆಂದು ಮಾತ್ರ ಹೇಳಬಹುದು. ಅದಕ್ಕಿಂತ ಹಿಂದಿನ ಜನರ ಬಗ್ಗೆ ಮಾತಾಡುವುದಾದರೆ ನಾವು ಕೇವಲ ಕಲ್ಪನೆಯ ಆಶ್ರಯವನ್ನೇ ಹಿಡಿಯಬೇಕಾಗುವುದು. ನಮಗೆ ಗೊತ್ತಾಗಿದ್ದ ನಮ್ಮ ಪ್ರಾಚೀನ ಪೂರ್ವಜರು ಅರಿತ ಸಂಗತಿಗಳೆಂದರೆ ಎರಡೇ. (೧) ಬೆಂಕಿಯನ್ನುಪಯೋಗಿಸುವುದು (೨) ಮತ್ತು ಕಲ್ಲುಗಳನ್ನು ಕಟೆದು ಕೆಲವು ವಸ್ತುಗಳನ್ನು ತಯಾರಿಸಿಕೊಳ್ಳುವುದು. ಇದಕ್ಕಿಂತ ಹೆಚ್ಚಿನದೆಲ್ಲ ವಿಕಾಸದ ಫಲವೆಂದು ಅಸ್ತಿತ್ವದಲ್ಲಿ ಬಂದಿದೆ.

ಸುಮಾರು ೧೨೦೦೦ ವರುಷಗಳ ಪೂರ್ವದಲ್ಲಿ ಸದ್ಯಕ್ಕಿನ ಎಲ್ಲ ಮಾನವ ವರ್ಣಗಳನ್ನೂ (Races of men) ವಿಂಗಡಿಸಿ ತೋರಿಸಬಹುದಾಗಿತ್ತು. ಆದರೆ ತೀರ ವಿರುದ್ಧವಾದ ವರ್ಣಗಳಿಂದಲೂ ಕೂಡ ಗಂಡು ಹೆಣ್ಣುಗಳನ್ನಾರಿಸಿಕೊಂಡು ಉತ್ತಮವಾದ ಪ್ರಜೆಯನ್ನು ಹುಟ್ಟಿಸಬಹುದೆಂಬ ಮಹತ್ತ್ವದ ಮಾತು ಈಗಿನವರ ಸಿದ್ಧಾಂತವಾಗಿದೆ. ಆದುದರಿಂದ ಅವರೆಲ್ಲ ಒಬ್ಬನೇ "ಮೂಲ ಮಾನವ"ನಿಂದ ಹುಟ್ಟಿರಬೇಕೆಂದು ಊಹಿಸಬಹುದು. ಇದು ಈಗಿನ ಕಾಲದಲ್ಲಿ ಬಹು ವಿಚಾರಾರ್ಹವಾದ ಮಾತೆಂಬುದನ್ನು ಎಲ್ಲರೂ ನೆನಪಿನಲ್ಲಿಡಬೇಕು. ಅವು (ವರ್ಣಗಳು)

ಮಾನವ ವರ್ಣಗಳು ಅಥವಾ ಕುಲಗಳು

ಮೇಘಗಳಂತೆ ವಿಂಗಡಿಸಿ ಹೋಗುವವು. ಸಂಸರ್ಗದಲ್ಲಿ ಬರುವವು. ಮತ್ತೆ ಸಂಪೂರ್ಣವಾಗಿ ಬೆರೆತುಹೋಗುವವು. ಇದನ್ನು ನಾವು ನೆನಪಿನಲ್ಲಿಟ್ಟರೆ ಸದಶ್ಕ್ಯನ ಎಷ್ಟೋ ಕ್ರೂರವಾದ ನಮ್ಮ ಭ್ರಾಂತಿದುರಾಗ್ರಹಗಳು ನಾಶವಾಗಿ ಹೋಗಬಹುದು. ವರ್ಣವೆಂಬ ಶಬ್ದವನ್ನು ಬೇಕುಬೇಕಾದ ಅರ್ಥದಲ್ಲಿ ಉಪಯೋಗಿಸಿಕೊಂಡು ಅದರಿಂದ ಸಿಕ್ಕ ಸಿಕ್ಕ ಸಿದ್ಧಾಂತಗಳನ್ನು ಎಷ್ಟೋ ಜನರು ತೆಗೆಯುತ್ತಿದ್ದಾರೆ. ಬ್ರಿಟಿಶ್ ವರ್ಣವೆಂದೂ ಯುರೋಪಿಯನ್ ವರ್ಣವೆಂದೂ ಅವರು ಒಮ್ಮೊಮ್ಮೆ ಬಲು ಜಂಭದಿಂದ ಹೇಳಿಕೊಳ್ಳುತ್ತಾರೆ. ಆದರೆ ಈಗಿನ ಯುರೋಪುಖಂಡದೊಳಗಿನ ದೇಶಗಳೆಲ್ಲ ಕಂದೀಬಣ್ಣ, ಸಾದಗಪ್ಪು, ಬಿಳಿದು, ಮತ್ತು ಮೊಂಗೋಲಿಯನ್ ಘಟಕಗಳು ಕೂಡಿ ಆಗಿರುವವೆಂಬ ಮಾತು ಇತಿಹಾಸದಿಂದ ಸಿದ್ಧವಾಗುತ್ತದೆ. (H. G. Wells A. Short History of the world P. 46)

ಅಮೇರಿಕಾ ಖಂಡದ ಇತಿಹಾಸವು.

ಇದೇ ಕಾಲದಲ್ಲಿ ಮೊಂಗೋಲಿಯನ್ ಜನರು ಅಮೇರಿಕೆಗೆ ಹೋಗಿ (ಆಗ ಅದು ಬಹುಶಃ ನಮ್ಮ ಜಗತ್ತಿಗೆ ಕೂಡಿಕೊಂಡಿರಬೇಕು) ಕಾಲೂರಿ ನಿಂತರು. ಆದರೆ ಅವರು ಸುಧಾರಣೆಯ ಮೆಟ್ಟಲುಗಳನ್ನು ಇತ್ತಕಡೆಯ ಜನರಂತೆ ಭರದಿಂದ ಏರಲಿಲ್ಲ. ಅವರು ಕಡೆಯ ವರೆಗೂ ಬೇಟೆಯಾಡುತ್ತಿದ್ದು, ಗುಂಪುಕಟ್ಟಿಕೊಂಡು ಒಂದು ಕಡೆಯಿಂದ ಮತ್ತೊಂದು ಕಡೆಗೆ ಅಲೆದಾಡುತ್ತಲೇ ತಮ್ಮ ಕಾಲವನ್ನು ಕಳೆಯುತ್ತಿದ್ದರು. ಅವರಿಗೆ ಲೋಹದ ಉಪಯೋಗವು ಕಡೆಯ ವರೆಗೂ ಗೊತ್ತಾಗಲಿಲ್ಲ. ತಾಮ್ರ ಬಂಗಾರಗಳನ್ನು ತುಸುಮಟ್ಟಿಗೆ ಮಾತ್ರ ಅವರು ಅರಿತವರಾಗಿದ್ದರು. ಆದರೆ ಮೆಕ್ಸಿಕೊ, ಯುಕಾಟನ್, ಮತ್ತು ಪೇರು ಪ್ರಾಂತಗಳಲ್ಲಿಯ ಪರಿಸ್ಥಿತಿಯು ತುಸು ಅನುಕೂಲವಾಗಿದ್ದುದರಿಂದ ಅವರು ಅಲ್ಲಿ ಕಾಲೂರಿ ಭೂಮಿಯನ್ನು ಸಾಗುಮಾಡಿಕೊಂಡರು. ಕ್ರಿ. ಪೂ. ೧೦೦೦ ದ ಸುಮಾರಕ್ಕೆ ಅಲ್ಲಿ ಕೆಲವು ರಾಜ್ಯಗಳಾದವು. ಅಮೇರಿಕೆಯೊಳಗಿನ ಈ ರಾಜ್ಯಗಳಲ್ಲಿ ಉಪಾಧ್ಯಾಯರ ( Priests ) ಪ್ರಾಬಲ್ಯವು ಬಹಳವಾಗಿತ್ತು. ಅವರ ಪಂಚಾಂಗಪದ್ಧತಿಯು ಆಶ್ಚರ್ಯಕರವಾಗಿತ್ತು; ಶಕುನಗಳ ಸಾಮ್ರಾಜ್ಯವಂತೂ ವರ್ಣಿಸಲಿಕ್ಕಸದಳವು. ಯೂಟೆಕನ್ ಪ್ರಾಂತದಲ್ಲಿ ಒಂದು ತರದ ಲಿಪಿಯೂ ಜನರಿಗೆ ಗೊತ್ತಿತ್ತು. ಕ್ರಿ. ಶ. ೭೦೦ ರ ಸುಮಾರಿಗೆ ಈ " ಮಾಯಾ " ಸುಧಾ

ರಣೆಯು ( Maya civilization ) ತನ್ನ ವೈಭವಶಿಖರವನ್ನು ಮುಟ್ಟಿ ತ್ತೆಂದು ಹೇಳಬಹುದು. ಅವರ ಶಿಲ್ಪಕಲೆಯು ಬಹುಮಟ್ಟಿಗೆ ಹಿಂದೂಜನರ ಶಿಲ್ಪಕಲೆಯನ್ನು ಹೋಲುತ್ತದೆ. ಮೆಕ್ಸಿಕನ್ ಜನರಲ್ಲಿ ಮನುಷ್ಯ ಬಲೆಯು ಕಲ್ಪನಾತೀತವಾಗಿ ಬೆಳೆದಿತ್ತು. ಅವರ ಪ್ರತಿಯೊಂದು ಸಾಮಾಜಿಕ ಕಾರ್ಯದಲ್ಲಿ ಇದು ಪ್ರಮುಖವಾದ ಅಂಗವಾಗಿತ್ತು.

ಐತಿಹಾಸಿಕ ಕಾಲದ ಆಗಮನ

ಕ್ರಿ. ಪೂ. ೭–೮ ಸಾವಿರ ವರುಷಗಳ ಸುಮಾರಕ್ಕೆ ಇಜಿಪ್ತ, ಸುಮೇರಿಯಾ ಮೊದಲಾದ ಪ್ರದೇಶಗಳಲ್ಲಿ ಸುಧಾರಣೆಯಾಗಿ ವಿಶಿಷ್ಟಸಂಸ್ಕೃತಿಗಳು ಉದಯಕ್ಕೆ ಬಂದವು. ಇಲ್ಲಿಂದ ಮುಂದೆ " ಐತಿಹಾಸಿಕಕಾಲವು " ( Historical Period ) ಸುರುವಾಗುವುದರಿಂದಲೂ, ವಾಚಕರಿಗೆ ಅದರ ಬಗ್ಗೆ ಸಾಧಾರಣ ಜ್ಞಾನವಿರುವುದರಿಂದಲೂ, ಮತ್ತು ನಮ್ಮ ವಿಷಯವು ಆ ರಾಜ್ಯಗಳ ಇತಿಹಾಸವನ್ನು ಕೊಡುವದು ಆಗಿರದ್ದರಿಂದಲೂ, ಅವನ್ನಿಲ್ಲಿ ಉಲ್ಲೇಖಿಸಿಲ್ಲ. ಅದರಂತೆಯೇ ಮುಂದೆ ಬಾಬಿಲೋನಿಯಾ, ಮತ್ತು ಹಿಂದುಸ್ಥಾನಗಳಲ್ಲಾದ ವಿಷಯಗಳನ್ನೂ ನಾವಿಲ್ಲಿ ಚರ್ಚಿಸುವುದಿಲ್ಲ. ಕ್ರಿ. ಶ. ಇತ್ತೀಚೆಯ ಇತಿಹಾಸವಂತೂ ಎಲ್ಲರ ಬಾಯಲ್ಲುಂಟು.

ಇನ್ನೊಂದು ರೀತಿಯಿಂದ ನಾವು ಈ ಪ್ರಶ್ನೆಯನ್ನು ಚರ್ಚಿಸುವುದು ಉಳಿದಿದೆ. ಸದ್ಯಕ್ಕಿನ ಲಲಿತಕಲೆಗಳೂ, ಭಾಷೆಗಳೂ, ಧರ್ಮಗಳೂ, ಶಾಸ್ತ್ರಗಳೂ ವಿಕಾಸವಾದದ ನಿಯಮವನ್ನು ಅನುಸರಿಸಿಯೇ ಅಸ್ತಿತ್ವದಲ್ಲಿ ಬಂದವೆಂದು ತೋರಿಸಿದರೆ ನಮ್ಮ ಪ್ರವಾಸವನ್ನು ನಾವು ಮುಗಿಸಿದಂತಾಗುವುದು. ಅವೂ ಕೂಡ ಸುಲಭತೆಯಿಂದ ಸಂಕೀರ್ಣತೆ ಅಥವಾ ಏಕತ್ವದಿಂದ ಬಹುತ್ವವೆಂಬ ಸೃಷ್ಟಿವಿಕಾಸದ ನಿಯಮವನ್ನೇ ಅನುಸರಿಸಿ ಹುಟ್ಟಿ, ಬೆಳೆದು ದೊಡ್ಡವಾಗಿರುವವೆಂಬುದನ್ನು ತೋರಿಸುವುದು ನಮ್ಮ ಕರ್ತವ್ಯವು.

ಜಗತ್ತಿನ ಮೇಲಿರುವ ಭಾಷೆಗಳು.

ಜಗತ್ತಿನ ಮೇಲೆ ಎಷ್ಟೋ ಭಾಷೆಗಳಿರುವವೆಂಬುದು ಎಲ್ಲರಿಗೂ ಗೊತ್ತುಂಟು. ಅವುಗಳ ಸಂಖ್ಯೆಯು ಸಾವಿರಕ್ಕೆ ಮಿಕ್ಕಿರಬಹುದೆಂದು ಹಲವರು ತರ್ಕಿಸಿದ್ದಾರೆ. ಆದರೆ ಇವೆಲ್ಲ ಕೆಲವು ಮುಖ್ಯ ಭಾಷಾವರ್ಗಗಳಲ್ಲಿ ಬರುವವೆಂದು ಹೇಳಬಹುದು. ಉದಾ-ಇಂಡೋಯುರೋಪಿಯನ್ ಭಾಷಾವಂಶದೊಳಗೆ

ಸಂಸ್ಕೃತ, ಝೆಂಡ, ಗ್ರೀಕ, ಲ್ಯಾಟಿನ್, ಟ್ಯೂಟೋನಿಕ್, ಸೆಲ್ಟಿಕ್, ಸ್ಲೇವೋನಿಕ್ ಎಂಬ ಮುಖ್ಯಭಾಷೆಗಳೂ ಅವುಗಳಿಂದ ಹುಟ್ಟಿದ ಉಪಭಾಷೆಗಳೂ ಬರುವವೆಂದು ಭಾಷಾಪಂಡಿತರು ನಿರ್ಣಯಿಸಿದ್ದಾರೆ. ಆದರೆ ಸುಮಾರು ೫೦-೧೦೦ ಮಾತ್ರ ಪರಸ್ಪರ ಏನೂ ಸಂಬಂಧವಿಲ್ಲದವಾಗಿರುವವೆಂದು ಅವರೇ ಅಭಿಪ್ರಾಯಪಡುತ್ತಾರೆ. ಭಾಷೆಗಳ ವೈವಿಧ್ಯವು ಅವುಗಳೊಳಗಿನ ಧಾತುಗಳ ಧ್ವನಿ (Sounds)ಗಳ ಮೇಲೆ ಅವಲಂಬಿಸಿರುವುದಿಲ್ಲ; ಅದು ಅವುಗಳ ವ್ಯಾಕರಣದ ಮೇಲೆ ಅವಲಂಬಿಸಿರುತ್ತದೆ. ಆದುದರಿಂದ ಇವೆಲ್ಲ ಭಾಷೆಗಳ ವ್ಯಾಕರಣಗಳನ್ನು ಅಭ್ಯಾಸಮಾಡಿದರೆ ಈ ಪ್ರಶ್ನೆಯನ್ನು ಬಿಡಿಸುವುದು ಶಕ್ಯವಾಗಿದೆ.

ಭಾಷೆ ಎಂದರೇನು ?

ಭಾಷೆಯ ಮುಖ್ಯ ಉದ್ದೇಶವೆಂದರೆ ಒಬ್ಬರ ವಿಚಾರಗಳನ್ನು ಮತ್ತೊಬ್ಬರಿಗೆ ತಿಳಿಸುವುದು. ನಾನು ನೋಡಿದ ಒಂದು ವಸ್ತುವನ್ನು ವರ್ಣಿಸಬೇಕಾಗಿದೆಯೆಂದು ತಿಳಿಯೋಣ. ಎಂದರೆ ಮೊದಲು ನಾನು ನನ್ನ ನೋಡುವ ಅನುಭವವನ್ನು ವಿಭಾಗಿಸಿ ಅದರ ಘಟಕಾವಯವಗಳನ್ನು ವಿಂಗಡಿಸಲಿಕ್ಕೆ ಬೇಕು. ಉದಾ: "ಆ ಗುಡಿಗೆ ಸುಂದರವಾದ ಗೋಪುರವುಂಟು" ಇಷ್ಟು ನಾನು ನೋಡಿರುತ್ತೇನೆಂದು ತಿಳಿಯುವ. ಅದನ್ನು ನೋಡುವ ನನ್ನ ಅನುಭವವು ಒಂದೇ ಇರುವುದೆಂಬದು ಸ್ಪಷ್ಟವಿದೆ. ಅದನ್ನೆಲ್ಲ ನಾನು ಒಡೆದುಹಾಕಿ, ಆ, ಗುಡಿ, ಸುಂದರ, ಗೋಪುರ, ಉಂಟು, ಎಂಬ ಘಟಕಗಳಲ್ಲಿ ಭೇದಿಸಿ, ಇವುಗಳನ್ನೇ ಮತ್ತೊಬ್ಬನಿಗೆ ತಿಳಿಸುವೆನು. ಅವನು ಕ್ರಮವಾಗಿ ಒಂದೊಂವನ್ನೇ ಕೇಳಿಕೊಂಡು ಆ ಮೇಲೆ ಅವುಗಳನ್ನೆಲ್ಲ ಕೂಡಿಸಿ ನನ್ನ ಅನುಭವದ ಕಲ್ಪನೆಯನ್ನು ಮಾಡಿಕೊಳ್ಳುತ್ತಾನೆ. ಎಂದರೆ ಭಾಷೆಯೆಲ್ಲ ವಿಭಜನೆ ಮತ್ತು ಏಕೀಕರಣಗಳಲ್ಲಿರುವುದೆಂದು ಹೇಳಬಹುದು. (all language implies analysis and Synthesis). ಇನ್ನು ಭಾಷೆಯು ಹೇಗೆ ಹುಟ್ಟುತ್ತದೆಂಬ ಪ್ರಶ್ನೆಯು ಬಹು ಮನೋರಂಜಕವಿದ್ದರೂ, ಅಪ್ರಸ್ತುತವಿರುವುದರಿಂದ ಅದನ್ನಿಲ್ಲಿ ಹೆಚ್ಚಾಗಿ ಬೆಳಿಸಲಾರೆವು.

ಭಾಷೆಯ ಬೆಳವಣಿಗೆ

ಇನ್ನು ಹೀಗೆ ವಿಚಾರಗಳ ವಿನಿಮಯಕ್ಕೆ ಮೂಲಧಾತುಗಳಷ್ಟೇ ಸಾಕಾಗುವುದು ಶಕ್ಯವಿಲ್ಲ. ಆದುದರಿಂದ ಆ ಧಾತುಧ್ವನಿಗಳಿಗೆ ಸಂಬಂಧಿಸಿದಂತಹ ಧ್ವನಿಯುಕ್ತ ಶಬ್ದಗಳನ್ನು ಹುಟ್ಟಿಸುವುದು ಅವಶ್ಯವು. ಆದುದರಿಂದ ಧಾತುಗಳ ಬೇರೆ ಬೇರೆ ರೂಪಗಳೂ

ಅವುಗಳಿಂದ ಮುಂದೆ ನಾಮುಪದಗಳೂ ಅಸ್ತಿತ್ವದಲ್ಲಿ ಬರುವವು. ಇದೇ ಎಲ್ಲ ವ್ಯಾಕರಣದ ಮೂಲಗುಟ್ಟು. ಆದರೆ ಬೇರೆ ಬೇರೆ ಜನಾಂಗದವರು ಈ ಒಂದೇ ತತ್ತ್ವವನ್ನು ಬೇರೆಬೇರೆ ತೆರನಾಗಿ ಹೇಗೆ ಉಪಯೋಗಿಸಿಕೊಂಡಿರುವರೆಂಬುದನ್ನೇ ಎಲ್ಲ ಭಾಷಾಭ್ಯಾಸಿಗಳು ಅಭ್ಯಾಸಿಸಬೇಕಾಗುವುದು. ಆದರೆ ಅವನ್ನೆಲ್ಲ ನಾವಿಲ್ಲಿ ಚರ್ಚಿಸುವುದಿಲ್ಲ. ಈ ದೃಷ್ಟಿಯಿಂದ ವಿಚಾರಮಾಡಿದರೆ ಆಧುನಿಕಭಾಷೆಗಳೆಲ್ಲ ವಿಕಾಸವಾದದ ನಿಯಮಕ್ಕನುಸರಿಸಿ ಕೆಲವು ಮೂಲಧಾತುಗಳಿಂದ ಹುಟ್ಟಿರುವ ವೆಂದೂ, ಪರಿಸ್ಥಿತಿಯು ಬದಲಾದಂತೆ ಅವುಗಳಲ್ಲಿ ಬದಲಾವಣೆಗಳಾಗುತ್ತ ಹೋಗುತ್ತವೆಂದೂ ಸ್ವಲ್ಪದರಲ್ಲಿ ಹೇಳಬಹುದು.

ಧರ್ಮವನ್ನು ತೆಗೆದುಕೊಂಡರೂ ಇದೇ ಮಾತನ್ನು ಸಿದ್ಧಮಾಡಬಹುದು. ಅದರ ಸವಿಸ್ತಾರವಾದ ಚರ್ಚೆಯನ್ನಿಲ್ಲಿ ಮಾಡುವುದು ಅಶಕ್ಯವು. ಆದರೆ ಕೆಲವು ಮುಖ್ಯ ಸಂಗತಿಗಳನ್ನು ಹೇಳಿದರೆ ಸಾಕು. ಅಂಜಿಕೆ, ಆಶ್ಚರ್ಯ ಮೊದಲಾದ ಕೆಲವು ಮಾನಸಿಕಭಾವನೆಗಳಲ್ಲಿ ಧರ್ಮವು ಹುಟ್ಟುತ್ತದೆ.

**ಧಾರ್ಮಿಕ ವಿಕಾಸವು**

ಕನಸು, ಕಣಸು ( vision ) ಮೊದಲಾವ ಕೆಲವು ಸಂಗತಿಗಳಿಂದ ಸತ್ತುಹೋದ ಜನರು ಇನ್ನೂ ಅಸ್ತಿತ್ವದಲ್ಲಿರುವರೆಂದೂ (ಕನಸಿನಲ್ಲಿ ನಾವು ಸತ್ತವರನ್ನು ಕಾಣುತ್ತೇವೆ) ಅವರು ಆಗಾಗ್ಗೆ ನಮ್ಮೆಡೆಗೆ ಬರುತ್ತಿರುವ ರೆಂದೂ ಜನರು ಸ್ವಾಭಾವಿಕವಾಗಿಯೇ ತಿಳಿಯುತ್ತಾರೆ. ಅದರಿಂದ ಪಿತೃಪೂಜೆಯು ಜನರಲ್ಲಿ ರೂಢವಾಗುತ್ತದೆ. ಮುಂದೆ ಆ ಪಿತೃಗಳು ಬೇರೊಂದು ಜಗತ್ತಿನಲ್ಲಿರುವ ರೆಂಬ ಭಾವನೆಯು ಹುಟ್ಟುತ್ತದೆ. ಹೀಗೆ ಸ್ವರ್ಗನರಕಾದಿಗಳ ಕಲ್ಪನೆಗಳು ಉದಯು ವಾಗಿ ಭರದಿಂದ ಬೆಳೆಯುಹತ್ತುವವು. ಇನ್ನೊಂದು ರೀತಿಯಿಂದಲೂ ಜನರಲ್ಲಿ ಧಾರ್ಮಿಕಬೀಜಗಳು ಬಿತ್ತಲ್ಪಡಬಹುದು. ಸುತ್ತಲೂ ನೋಡಿದತ್ತೆಲ್ಲ ಆಶ್ಚರ್ಯ ಕರವಾದ ಸಂಗತಿಗಳೇ ಕಾಣಿಸುತ್ತವೆಂದು ಹಿಂದೊಮ್ಮೆ ಹೇಳಿರುವೆವಷ್ಟೇ ? ಸೂರ್ಯೋದಯು, ಉಷಸ್, ಮೇಘಗಳು, ವಿದ್ಯುಲ್ಲತೆ ಮುಂತಾದ ಸಾವಿರಾರು ವಿಷಯುಗಳು ಮನುಷ್ಯನಲ್ಲಿ ಭಯಭಕ್ತಿಗಳನ್ನು ಹುಟ್ಟಿಸದಿರಲಾರವು. ಆದುದ ರಿಂದ ಅವನ್ನು ಪೂಜೆಮಾಡಿ ಒಲಿಸಿಕೊಂಡರೆ ತನ್ನ ಜೀವನವು ಸುಖಕರವಾಗುವು ದೆಂದು ಅವನು ಸಹಜವಾಗಿಯೇ ತಿಳಿಯುತ್ತಾನೆ. ಹ್ಯೂಮನು ( ಇವನೊಬ್ಬ ಆಂಗ್ಲಪಂಡಿತನು. ) ಹೇಳುವಂತೆ " ಎಲ್ಲ ಜನರಲ್ಲಿ ಸಾಮಾನ್ಯವಾದುದೊಂದು

ಮನಸಿನ ಒಲವುಂಟು; ಎಲ್ಲ ವಸ್ತುಗಳನ್ನೂ ಅವರು ತಮ್ಮಂತೆಯೇ ಭಾವಿಸ ಹತ್ತುತ್ತಾರೆ. ಮತ್ತು ತಮ್ಮ ಅನುಭವಕ್ಕೆ ಬಂದಿದ್ದ ಹಾಗೂ ತಮಗೆ ಪೂರ್ಣ ವಾಗಿ ಪರಿಚಯವಿದ್ದ ಧರ್ಮಗಳೇ ಅವಕ್ಕಾದರೂ ಇರುವವೆಂದು ಅವರು ಕಲ್ಪಿ ಸುತ್ತಾರೆ." (Natural History of religion quoted by Gemperz—"Greek thinkers" Vol. I. p. 522) ಈ ಒಲವು ಸಾದೃಶ್ಯ ಮತ್ತು ಸಾಮೀಪ್ಯ(laws of similarity and contiguity) ವೆಂಬೆರಡು ಮಾನಸಿಕನಿಯಮಗಳ ಮೇಲೆ ಅವಲಂಬಿಸಿದೆಯೆಂದು ನಮ್ಮ ಬೇರೊಂದು ಪುಸ್ತಕದಲ್ಲಿ ತೋರಿಸಿಕೊಟ್ಟಿದ್ದೇವೆ. ಇದರಿಂದಲೇ ಮುಂದೆ "ಮನುಷ್ಯ ರೂಪದ ದೇವತೆ" ಅಥವಾ "ಮಾನವ ಕಲ್ಪಿತದೇವತೆ" ಗಳು (anthropomorphic gods) ಹೇಗೆ ಹುಟ್ಟುವವೆಂಬುದರ ಕಲ್ಪನೆಯಾಗುವಂತಿದೆ. ಇನ್ನು ಪಿತೃಪೂಜೆ ಮತ್ತು ಸೃಷ್ಟಿಶಕ್ತಿಗಳ ಪೂಜೆಯಲ್ಲಿ ಯಾವುದು ಮೊದಲು ಧರ್ಮವನ್ನು ಹುಟ್ಟಿಸಿತೆಂಬುವರಬಗ್ಗೆ ಭಿನ್ನಾಭಿಪ್ರಾಯಗಳುಂಟು. ಧರ್ಮವೆಲ್ಲ ಪಿತೃಪೂಜೆಯಲ್ಲಿಯೇ ಹುಟ್ಟಿತೆಂದು ಸ್ಪೆನ್ಸರನು ತೋರಿಸಿಕೊಟ್ಟಿದ್ದಾನೆ. ಉಳಿದ ಕೆಲ ವರು ಅದು ನಿಸರ್ಗಶಕ್ತಿಗಳ ಪೂಜೆಯಲ್ಲಿಯೇ ಹುಟ್ಟಿರಬೇಕೆಂದು ಸಿದ್ಧಮಾಡಲೆಳೆ ಸಿದ್ದಾರೆ. ಅದೇನೇ ಇರಲಿ, ಇವೆರಡೂ ಕೂಡಿಯೇ ಇರಬಹುದೆಂಬ ಮಾತು ಎಷ್ಟೋ ಧರ್ಮಗಳ ಇತಿಹಾಸದಿಂದ ಗೊತ್ತಾಗಿದೆ. ಗ್ರೀಕ ಮೊದಲಾದ ಆರ್ಯ ರಲ್ಲಿ ಈ ಕಲ್ಪನೆಯಿತ್ತು. ಹಿಂದುಸ್ತಾನದೊಳಗೆ ವೇದಕಾಲದಲ್ಲಿ ನಿಸರ್ಗಶಕ್ತಿ ಗಳ ಪೂಜೆಯಿತ್ತೆಂದೂ ಮುಂದೆ ಪಿತೃಪೂಜೆಯು ಅತಿರೇಕವಾಗಿ ಬೆಳೆಯಿತೆಂದೂ ಹಲವು ಜನರ ಅಂಬೋಣವಿದೆ. ಅದೇನೇ ಇರಲಿ, ಮೊದಲು ದೇವತೆಗಳ ಕಲ್ಪ ನೆಯೊಮ್ಮೆ ಈ ತರದಿಂದ ಹುಟ್ಟಿತೆಂದರೆ, ಅದು ಭರದಿಂದ ಬೆಳೆಯುತ್ತ ಹೋಗು ತ್ತದೆ. ತನಗೆ ಅವಶ್ಯಬಿದ್ದಂತೆ ಮನುಷ್ಯನು ಬೇಕಾದಷ್ಟು ದೇವತೆಗಳನ್ನು ಕಲ್ಪಿಸಿ ಕೊಳ್ಳುತ್ತಾನೆ. ಗೃಹದೇವತೆ, ಸೂರ್ಯದೇವತೆ, ವನದೇವತೆ, ಜಲದೇವತೆ, ಹೀಗೆ ನಾನಾತರದಿಂದ ದೇವತೆಗಳನ್ನು ಹುಟ್ಟಿಸಿಕೊಂಡು ಅವುಗಳನ್ನೇ ಅವನು ಪೂಜಿಸಹತ್ತುವನು. ಈ ದೃಷ್ಟಿಯಿಂದ ನೋಡಿದರೆ ಧರ್ಮವೆಲ್ಲ ಫ್ಯೂಅರಬೇ ಕನು ಹೇಳುವಂತೆ ಆತ್ಮಭ್ರಮವೇ ಸರಿ. "ಅದು ಆತ್ಮಪೂಜೆಯೆಂಬ ಕಾರಣ ದಿಂದ ಆತ್ಮಭ್ರಮಯೆಂದು ಹೇಳಬಹುದು. ಮನುಷ್ಯನು ತನ್ನ ಸ್ವಭಾವವನ್ನೇ ಹೊರಕ್ಕೆ ಚಾಚಿ, ಅದಕ್ಕೆ ವ್ಯಕ್ತಿಯ ರೂಪುಕೊಟ್ಟು, ಅದನ್ನೇ ಪೂಜಿಸುತ್ತಾನೆ.

ಅವನು ತನ್ನನ್ನೇ ತಾನು ವಿಚಾರಗಳಿಂದ ಹುಟ್ಟಿಸಿಕೊಂಡು, ಆ ವಿಚಾರಗಳು ನಿಜವೆಂದು ನಂಬಿ ತಾನೇ ಹುಟ್ಟಿಸಿದ ಆ ಕಲ್ಪಿತವಸ್ತುವನ್ನು ಪೂಜಿಸಮಾಡಹತ್ತುತ್ತಾನೆ. ಈ ತೆರನಾಗಿ ಧರ್ಮವೆಂದರೆ ಹುಚ್ಚುತನದ್ದೊಂದು ಭಾಗವೆಂದು ಹೇಳಬಹುದು." (Flint anti-theistic theories p. 17.) ಆದರೆ ಬರಬರುತ್ತ ಆ ಭಿನ್ನದೇವತೆಗಳಿಗೆಲ್ಲ ಒಬ್ಬ ಒಡೆಯನಿರುವನೆಂದೂ ಅವನಿಗೆ ಅವೆಲ್ಲ ಅಧೀನವಾಗಿರುವವೆಂದೂ ಜನರು ತಿಳಿಯಹತ್ತುತ್ತಾರೆ. ಬಹುದೇವತೆಯ ಕಲ್ಪನೆಯಿಂದ ಏಕದೇವತೆಯ ಕಲ್ಪನೆಯಕಡೆಗೆ ಹೋಗುವುದೇ ಧರ್ಮವಿಕಾಸದ ಲಕ್ಷಣವೆಂದು ಸ್ಪೆನ್ಸರನು ಹೇಳುತ್ತಾನೆ. ಆದರೆ ವಿಕಾಸವಾದದ ನಿಯಮವಾದ ಏಕತ್ವದಿಂದ ಬಹುತ್ವವೆಂಬ ನಿಯಮವೂ ಧರ್ಮದ ಬೆಳವಣಿಗೆಗೆ ಹತ್ತದೆ ಇರಲಾರದು. ಆದರೆ ಈ ವಿಷಯಗಳನ್ನೆಲ್ಲ ನಾವು ಬೇರೊಂದು ಪುಸ್ತಕದಲ್ಲಿ ಚರ್ಚಿಸಬೇಕೆಂದು ಮಾಡಿರುವೆವಾದುದರಿಂದ, ಇಲ್ಲಿ ಇಷ್ಟಕ್ಕೇ ಮುಗಿಸಿಬಿಡುವೆವು.

ಮನುಷ್ಯನ ಸಾಧನ ಶಕ್ತಿಯು

ಮನುಷ್ಯನು ತನಗೆ ಬೇಕಾದಂತಹ ಸಾಧನಗಳನ್ನು ನಿರ್ಮಿಸಿಕೊಳ್ಳುವ ಶಕ್ತಿಯುಳ್ಳ ಪ್ರಾಣಿಯೆಂದು (Tool-making animal) ಹೇಳುತ್ತಾರಷ್ಟೇ? ಈ ದಿಶೆಯಲ್ಲಿ ಮನುಷ್ಯನ ಪ್ರಗತಿಯನ್ನು ವಿಚಾರಿಸಿದರೂ ಇದೇ ಮಾತು ಸಿದ್ಧವಾಗುವಂತಿದೆ. ಸದ್ಯಕ್ಕೆ ನಮ್ಮ ಜೀವನಯಾತ್ರೆಯಲ್ಲಿ ಅಸಂಖ್ಯಾಕವಾದ ಸಾಧನಗಳು ಸೇರಿರುತ್ತವೆ. ಆದರೆ ಅವುಗಳೆಲ್ಲ ಒಮ್ಮೆಲೇ ಶೋಧಿಸಲ್ಪಡಲಿಲ್ಲ. ಮತ್ತ ಮೊದಲು ಪೃಥ್ವಿಯಮೇಲೆ ಸ್ವಾಭಾವಿಕವಾಗಿಯೂ ಹೇರಳವಾಗಿಯೂ ಸಿಕ್ಕಬಹುದಾದ ತೀರ ಕನಿಷ್ಠಪ್ರತಿಯ ಕಲ್ಲುಗಳನ್ನು ಮಾತ್ರ ಮನುಷ್ಯನು ಉಪಯೋಗಿಸಿಕೊಳ್ಳುತ್ತಿದ್ದನು. ಬೆಂಕಿಯ ಉಪಯೋಗವು ಮನುಷ್ಯನಿಗೆ ಬಹುಪ್ರಾಚೀನಕಾಲದಿಂದಲೇ ಗೊತ್ತಿದ್ದಿತೆಂಬುದರಲ್ಲಿ ಸಂದೇಹವಿಲ್ಲ. ಆದರೂ ಒಂದಾನೊಂದು ಕಾಲದಲ್ಲಿ ನಮ್ಮ ಪೂರ್ವಜರು ಅಗ್ನಿವಿರಹಿತರಾಗಿ ಅಡ್ಡಾಡುತ್ತಿದ್ದರೆಂದು ತರ್ಕಿಸಿದರೆ ತಪ್ಪಾಗುವಂತೆ ಕಾಣುವುದಿಲ್ಲ. ಆದರಲ್ಲೂ ಕೂಡ ಮೊನ್ನೆ ಮೊನ್ನಿನವರೆಗೆ ಚಿಣಚಿಕಲ್ಲು ಮತ್ತು ಕಬ್ಬಿಣಗಳನ್ನು ಒಂದರ ಮೇಲೊಂದನ್ನು ಕಟೆದು ಬೆಂಕಿಯನ್ನು ಸಿದ್ಧಪಡಿಸಬೇಕಾಗುತ್ತಿತ್ತು. ಬೆಂಕಿಯನ್ನು ಹೀಗೆ ಸಿದ್ಧಪಡಿಸುವುದು ಕಷ್ಟವಾದುದರಿಂದಲೇ ಒಮ್ಮೆ ಮನೆಯಲ್ಲಿ ಹೊತ್ತಿಸಿದ ಬೆಂಕಿಯನ್ನು

ಆರಗೊಡಬಾರದೆಂದು ನಮ್ಮ ಧರ್ಮಶಾಸ್ತ್ರವು ಹೇಳುತ್ತದೆ. ಇರಲಿ, ಇಂದು ಬೆಂಕಿಯು ನಮ್ಮ ಸೆರೆಯೊಳಾಗಿದೆಯೆಂಬುದು ನಿಜವಿದ್ದರೂ, ಅದರ ಮೇಲಿನ ಈ ಒಡೆತನಕ್ಕಾಗಿ ಎಷ್ಟೋ ಜನರು ತಮ್ಮ ಆಯುಷ್ಯವನ್ನು ಧಾರೆಯೆರೆದಿದ್ದಾರೆ. ತೀರ ಕೆಳಗಿನ ಕಲ್ಲುಗಳ ಉಪಯೋಗವನ್ನರಿತ ಕಾಲದಲ್ಲಿಯೇ ಬೆಂಕಿಯ ಶೋಧ ವಾಗಿತ್ತೆಂದು ಹೇಳಬಹುದು. ಕೇವಲ ಕಲ್ಲುಗಳೇ ಆಗಿನ ಜನರ ಸಾಧನ ವಾಗಿದ್ದುದರಿಂದ ಆ ಕಾಲಕ್ಕೆ ಪ್ರಾಚೀನಶಿಲಾಯುಗವೆಂಬ ಯಥಾರ್ಥವಾದ ಹೆಸರು ಕೊಡಲ್ಪಟ್ಟಿದೆ. ಮುಂದೆ ಕಲ್ಲಿನೊಳಗಿನ ಕೆಲಸವು ಹೆಚ್ಚೆಚ್ಚು ಸೂಕ್ಷ್ಮ ವಾಗುತ್ತ ಹೋಗಿ ಕಲ್ಲಿನೊಳಗೆ ಉತ್ಕೃಷ್ಟವಾದ ಆಯುಧಗಳನ್ನೂ ಉಳಿದ ಸಾಧನಗಳನ್ನೂ ಮಾಡಿಕೊಳ್ಳಹತ್ತಿದರು. ಆದರೂ ಕಲ್ಲಿನ ಹೊರತು ಬೇರೊಂದು ವಸ್ತುವು ಅವರಿಗೆ ಗೊತ್ತಿರಲಿಲ್ಲ. ಆದುದರಿಂದ ಈ ಕಾಲಕ್ಕೆ "ನವಶಿಲಾಯುಗ" ವೆಂದು ಹೆಸರು ಕೊಟ್ಟಿದ್ದಾರೆ. ಆಮೇಲೆ ಕಬ್ಬಿಣವು ಗೊತ್ತಾಗಿ ಲೋಹಯುಗವು ಪ್ರಾರಂಭವಾಯಿತು. ಉಗಿಯ ಶೋಧವಾದಂದಿನಿಂದ ಜನರು ಮತ್ತೊಂದು ಹೆಜ್ಜೆ ಮುಂದುವರಿದರೆಂದು ಹೇಳಬಹುದು. ಯಂತ್ರಗಳ ಸುಳಿದಾಟವೆಲ್ಲ ಈ ಕಬ್ಬಿಣ ಉಗಿಗಳ ಬಲದಿಂದಲೇ. ಮೊನ್ನೆಮೊನ್ನೆ ವಿದ್ಯುತ್ತಿನ ಆಶ್ಚರ್ಯಕರವಾದ ಶೋಧ ವಾಗಿರುವುದರಿಂದ ನಾವು "ವಿದ್ಯುದ್ಯುಗ"ದಲ್ಲಿರುವೆವೆಂದು ಹೇಳಬಹುದು. ಆದರೆ ಇವೆಲ್ಲ ಶೋಧಗಳಾಗಬೇಕಾದರೆ ಸಾವಿರಾರು ವರುಷಗಳು ಕಳೆದುಹೋಗಿರುವ ವೆಂಬುದು ಸ್ಪಷ್ಟವಿಲ್ಲವೇ ? ಈ ಮಾತಿನ ಸತ್ಯತೆಯು ಬರಬೇಕಾದರೆ ನಮ್ಮೊ ಡನೆ ಕಾಡುಜನರನ್ನು ತುಸು ತುಲನೆಮಾಡಿ ನೋಡಬೇಕು. ಎಂದರೆ ಈ ದಿಶೆಯ ಪ್ರಗತಿಯು ಎಷ್ಟು ಸಾವಕಾಶವಾಗಿ ನಡೆದಿರುತ್ತದೆಯೆಂಬುದರ ಕಲ್ಪನೆಯು ಬರು ವಂತಿದೆ. ಅದೇಕೆ ? ಆಧುನಿಕ ಜೀವನಸೌಕರ್ಯಗಳೆಲ್ಲ ತೀರ ಹಳೆಯವೆಂದರೆ ಹೋದ ನೂರಿನ್ನೂರು ವರುಷಗಳಲ್ಲಿ ಹುಟ್ಟಿರುವವೆಂಬುದು ಎಲ್ಲರಿಗೂ ಗೊತ್ತಿದ್ದ ಮಾತು. ಈ ರೀತಿಯಿಂದಲೂ ವಿಕಾಸವಾದದ ಅಸ್ತಿತ್ವವೇ ಉದಾಹರಿತ ವಾಗುವುದು.

ಕಿಂಬಹುನಾ, ಜೀವೆ ಯಾವುದೇ ಶಾಸ್ತ್ರವನ್ನು ತೆಗೆದುಕೊಂಡರೂ, ಅದು ವಿಕಾಸವಾದದ ನಿಯಮಗಳಿಗನುಸರಿಸಿ ಹುಟ್ಟಿ ಬೆಳೆದಿರುವುದೆಂದು ನಿರ್ವಿವಾದ ವಾಗಿ ಸಿದ್ಧವಾಗುತ್ತದೆ. ಆರೋಗ್ಯಶಾಸ್ತ್ರ, ಶಾರೀರಶಾಸ್ತ್ರ, ಗಣಿತಶಾಸ್ತ್ರ, ಪದಾರ್ಥವಿಜ್ಞಾನಶಾಸ್ತ್ರ, ರಸಾಯನಶಾಸ್ತ್ರ

ಹೀಗಾಗುವುದಕ್ಕೆ ಕಾರಣವು

ಜ್ಯೋತಿಃಶಾಸ್ತ್ರಗಳಿಗೆಲ್ಲ ಬೇರೆ ಬೇರೆ ಇತಿಹಾಸಗಳೇ ಇರುವುದಿಲ್ಲವೇ ? ಇವೆಲ್ಲಕ್ಕೂ ಮೂಲಕಾರಣವೆಂದರೆ : ಮನುಷ್ಯನಲ್ಲಿ ಆನುವಂಶಿಕ ಗುಣಧರ್ಮಗಳು ( Possession of innate faculties ) ಹೆಚ್ಚಾಗಿರುವುದಿಲ್ಲ. ಅವನ ಜನ್ಮಕಾಲದ ಮನೋಭೂಮಿಕೆಯೆಂದರೆ ನೆನಿಸಿ ಹದಮಾಡಿದ ಮಣ್ಣಿನಂತಿರುತ್ತದೆಯೆಂದು ಹೇಳಬಹುದು. ಮುಂದೆ ಆ ಮಣ್ಣಿನಿಂದ ನಾವು ಬೇಕಾದ ಆಕೃತಿಯ ಪಾತ್ರೆಗಳನ್ನು ನಮ್ಮ ಇಚ್ಛೆಗೂ, ಶಕ್ತಿಗೂ, ಕೌಶಲ್ಯಕ್ಕೂ ಅನುಸರಿಸಿ ಸಿದ್ಧಮಾಡಿಕೊಳ್ಳಬಹುದು. ಈ ಮಾತು ಮನದಟ್ಟಾಗಬೇಕಾದರೆ ಪ್ರಾಯದ ಮನುಷ್ಯನ ಬುದ್ಧಿಶಕ್ತಿಗಳನ್ನು ಹುಡುಗನೊಡನೆ ಹೋಲಿಸಿ ನೋಡಬೇಕು. ಎಂದರೆ ಮನುಷ್ಯನಲ್ಲಿ ಕಲಿಯುವ ಶಕ್ತಿಯು ಮಾತ್ರ ಇರುತ್ತದಲ್ಲದೆ ಬೇರೆಯಲ್ಲವೆಂದು ಇದರ ಅರ್ಥವು. ಮತ್ತು ಅವನಲ್ಲಿ ಕಲಿಯುವ ಗುಣವೂ ಶಕ್ತಿಯೂ ಇರುವವೆಂತಲೇ ಅವನು ಪ್ರಗತಿಯ ಮೆಟ್ಟಲುಗಳನ್ನು ಭರದಿಂದ ಏರಹತ್ತಿರುವನೆಂದು ಹೇಳಬಹುದು. "ಸುಧಾರಿಸಿದ ತಾಯಿತಂದೆಗಳಲ್ಲಿ ಹುಟ್ಟಿದ ಮಗುವೊಂದನ್ನು ನಿರ್ಮಾನುಷವಾದ ಕಟ್ಟಡವಿಯಲ್ಲಿಟ್ಟರೆ, ಆ ಕೂಸಿನ ಬೆಳೆವಣಿಗೆಯು ಎಂತಾಗಬಹುದು ? ಆನುವಂಶಿಕವಾಗಿ ಬರುವ ದೈಹಿಕಧರ್ಮಗಳೂ ಅವುಗಳ ಫಲಗಳೂ ಆ ಮಗುವಿಗೆ ಸಿಕ್ಕರೂ, ಅದು ಒಂಟಿಯಾಗಿರುವುದೆಂಬ ಒಂದೇ ಕಾರಣದಿಂದ, ಅದು ಕಡೆಯವರೆಗೂ ಕಾಡು ಸ್ಥಿತಿಯಲ್ಲಿಯೇ ಉಳಿಯುವುದೆಂಬುದರಲ್ಲಿ ಸಂದೇಹವಿಲ್ಲ. ಅದು ನಮ್ಮಂತೆ ಮಾತಾಡಲಾರದು; ಅವಶ್ಯವಾದ ಕೆಲವು ಆಹಾರದ ಪದಾರ್ಥಗಳನ್ನು ಗುರುತಿಸುವುದಕ್ಕಿಂತ ಅದರ ಜಾಣತನವು (art) ಹೆಚ್ಚಾಗಲಾರದು; ಬಹಳವಾದರೆ ಕಲ್ಲುಗಳಿಂದ ಕಾಯಿಗಳನ್ನು ಒಡೆಯಬಹುದು; ಗಿಡಗಳ ಟೊಂಗೆಗಳಿಂದ ಗೂಡುಗಳನ್ನು ಕಟ್ಟಿಕೊಳ್ಳಬಹುದು; ಆದರೆ ಬೆಂಕಿಯ ಉಪಯೋಗವು ಮಾತ್ರ ಅದಕ್ಕೆ ಗೊತ್ತಾಗುವುದು ಶಕ್ಯವಿಲ್ಲ. ಕಿಂಬಹುನಾ, ಅದು ಪ್ರಾಚೀನಶಿಲಾಯುಗದ ಮಾನವರ ಕಾಡು ಸ್ಥಿತಿಯನ್ನೇ ಮುಟ್ಟದಿರಲಾರದೆಂದು ಎದೆತಟ್ಟಿ ಹೇಳಬಹುದು." ( ಆದಿಭೌತಿಕ ಶಾಸ್ತ್ರವೂ, ವಿಚಾರವೂ ಪು. ೭೦ ).

ಹೀಗೆ ಈ ಜಗತ್ತಿನೊಳಗಿನ ಯಾವುದೊಂದು ಸಂಗತಿಯನ್ನು ತೆಗೆದುಕೊಂಡು ನೋಡಿದರೂ ವಿಕಾಸವಾದದ ವ್ಯಾಪಕತೆಯು ಎಲ್ಲಕಡೆಗೂ ಕಂಡು

ಉಪಸಂಹಾರ

ಬರುವಂತಿದೆ. ವಿಶಾಲವಾದ ತೇಜೋಮೇಘಗಳಿಂದ ಪ್ರಾರಂಭಮಾಡಿ, ಸದ್ವ್ಯಕ್ತಿಯ ಪ್ರತಿಯೊಂದು ಮಾನವ ವ್ಯಾಪಾರದವರೆಗೆ ಎಲ್ಲವೂ ವಿಕಾಸದ ಫಲವೇ. ಎಲ್ಲವೂ ಆ ಮೂಲವಸ್ತುವಿನಿಂದ ಹೊರಟ ದೂರಿನ ಪರಿಣಾಮವೇ. ಎಲ್ಲಿ ನೋಡಿದರೂ ಏಕತ್ವದಿಂದ ಬಹುತ್ವವೂ, ಅದರ ಸಂಗಡಲೇ ಹೆಚ್ಚಾದ ಹೊಂದಿಕೆಯೂ ತಪ್ಪದೇ ಕಂಡುಬರುವಂತಿವೆ. ಹೀಗೆ ಸಾವಕಾಶವಾಗಿ ಯಾಂತ್ರಿಕರೀತಿಯಿಂದ ಆ ಮೂಲದ್ರವ್ಯದಿಂದಲೇ ಎಲ್ಲವೂ ಹುಟ್ಟಿಬಂದಿರುವುದೆಂಬುದೇ ಉತ್ಕ್ರಾಂತಿಯು ಅಥವಾ ವಿಕಾಸವು. ಹೀಗೆ ತಿಳಿಸಿಕೊಡುವ ಶಾಸ್ತ್ರ ಅಥವಾ ದರ್ಶನಕ್ಕೇ ವಿಕಾಸವಾದವೆಂದು ಹೆಸರು. ಇದೇ ನಾವು ನಮ್ಮ ಕನ್ನಡ ಬಾಂಧವರಿಗೆ ಕೊಡಬೇಕೆಂದು ಮಾಡಿದ ಜ್ಞಾನದಾನವು. ಅದು ಎಷ್ಟರಮಟ್ಟಿಗೆ ಗ್ರಾಹ್ಯವಾಗಿರುವುದೆಂಬುದನ್ನು ನಿರ್ಣಯಿಸುವುದು ಅವರದೇ ಕೆಲಸವು.

---

## ೧೦
## ವಿಕಾಸವು ಹೇಗಾಗುವುದು ?

ಮೊದಲನೆಯ ಪ್ರಕರಣದಲ್ಲಿ ವಿಕಾಸವಾದವು ಸದ್ಯಕ್ಕಿನ ಜ್ಞಾನರಾಜ್ಯ ದಲ್ಲಿ ಯಾವ ಸ್ಥಾನವನ್ನಾಕ್ರಮಿಸಿರುವುದೆಂಬುದನ್ನು ತೋರಿಸಿ, ನಮ್ಮ ಕನ್ನಡ ಬಾಂಧವರಿಗೆ ಆ ವಿಷಯದ ಅವಶ್ಯಕತೆಯನ್ನು ತೋರಿಸಿ ಕೊಟ್ಟೆವು. ಎರಡನೆಯ ಪ್ರಕರಣದಲ್ಲಿ ತತ್ತ್ವಶೋಧನೆ ಯಂತಹ ಮಹತ್ತ್ವದ ಕೆಲಸದಲ್ಲಿ ಭೌತಿಕಶಾಸ್ತ್ರಗಳು ಯಾವ ಸಾಧನಗಳನ್ನು ಅವಲಂಬಿಸುವವು ? ಎಂಬುದನ್ನು ಸ್ವಲ್ಪದರಲ್ಲಿ ಚರ್ಚಿಸಿ, ವಿಕಾಸವಾದದ ಮುಖ್ಯ ಉಪಪತ್ತಿಗಳಾವುವೆಂಬುದರ ಅಲ್ಪಪರಿಚಯವನ್ನೂ ವಾಚಕರಿಗೆ ಮಾಡಿ ಕೊಟ್ಟೆವು. ಮುಂದಿನ ಪ್ರಕರಣದಲ್ಲಿ ಸ್ಪೆನ್ಸರ ಸಾಹೇಬರ ಅಭಿಪ್ರಾಯದ ಮೇರೆಗೆ ವಿಶ್ವನಾಟಕಕ್ಕೆ ಮೂಲತತ್ತ್ವಗಳಾವುವೆಂಬುದನ್ನು ನೋಡಿಕೊಂಡು ಉತ್ಕ್ರಾಂತಿಯು ಎಲ್ಲಿಂದ ಹೊರಡುವುದೆಂಬುದನ್ನೂ, ಅದು ಏತರಮೇಲೆ ಅವ ಲಂಬಿಸಿರುವುದೆಂಬುದನ್ನೂ ವಿವರಿಸಿ, ಉತ್ಕ್ರಾಂತ್ಯವಕ್ರಾಂತಿಗಳ ಲಕ್ಷಣಗಳನ್ನು ಹೇಳಿ, ವಿಕಾಸವಾದದ ನಿಯಮವನ್ನೂ ಸ್ಪಷ್ಟಮಾಡಿ ತೋರಿಸಿದೆವು. ನಾಲ್ಕನೆಯ ಪ್ರಕರಣದಲ್ಲಿ ಈ ವಿಶ್ವದ ಉತ್ಪತ್ತಿಕ್ರಮದ ಅಭ್ಯಾಸಮಾಡಿ, ಜೀವಜಡಗಳ ಭೇದ ವನ್ನೂ, ಜೀವದ ಮುಖ್ಯಲಕ್ಷಣಗಳನ್ನೂ ಮುಂದಿನ ಪ್ರಕರಣದಲ್ಲಿ ಸಾದ್ಯಂತ ವಾಗಿ ಚರ್ಚಿಸಿದೆವು; ಅಲ್ಲಿಯೇ ಜೀವವು ಈ ಜಗತ್ತಿನಮೇಲೆ ಹೇಗೆ ಹುಟ್ಟಿತೆಂಬು ದನ್ನು ಹೇಳಿಕೊಟ್ಟು, ೬ನೆಯ ಪ್ರಕರಣದಲ್ಲಿ ಪ್ರಾಣಿವರ್ಗಗಳ ವಿಕಾಸವನ್ನು ಎಂದರೆ ಉತ್ಕ್ರಾಂತಿಯ ಮೆಟ್ಟಲುಗಳನ್ನು ಪರಿಕಿಸಿ ನೋಡಿದೆವು. ಏಳನೆಯ ಪ್ರಕರಣದಲ್ಲಿ ಮನುಷ್ಯನ ಪ್ರಾಚೀನಪೂರ್ವಜರಾರೆಂಬುದನ್ನು ತುಲನಾತ್ಮಕ ಶಾರೀರಶಾಸ್ತ್ರದಿಂದ ನಿಶ್ಚಯಿಸಲಿಕ್ಕೆ ಪ್ರಯತ್ನಮಾಡಿದೆವು. ಮುಂದಿನ ಪ್ರಕರಣ ದಲ್ಲಿ ಮನುಷ್ಯನು ಸಾಕ್ಷಾತ್ ಮಂಗನ ಮರಿಯಲ್ಲವೆಂಬುದನ್ನು ಸಿದ್ಧಮಾಡಿ, ಬಹಳವಾದರೆ ಮಂಗನೂ ಮನುಷ್ಯನೂ ಕೂಡಿಯೇ ಮತ್ತೊಬ್ಬ ಪೂರ್ವಜನಿಂದ ಹುಟ್ಟಿದ್ದಾರೆಂದು ಹೇಳಬಹುದೆಂದು ಮನಗಾಣಿಸಿಕೊಟ್ಟೆವು. ಹೋದ ಪ್ರಕರಣ ದಲ್ಲಿ ಮನುಷ್ಯನ ಉತ್ಪತ್ತಿಯು ಈ ಪೃಥ್ವಿಯಮೇಲೆ ಎಂದು ಮತ್ತು ಹೇಗೆ ಆಗಿರಬಹುದೆಂಬುದನ್ನು ಸ್ವಲ್ಪದರಲ್ಲಿ ತೋರಿಸಿಕೊಟ್ಟು, ಅವನು ಆಧುನಿಕಸಾಧಾ ರಣೆಗೆ ಹೇಗೆ ಬಂದು ಮುಟ್ಟಿರುವನೆಂಬುದನ್ನು ಸಂಕ್ಷೇಪವಾಗಿ ವಾಚಕರ ಮುಂದೆ ಇರಿಸಿದೆವು. ಅಲ್ಲಿಯೇ ಕಡೆಗೆ ನಾವು ಕೈಕೊಂಡ ಪ್ರವಾಸವು ಮುಗಿದಂತಾಯಿ

ಸಿಂಹಾವಲೋಕನ

ತೆಂಬುದನ್ನಾದರೂ ಹೇಳದೇ ಇರಲಿಲ್ಲ. ಆದರೆ ನಿಜವಾಗಿ ನೋಡಿದರೆ ಇನ್ನೊಂದು ವಿಷಯವನ್ನು ನಾವು ತುಸು ಚರ್ಚಿಸಿದ ಹೊರತು, ಉತ್ಕ್ರಾಂತಿವಾದದ ಚರ್ಚೆಯು ಸರ್ವಾಂಗೀಣವಾಗಲಾರದು. ಡಾರ್ವಿನ್ನನ ಶೋಧಗಳಿಂದ ಬೈಬಲ್ಲಿನ ಮೂರು ಮುಖ್ಯವಾದ ತತ್ತ್ವಗಳು ನೆಲಸಮವಾದವೆಂದು ನಾವು ಹಿಂದೆಯೇ ಹೇಳಿ ರುವೆವು. ಅವುಗಳಲ್ಲಿ, ಜಗತ್ತಿನೊಳಗಿನ ಪ್ರಾಣಿವರ್ಗಗಳು ಅಥವಾ ಜಾತಿಗಳು ಅನಾದಿಕಾಲದಿಂದಲೂ ನಿಯಮಿತವಾಗಿವೆ; ಒಂದು ವರ್ಗದ ಪ್ರಾಣಿಗಳಿಂದ ಮತ್ತೊಂದು ವರ್ಗದ ಪ್ರಾಣಿಗಳ ಉತ್ಪತ್ತಿಯಾಗಿಲ್ಲವೆಂಬುದೊಂದಾಗಿರುವುದೆಂ ಬುದು ವಾಚಕರ ಸ್ಮರಣೆಯಲ್ಲಿರಬಹುದು. ಡಾರ್ವಿನ್ನನ ಮೊದಲನೆಯ ಪುಸ್ತಕವು "ಪ್ರಾಣಿವರ್ಗಗಳ ಉತ್ಪತ್ತಿ" (Origin of Species) ಎಂಬ ಹೆಸರಿನಿಂದಲೇ ಪ್ರಸಿದ್ಧವಾಯಿತು. ಅದರಲ್ಲಿ ಒಂದು ವರ್ಗದ ಪ್ರಾಣಿಗಳಿಂದಲೇ ಮತ್ತೊಂದು ವರ್ಗದ ಪ್ರಾಣಿಗಳು ಹುಟ್ಟುತ್ತವೆಂದೂ, ಹೀಗಾಗಲಿಕ್ಕೆ ಕೆಲವು ವಿಶಿಷ್ಟವಾದ ಕಾರಣಗಳಿರುವವೆಂದೂ ಅವನು ಸಿದ್ಧಮಾಡಿ ತೋರಿಸಿದನು. ಕಿಂಬಹುನಾ, ಒಂದೇ ಮೂಲಜೀವರೂಪದಿಂದ ಇಷ್ಟು ವಿಸ್ತಾರವಾದ ದೃಶ್ಯಜೀವವರ್ಗ ವೆಲ್ಲ ( ಎಂದರೆ ವನಸ್ಪತಿ ಮತ್ತು ಪ್ರಾಣಿವರ್ಗವೆಲ್ಲ ) ಹುಟ್ಟಿರುವುದೆಂದು ಅವನ ಶೋಧಗಳಿಂದ ಸಿದ್ಧವಾಯಿತು. ಹರ್ಬರ್ಟ ಸ್ಪೆನ್ಸರನು ಇದಕ್ಕಿಂತಲೂ ಮುಂದೆ ಹೋಗಿ ಇದೆಲ್ಲವೂ ಶಕ್ತಿಯುತವಾದ ಒಂದೇ ಜಡದ ವಿಶಾಲವಾದ ನಾಟಕ ವೆಂದು ಪ್ರತಿಪಾದನೆಮಾಡಿದನು. ಅದನ್ನೇ ನಾವು ಇಷ್ಟರವರೆಗೆ ವಾಚಕರ ಅವಗಾಹನೆಗಾಗಿ ಸಮರ್ಪಣೆಮಾಡಿದೆವು. ಇನ್ನು, ಯಾವ ಕಾರಣಗಳಿಂದ ಒಂದು ವರ್ಗದಿಂದ ಮತ್ತೊಂದು ವರ್ಗಕ್ಕೆ ವಿಕಾಸವಾಗುವುದೆಂಬುದನ್ನಷ್ಟು ಈ ಪ್ರಕರಣ ದಲ್ಲಿ ತೋರಿಸಿಕೊಟ್ಟು, ಮುಂದಿನ ಪ್ರಕರಣದಲ್ಲಿ ಇಡೀ ಪುಸ್ತಕದ ಮಂಗಳಾರತಿ ಯನ್ನು ಮಾಡಬೇಕೆಂದು ಮಾಡಿರುವೆವು. ಎಂದರೆ ಮಾತ್ರ ನಾವು ಕೈಕೊಂಡ ಕಾರ್ಯವು ಪೂರ್ಣವಾದಂತಾಗುವುದು.

ಪುರುಷ ಪ್ರಯತ್ನ ಮತ್ತು ದೈವ

ಪ್ರತಿಯೊಬ್ಬ ಮನುಷ್ಯನ ಇತಿಹಾಸವನ್ನು ತೆಗೆದುಕೊಂಡು ನೋಡಿದರೆ, ಅವನ ಆಯುಷ್ಯವೆಂದರೆ ಎರಡು ತರದ ಸಂಗತಿಗಳ ಸಂಮಿಶ್ರಣದಿಂದ ಹುಟ್ಟಿದ ಒಂದು ವಸ್ತುವೆಂಬುದು ಕಂಡುಬರದಿರಲಾರದೆಂದು ಹಿಂದೊಮ್ಮೆ ಹೇಳಿರುವೆವು. ವೇದಾಂತದ "ಜೀವ ಸ್ವಾತಂತ್ರ್ಯ"ದ ಕಲ್ಪನೆಯಾದರೂ ಇದರ ಸಮೀಪಕ್ಕೆ

ಬಾರದಿರದು. ನಾನು ಯಾವ ದೇಶದಲ್ಲಿ, ಯಾವ ಕಾಲಕ್ಕೆ, ಯಾವ ತಾಯಿ ತಂದೆಗಳ ಹೊಟ್ಟೆಯಲ್ಲಿ ಹುಟ್ಟುವೆನೆಂಬುದು ನನ್ನ ಸ್ವಾಧೀನದಲ್ಲಿಲ್ಲ; ಇಷ್ಟರ ಮಟ್ಟಿಗೆ ನಾನು ಅಸ್ವತಂತ್ರನು; ಅದು (ಸ್ವಾತಂತ್ರ್ಯವು) ಕರ್ಮಾಧಿಪತಿಯಾದ ದೇವನ ಮೇಲಾಗಲಿ ಅಥವಾ ಜೈಮಿನಿ ಮಹರ್ಷಿಗಳು ಹೇಳುವಂತೆ "ಧರ್ಮ"ದ ಮೇಲಾಗಲಿ ಅವಲಂಬಿಸಿರುವುದು. ಎಷ್ಟು ಪ್ರಯತ್ನಪಟ್ಟರೂ ನಾನೀಗ ಅವುಗಳನ್ನು ಬದಲುಮಾಡಲಾರೆನೆಂಬುವುದು ಸ್ಪಷ್ಟವಿದೆ. ಆದರೆ ನನ್ನ "ಶೀಲ"ವನ್ನು ಕಾಯ್ದುಕೊಳ್ಳುವುದು ಸರ್ವಥೈವ ನನ್ನ ಕೈಯಲ್ಲಿರುವುದೆಂದು ಹೇಳಬಹುದು. ನನ್ನ "ಪ್ರಾರಬ್ಧ"ದಿಂದ ನಾನು ಬಡತಾಯಿ ತಂದೆಗಳ ಉದರದಲ್ಲಿ ಜನಿಸಿ, ವಿದ್ಯೆಯನ್ನು ಕಲಿಯಲಿಕ್ಕೆ ಸಾಕಷ್ಟು ಸಾಧನಗಳು ಸಿಗದ್ದರಿಂದ, ಮತ್ತು ನನ್ನ ದೇಹಾರೋಗ್ಯವನ್ನು ಕಾಯ್ದುಕೊಳ್ಳುವುದು ಅಶಕ್ಯವಾದ್ದರಿಂದ, ನಾನು ನಿರ್ಧನನಾದ ರೋಗಿಯಾದೆನೆಂದು ತಿಳಿಯುವ. ಇಂತಹ ಪರಿಸ್ಥಿತಿಯಲ್ಲಿ ಒಂದು ದಿವಸ ಅಕಸ್ಮಾತ್ತಾಗಿ ಬೇರೊಬ್ಬರ ಕೋಶಾಗಾರವು ನನ್ನ ಸ್ವಾಧೀನಕ್ಕೆ ಬಂದಿತೆಂದು ತಿಳಿದರೆ, ಅದನ್ನು ಮನಬಂದಂತೆ ನನ್ನ ಹಿತಕ್ಕೆ ಉಪಯೋಗಿಸೆಂದು ಹೇಳುವ ಸಾವಿರಾರು ವಿಚಾರಗಳು ನನ್ನ ತಲೆಯಲ್ಲಿ ಸೇರುವುದು ಸ್ವಾಭಾವಿಕವಾಗಿದೆ. ನನ್ನ ತಲೆಯಲ್ಲಿ ಆಗೊಂದು ದೊಡ್ಡ ಯುದ್ಧವೇ ನಡೆಯುವುದೆಂದೆನ್ನಬಹುದು. ಆದರೆ ಅಂಥಲ್ಲಿ ಕೂಡ ನಾನು ನನ್ನ ಮನಸ್ಸನ್ನು ಬಿಗಿಹಿಡಿದು ಸನ್ಮಾರ್ಗದಿಂದ ನಡೆದೆನೆಂದರೆ ನಾನು ಸಾಧುಜನರ ಮಾಲಿಕೆಯಲ್ಲಿ ಸೇರದೆ ಇರಲಾರೆನು. ನನ್ನನ್ನು ಅಡ್ಡಹಾದೀ ಹಿಡಸಲೆಸಗಿದ ಹೊರಗಿನ ಸಂಗತಿಗಳ ಸಂಯೋಗವೆಲ್ಲ ನನ್ನ "ಪ್ರಾರಬ್ಧ"ದಿಂದಾಗುವುದೆಂದು ಹೇಳಿದರೆ, ಇಷ್ಟಾದರೂ ಅದಕ್ಕೆ ಬಾಗದಿರುವ ಸ್ವಾತಂತ್ರ್ಯವು ನನ್ನಲ್ಲಿರುವುದೆಂದು ನಾವೆಲ್ಲರೂ ತಿಳಿಯುತ್ತೇವೆ. ಮತ್ತು ಇಷ್ಟು ಸ್ವತಂತ್ರತೆಯೂ ಮನುಷ್ಯನಿಗಿರದಿದ್ದರೆ ಪಾಪಪುಣ್ಯಗಳ ಕಲ್ಪನೆಯೇ ಹುಚ್ಚುತನದ್ದಾಗುವುದೆಂದು ಬೇರೆ ಹೇಳಬೇಕಾಗಿಲ್ಲ. " ಹೀಗೆ ಮಾಡುವುದು ನನ್ನ ಕರ್ತವ್ಯವು " ಎಂದು ಎಲ್ಲರಿಗೂ ಒಮ್ಮೊಮ್ಮೆ ಎನಿಸುತ್ತದಷ್ಟೇ ? ಎಂದಮೇಲೆ ಆ ಕರ್ತವ್ಯಭಾವನೆಯಿಂದಲೇ ನಾನು ಹಾಗೆ ಮಾಡುವುದು ಶಕ್ಯವಿರಬೇಕೆಂದು ಸಿದ್ಧವಾಗುವಂತಿದೆ. " ಕರ್ತವ್ಯವೆಂಬ ಕಲ್ಪನೆಯಿಂದ ಶಕ್ಯವಿರುತ್ತದೆಂಬ ಕಲ್ಪನೆಯು ಸಿದ್ಧವಾಗುವುದೆ"ಂದು ( Ought implies can ) ಪ್ರಸಿದ್ಧಪಂಡಿತನಾದ ಕಾಂಟನು ಹೇಳಿದ್ದಾನೆ. "ಒಂದೇ ಗಾಲಿಯಿಂದ ರಥವು

ಹೇಗೆ ಮುಂದೆ ಸಾಗಲಾರದೋ, ಹಾಗೆಯೇ ಪ್ರಯತ್ನವಿದ್ದವಿನಹ ದೈವವು ಸಫಲವಾಗಲಾರದು" ಎಂದು ಯಾಜ್ಞವಲ್ಕ್ಯರು ತಮ್ಮ ಸ್ಮೃತಿಯಲ್ಲಿ ಹೇಳಿದ್ದಾರೆ. ಕಿಂಬಹುನಾ, ಇಷ್ಟು ಸ್ವಾತಂತ್ರ್ಯವೂ ಮನುಷ್ಯನಿಗಿರದಿದ್ದರೆ ಈ ಜಗತ್ತಿನ ವ್ಯವಹಾರವೇ ಹುಚ್ಚುತನದ್ದಾಗುವುವೆಂದು ಹೇಳಬಹುದು. ಎಲ್ಲವೂ ಪ್ರಾರಬ್ಧವೆಂದರೆ, ಔಷಧಿಗಳೇಕೆ? ಪರೋಪಕಾರವೇಕೆ? ಮೋಕ್ಷವೇಕೆ? ಎಂಬ ಪ್ರಶ್ನೆಗಳು ನಿರುತ್ತರವಾಗುತ್ತವೆ. ಇದೆಲ್ಲದರ ಸಾರಾಂಶವಿಷ್ಟೇ: ಮನುಷ್ಯನು ಹೊರಗಣ ವಸ್ತುಗಳ ಮೇಲಷ್ಟೇ ಅವಲಂಬಿಸುವನೆಂದಲ್ಲ; ಅವನ ಆಂತರಂಗಿಕ ಸಂಗತಿಗಳೂ ಈ ವಿಷಯದಲ್ಲಿ ಪ್ರಮುಖವಾಗಿವೆ. ಮೊದಲನೆಯದೇ ದೈವವೆಂದೂ ಎರಡನೆಯದೇ ಪುರುಷಪ್ರಯತ್ನವೆಂದೂ ಬೇರೆ ಹೇಳಬೇಕಾಗಿಲ್ಲ.

ಆನುವಂಶಿಕ ಮತ್ತು ಪ್ರೇರೇಪಕ ಧರ್ಮಗಳು.

ಇದೇ ಮಾತನ್ನು ಈಗಿನ ಶಾಸ್ತ್ರೀಯ ಶಬ್ದಗಳಲ್ಲಿ ಮತ್ತೊಂದು ರೀತಿಯಿಂದ ತಿಳಿಸಿಕೊಡಬಹುದು. ಸುತ್ತಲಿನ ವಾತಾವರಣವೊಂದು, ತನ್ನ ಸ್ವಂತದ ಆಂತರಂಗಿಕ ಪರಿಸ್ಥಿತಿಯೊಂದು—ಹೀಗೆರಡು ಸಂಗತಿಗಳು ಕೂಡಿ ಮನುಷ್ಯನ ಇತಿಹಾಸವನ್ನು ಜರುಗಿಸುವ ಕಾರಣಗಳಾಗುವವೆಂದು ಹೇಳಬಹುದು. ಈ ವಿಷಯವು ಚೆನ್ನಾಗಿ ತಿಳಿಯಬೇಕಾದರೆ ನೀತಿಶಾಸ್ತ್ರದೊಳಗಿನದೊಂದು ಸುಲಭವಾದರೂ ಬಿಡಿಸಲಶಕ್ಯವಾದ ಕಲ್ಪನೆಯಿಂದ ಹೊರಡಬಹುದು. ಮನುಷ್ಯನು ಪರಿಸ್ಥಿತಿಗೆ ಆಧೀನನೋ, ಅಥವಾ ಪರಿಸ್ಥಿತಿಯೇ ಮನುಷ್ಯನಿಗೆ ಆಧೀನವೋ ಎಂಬುದೇ ಈ ಮಹತ್ತ್ವದ ಪ್ರಶ್ನೆಯು. ವೃಕ್ಷ ಬೀಜ ನ್ಯಾಯದಂತೆ ಇದಕ್ಕೆ ಕಡೆಯ ನಿರ್ಣಯವನ್ನು ಕೊಡುವುದು ಯಾರಿಗೂ ಶಕ್ಯವಿಲ್ಲ; ಆದರೂ ಅದನ್ನು ತುಸು ಚರ್ಚೆ ಮಾಡುವುದರಿಂದ, ಅದರ ಮರ್ಮವು ಎಲ್ಲರಿಗೂ ತಿಳಿಯುವಂತಿರುವುದು. ಪರಿಸ್ಥಿತಿಗೇ ಮನುಷ್ಯನು ಆಧೀನನಾದುದಾದರೆ ಒಂದೇ ತಾಯಿತಂದೆಗಳ ಹೊಟ್ಟೆಯಲ್ಲಿ ಹುಟ್ಟಿ, ಒಂದೇ ತರದ ವಾತಾವರಣದಲ್ಲಿ ಬೆಳೆದು, ಒಂದೇ ತರದ ಶಿಕ್ಷಣವನ್ನು ಪಡೆದರೂ ಸಹ, ಅಣ್ಣ ತಮ್ಮಂದಿರಲ್ಲಿ ಸ್ಪಷ್ಟವಾದ ವೈಪರೀತ್ಯವು ಕಾಣಬರುವುದೆಂಬ ಆನುಭವಿಕ ಮಾತು ಇದಕ್ಕೆ ವಿರುದ್ಧವಾಗುವುದು. ಅದಕ್ಕೆ ವಿರುದ್ಧವಾಗಿ "ನಾನಾದರೂ ಏನು ಮಾಡಲಿ ? ಪರಿಸ್ಥಿತಿಯೇ ಹಾಗೆ ಬಂದುದರಿಂದ ನಾನು ಹಾಗೆ ಮಾಡಬೇಕಾಯಿತು. ನನ್ನ ಮನಸಿನಲ್ಲಿ ಅದನ್ನು ಮಾಡಬೇಕೆಂದು ತುಸುವಾದರೂ ಇರಲಿಲ್ಲ"ವೆಂದು ಹೇಳುವ ಪ್ರಸಂಗಗಳೂ ಹಲವು ಸಾರೆ ನಮ್ಮ

ಆಯುಷ್ಯದಲ್ಲಿ ಬರುವವು. ಸಂಗತಿಗೆ ತಕ್ಕಂತೆ ನಮ್ಮ ಗುಣಗಳಾಗುವವೆಂದು ಹೇಳುವುದರ ಅರ್ಥವೂ ಇದೇ. ಹತ್ತು ಜನ ಮಿತ್ರರು ಮುಂಬೈಗೆ ಹೋದರೆ ಅವರೆಲ್ಲ ಅಲ್ಲಿ ಒಂದು ವಿಶಿಷ್ಟಕ್ರಮವನ್ನನುಸರಿಸಿ ನಡೆಯಬೇಕಾಗುವುದು. ಎಂದರೆ ಮುಂಬೈ ಶಹರದ ಪರಿಸ್ಥಿತಿಗೆ ತಕ್ಕಂತೆ ಅವರು ತಮ್ಮ ದಿನಚರ್ಯೆಯನ್ನಿಡಬೇಕಾಗುವುದು. ಎಂದರೆ ಮುಂಬಯಿ ಪಟ್ಟಣದ ಸ್ಥಿತಿಗತಿಗಳೆಲ್ಲ ಅಲ್ಲಿಯ ಪರಿಸ್ಥಿತಿಯೆಂದು ಕಲ್ಪಿಸಿದರೆ, ಅವರೆಲ್ಲರೂ ಮುಂಬೈ ನಗರಕ್ಕೆ ಆ ಮಟ್ಟಿಗೆ ಆಧೀನರಾಗಿರುವರೆಂದು ಹೇಳಬೇಕಾಗುವುದು. ಆದರೆ ಅವರಲ್ಲಿ ಯಾವನಿಗೆ ಯಾವ ತರದ ವಿಷಯುಗಳಲ್ಲಿ ಅಭಿರುಚಿಯಿರುವುದೋ ಅವನು ಆ ವಿಷಯುಗಳನ್ನೇ ಸೇವಿಸುವನೆಂಬುದು ಸಹಜವಿದೆ. ಎಂದರೆ ಹತ್ತೂ ಜನರ ಪರಿಸ್ಥಿತಿಯು ಒಂದೇ ತೆರನಾಗಿದ್ದರೂ ಕೂಡ, ತಾನು ಅವುಗಳಲ್ಲಿ ಯಾವ ವಿಷಯುಗಳನ್ನು ಭೋಗಿಸಬೇಕೆಂಬುದನ್ನು ನಿರ್ಣಯಿಸಿ ಅದರಂತೆ ನಡೆಯುವುದು ಪ್ರತಿಯೊಬ್ಬ ವ್ಯಕ್ತಿಯ ಸ್ವಾಧೀನದ ಮಾತು. ಒಬ್ಬನು ಪದಾರ್ಥ ಸಂಗ್ರಹಾಲಯ( Museum ) ಗಳಿಗೂ ಕಲಾಭವನಗಳಿಗೂ ಮನಸೋತು ಅಲ್ಲಿಯೇ ಆಸಕ್ತನಾವನೆಂದರೆ, ಬೇರೆಯವನೊಬ್ಬನು ವ್ಯಾಪಾರದಲ್ಲಿ ಮಗ್ನನಾಗಿ ಹೋಗಬಹುದು. ಇನ್ನೂ ಒಬ್ಬನು ಅಲ್ಲಿಯ ಸಮುದ್ರಚಮತ್ಕಾರಗಳಲ್ಲಿ ಆನಂದವನ್ನು ಕಂಡರೆ, ಮತ್ತೊಬ್ಬನು ಅಲ್ಲಿಯ ನವತರುಣಿಯರ ನವೀನಕಲ್ಪಗಳಿಗೆ ( new fashions ) ಮರುಳಾಗಬಹುದು. ಇನ್ನೊಬ್ಬನು ಅಲ್ಲಿಯ ವಿದ್ಯಾಪೀಠಗಳಿಗೂ ವಾಚನಾಲಯಗಳಿಗೂ ಮೋಹಗೊಂಡರೆ, ಮಗದೊಬ್ಬನು ಆ ನಗರರಚನೆಯನ್ನೂ, ಅಲ್ಲಿಯ ಸುವ್ಯವಸ್ಥೆಯನ್ನೂ ಕಂಡು ಅಚ್ಚರಿಪಡಬಹುದು. ಹೀಗೆ ಅವರು ತಮ್ಮ ತಮ್ಮ ಅಭಿರುಚಿಗಳಿಗೆ ತಕ್ಕಂತೆ ವಿಷಯುಗಳನ್ನು ತಾವೇ ಆರಿಸಿಕೊಂಡು ಸುಖಪಡಬಹುದು. ಆದರೆ ಇಲ್ಲಿಯೂ ಕೂಡ ಒಂದು ರೀತಿಯಿಂದ ವಿಚಾರಮಾಡಿದರೆ ಪರಿಸ್ಥಿತಿಯನ್ನೇ ಅವರು ಸ್ವಾಧೀನಪಡಿಸಿಕೊಳ್ಳುವಂತೆ ಕಾಣುತ್ತದೆ. ತಾವು ಯಾವ ಭಾಗದಲ್ಲಿ ಸೇರುವೆವೆಂಬುದನ್ನು ನಿಶ್ಚಯಿಸಿ ಅಲ್ಲಿಯೇ ರಮಿಸುವುದರಿಂದ ಆ ಪರಿಸ್ಥಿತಿಯೂ ಅವರಿಗೆ ಕೆಲಮಟ್ಟಿಗೆ ಆಧೀನವಾದಂತಾಗಲಿಲ್ಲವೇ ? ಎಂದರೆ ಶೀಲವು ಪರಿಸ್ಥಿತಿಯ ಫಲವೋ, ಅಥವಾ ಪರಿಸ್ಥಿತಿಯೇ ಶೀಲದ ಫಲವೋ ಎಂಬುದನ್ನು ನಿರ್ಣಯಿಸುವುದು ಬಲು ಕಷ್ಟವೆಂದು ಹೇಳಬಹುದು. ಆದರೆ ಬಾಹ್ಯ ವಸ್ತುಗಳ ಹೊಡೆತ (Pressure of environment) ಮತ್ತು ಆಂತರಂಗಿಕ ಸ್ವಭಾವ

ಗಳೆಂಬ ಎರಡು ವಿಷಯುಗಳ ಫಲವೇ ನಮ್ಮ ಆಯುಷ್ಯವೆಂಬುವುದು ಸ್ಪಷ್ಟವಿದೆ. ಇದನ್ನೇ ಸ್ಪೆನ್ಸರ ಸಾಹೇಬರು "ಆಂತರಂಗಿಕ ಸಂಗತಿಗಳನ್ನು ಬಾಹ್ಯಸಂಗತಿಗಳೊಡನೆ ಮೇಳಹಾಕಬೇಕೆಂಬ ನಿತ್ಯ ಪ್ರಯತ್ನವೇ ಜೀವ ಅಥವಾ ಆಯುಷ್ಯವೆಂ"ದು ಒಂದೆಡೆಗೆ "ಜೀವ" ಶಬ್ದದ ವ್ಯಾಖ್ಯೆಯನ್ನು ಕೊಡುವಾಗ ಹೇಳಿದ್ದಾರೆ. ಇದೆಲ್ಲವರ ಸಾರಾಂಶವಿಷ್ಟೇ: ಪ್ರತಿಯೊಂದು ಸಜೀವಪ್ರಾಣಿಯು ಎರಡು ತರದ ವಿಷಯುಗಳ ಸಂಯೋಗದ ಫಲವೆಂದು ಹೇಳಬಹುದು. ಅದು ಯಾವ ಪರಿಸ್ಥಿತಿಯಲ್ಲಿ ಬೆಳೆಯುವುದೋ ಆ ಸುತ್ತಲಿನ ಪರಿಸ್ಥಿತಿಯನ್ನುಂಟುಮಾಡುವ ಪ್ರೇರೇಪಕಗಳೇ ಮೊದಲನೆಯ ತರದ ವಿಷಯುಗಳು. ತಾಯಿತಂದೆಗಳಿಂದ ಜೀವಕೋಶಗಳ ರೂಪದಿಂದ ಸೇರಿ ನಮ್ಮ ದೇಹರಚನೆಯನ್ನುಂಟುಮಾಡುವ ಆನುವಂಶಿಕ ವಿಷಯುಗಳು ಎರಡನೆಯ ತರದವು. (ಸಜೀವಪ್ರಾಣಿಗಳ ವಿಕಾಸವು. ಪು. ೪೨) ಎಂದರೆ ಪ್ರತಿಯೊಂದು ಜೀವಿಯು ಮಾನಸಿಕ ದೈಹಿಕ ರಚನೆಗಳಿಗೆ ಇವೇ ಎರಡು ವಿಷಯುಗಳು ಕಾರಣಗಳೆಂದು ಇದೆಲ್ಲದರ ಅರ್ಥವು.

**ವಿಕಾಸದ ಕಾರಣಗಳು**

ಈ ರೀತಿಯಿಂದ ಇದ್ದ ಪ್ರಾಣಿವರ್ಗಗಳಲ್ಲಿ ಹೆಚ್ಚುಕಡಿಮೆಗಳಾಗುತ್ತ ಹೋಗಿ ಸದೃಶಜೀವಿಗಳಿಂದ ವಿಸದೃಶಜೀವಿಗಳ ಉತ್ಪತ್ತಿಯೂ ಕಾಲಾಂತರದಿಂದ ಆಗಬಹುದು. ಈ ಮಾತನ್ನು ಡಾರ್ವಿನ್ನನು "ಪ್ರಾಣಿವರ್ಗಗಳ ಉತ್ಪತ್ತಿ"ಯೆಂಬ ಪುಸ್ತಕದ ೧ನೆಯ ಪ್ರಕರಣದಲ್ಲಿ ಸ್ಪಷ್ಟಮಾಡಿ ತೋರಿಸಿದ್ದಾನೆ. "ಈ ವಿಷಯುವನ್ನು ಬಲು ದೀರ್ಘಕಾಲದ ವರೆಗೆ ವಿಚಾರಮಾಡಿ ನಾನಂತೂ ಈ ಸಿದ್ಧಾಂತಗಳಿಗೆ ಬಂದುಮುಟ್ಟಿರುವೆನು. ಜೀವನದ ಸಂಗತಿಗಳು (Conditions of life) ಎರಡು ತರದಿಂದ ಕೆಲಸ ನಡೆಸಿರುವಂತೆ ಕಾಣುತ್ತವೆ. ದೇಹ ಅಥವಾ ಅದರ ಕೆಲವು ಭಾಗಗಳ ಮೇಲೆ ಪ್ರತ್ಯಕ್ಷವಾಗಿ, ಮತ್ತು ಜನನೇಂದ್ರಿಯುಗಳ ಮೇಲೆ ಅಪ್ರತ್ಯಕ್ಷವಾಗಿ ಈ ಸಂಗತಿಗಳು ತಮ್ಮ ಪರಿಣಾಮವನ್ನು ತೋರಿಸುವವು. ಮೊದಲನೆಯ ತರದ ಪ್ರತ್ಯಕ್ಷ ಪರಿಣಾಮದಲ್ಲಿ ಎರಡು ವಿಷಯುಗಳು ಮಹತ್ತ್ವದವಾಗಿವೆ; (೧) ಆ ಶರೀರಿಯ ಶರೀರ, ಮತ್ತು (೨) ಬಾಹ್ಯ ಸಂಗತಿಗಳ ರೂಪ. ಇವುಗಳಲ್ಲಿ ಮೊದಲನೆಯುದು ಹೆಚ್ಚು ಮಹತ್ತ್ವದ್ದೆಂದು ತೋರುತ್ತದೆ. ಯಾಕೆಂದರೆ ತೀರ ಭಿನ್ನವಾದ ಹೊರಗಣ ವಸ್ತುಗಳಲ್ಲಿ ಕೂಡ ಒಂದೇ ತರದ ಮಾರ್ಪಾಟುಗಳಾಗಿರುವವೆಂದು ಕಂಡುಬರುತ್ತದೆ. ಮತ್ತು ಬಾಹ್ಯವಸ್ತುಗಳು

ಸರಾಸರಿ ಒಂದೇ ತೆರನಾಗಿದ್ದರೂ ಭಿನ್ನವಾದ ಮಾರ್ಪಾಟುಗಳು ಸಂಭವಿಸುವವೆಂಬುದೂ ಅದರಂತೆಯೇ ಕಂಡುಬರದಿರಲಾರದು. " ಇದರ ವಿಷಯಕ್ಕೆ ಉಪಯುಕ್ತವಾದ ಎಲ್ಲ ವಿಷಯವನ್ನು ಡಾರ್ವಿನ್ನನು ಒಂದೇ ಅರ್ಥವತ್ತಾದ ವಾಕ್ಯದಲ್ಲಿ ಸಂಹರಿಸಿದ್ದಾನೆ. " ಬದುಕಿ ಉಳಿಯುವುವು ಶಕ್ಯವಿರುವುದಕ್ಕಿಂತ ಹೆಚ್ಚಾದ ಪ್ರಾಣಿಗಳು ಪ್ರತಿಯೊಂದು ಪ್ರಾಣಿವರ್ಗದಲ್ಲಿ ಹುಟ್ಟುವವು. ( ಇದಕ್ಕೆ ಮಿತಿಮೀರಿದ ಜನನವೆಂದು ಹೆಸರು. Over-production ); ಅದರಿಂದ ನಿತ್ಯವಾದ ಜೀವನಕಲಹವು ಮೇಲಿಂದ ಮೇಲೆ ಸಂಭವಿಸುವುದು ( Struggle for existence ). ಯಾವ ಪ್ರಾಣಿಯು ಸುತ್ತಲಿನ ಪರಿಸ್ಥಿತಿಗೆ ( Environmental condition ) ಅನುಕೂಲವಾಗುವಂತಹ ಮಾರ್ಪಾಟುಗಳನ್ನು ಪಡೆಯುವುದೋ ( individual Variation ) ಅದೇ ಹೆಚ್ಚು ಕಾಲ ಬದುಕಿ ಉಳಿಯುವುದು (Survival of the fittest). ಎಂತೆಯೇ ಪ್ರಕೃತಿಯು ಆ ಪ್ರಾಣಿಯನ್ನು ಆರಿಸಿ ತೆಗೆಯುವುದು (Natural Selection). ದೃಢವಾದ ಆನುವಂಶಿಕ ನಿಯಮಕ್ಕನುಸರಿಸಿ ( law of Heredity ) ಹೀಗೆ ಆರಿಸಲ್ಪಟ್ಟ ಪ್ರಾಣಿವರ್ಗಗಳು ತಮ್ಮ ಇಂತಹ ಉಪಯುಕ್ತವಾದ ಮಾರ್ಪಾಟುಗಳಿಂದ ಯುಕ್ತವಾದ ಸಂತತಿಯನ್ನು ಹುಟ್ಟಿಸಿ ಅದನ್ನೇ ಬೆಳಸುತ್ತ ಹೋಗುವವು. " ಇದರೊಳಗೆ ಅಡಕವಾದ ವಿಚಾರಗಳನ್ನು ಚರ್ಚಿಸಿದರೆ ಈ ವಿಷಯವೆಲ್ಲ ಮನದಟ್ಟಾಗದಿರದು.

ವಾಲೇಸನ ಅತಿಪ್ರಜೆಯ ತತ್ತ್ವವು

ವಾಲೇಸನು (Wallace) ತನ್ನ "Essays on Natural Selection" ಎಂಬ ಪುಸ್ತಕದ ೨೬೫ನೇ ಪುಟದಲ್ಲಿ ಇದೇ ವಿಷಯವನ್ನು ಚರ್ಚಿಸಿದ್ದಾನೆ. ಮೊದಲನೆಯದನ್ನು ಅವನು ಭೌಮಿತಿಕಶ್ರೇಢಿಯಂತೆ ( ಗುಣಿಸುತ್ತಹೋಗುವ ) ಸಂತತಿ ವರ್ಧನದ ನಿಯಮವು (The law of multiplication in Geometrical Progression) ಎಂದು ಕರೆದಿದ್ದಾನೆ. ೨,೪,೮,೧೬,೩೨,...ಅಥವಾ ೩,೯,೨೭,೮೧,... ಮೊದಲಾದವುಗಳನ್ನು ಭೂಮಿತಿ ಶ್ರೇಢಿಯೆಂದು ಕರೆಯುತ್ತಾರೆ. ಸಜೀವಪ್ರಾಣಿಗಳೆಲ್ಲ ಬಹಳೇ ವೇಗದಿಂದ ತಮ್ಮ ವಂಶವಿಸ್ತಾರವನ್ನು ಬೆಳಸುತ್ತಹೋಗುತ್ತವೆ. ಆ ವಂಶವಿಸ್ತಾರದ ಹಬ್ಬುವಿಕೆಯೇ ಮೇಲೆ ಹೇಳಿದ ಪ್ರಮಾಣದಿಂದಾಗುತ್ತ ಹೋಗುತ್ತದೆಂದು ಶಾಸ್ತ್ರಜ್ಞರು

ನಿರ್ಣಯಿಸಿದ್ದಾರೆ. ನೊಣಗಳ ಒಂದು ಮಿಥುನವು ಅಲ್ಪಕಾಲದಲ್ಲಿಯೇ ೨೦ಸಾವಿರ ನೊಣಗಳನ್ನು ಹುಟ್ಟಿಸಬಹುದು! ಒಂದೇ ಮೀನವು ೯೦ಲಕ್ಷ ಮೀನಗಳನ್ನು ಜನಯಿಸಬಹುದು; ಮಾರಿಕೆ ಬೇನೆಯನ್ನು ಹರಡಿಸುವ ಒಂದೇ ಜಂತುವು (Cholera bacillus) ಒಂದೇ ದಿವಸದಲ್ಲಿ ಅಬ್ಜಗಟ್ಟಲೆ ಜಂತುಗಳನ್ನು ಹುಟ್ಟಿಸಬಹುದು! ಮನುಷ್ಯನ ವಂಶವಿಸ್ತಾರಶಕ್ತಿಯು ಇದೆಲ್ಲಕ್ಕಿಂತ ಬಹಳೇ ಕಡಿಮೆಯೆಂಬುವುದು ನಿಜ. ಆದರೆ ಅವನೂ ಕೂಡ ೧೫ವರುಷಗಳಲ್ಲಿ ದ್ವಿಗುಣಿತನಾಗಬಹುದು. ಆದರೆ ಇಷ್ಟು ವಂಶವಿಸ್ತಾರವು ಅಪ್ರತಿಬಂಧವಾಗಿ ನಡೆಯುವುದು ಶಕ್ಯವಿಲ್ಲ. ಆದರೂ ಕೂಡ ಪ್ರತಿಯೊಂದು ಪ್ರಾಣಿಯು ತನ್ನ ಅನಿಯಮಿತವಾದ ವಂಶವಿಸ್ತಾರಕ್ಕಾಗಿ ಪ್ರತಿಕ್ಷಣದಲ್ಲಿಯೂ ಹೆಣಗಾಡುತ್ತಿರುವುದೆಂದೆನ್ನಬಹುದು. ಮತ್ತು ಹೀಗೆ ವಂಶವಿಸ್ತಾರವನ್ನು ಮಾಡಿದರೆ ಅದು ಬದುಕುವುದು ಹೇಗೆ? ಎಂಬ ಪ್ರಶ್ನೆಯು ಸಹಜವಾಗಿಯೇ ಹುಟ್ಟಬಹುದಾದುದರಿಂದ, ಅದಕ್ಕೆ ಇಲ್ಲಿ ಉತ್ತರಕೊಡುವುದು ಅವಶ್ಯವು. ಇಂಗ್ಲಂಡ ಮೊದಲಾದ ರಾಷ್ಟ್ರಗಳು ತಮ್ಮ ಮಿತಿಮೀರಿದ ಪ್ರಜೆಗಳಿಗೆ ಯಾವ ತರದ ಸಾಧನಸಂಪತ್ತಿಗಳನ್ನೊದಗಿಸಿ ಕೊಡುತ್ತಬಂದಿವೆಯೋ ಅಂತಹ ಪದ್ಧತಿಗಳನ್ನೇ ಎಲ್ಲ ಪ್ರಾಣಿಗಳೂ ಅಕ್ಷರಶಃ ಅನುಸರಿಸುತ್ತ ಬಂದಿರುವವೆಂದು ಹೇಳಬಹುದು. ಆಸ್ಟ್ರೇಲಿಯಾ, ಆಫ್ರಿಕಾ, ಅಮೇರಿಕಾ, ನ್ಯೂಝಿಲಂಡ ಮೊದಲಾದ ದೇಶಗಳೆಲ್ಲ ಈ ರೀತಿಯಿಂದಲೇ ಪ್ರಜಾಪೂರ್ಣವಾದವೆಂಬುದು ಎಲ್ಲರಿಗೂ ಗೊತ್ತಿದ್ದ ಮಾತು. ಮಾತೃಭೂಮಿಯಾದ ಇಂಗ್ಲಂಡದಲ್ಲಿ ಭೂಮಿಯು ಸಾಕಾಗದಂತಾಗಲು ಅವರು ಮೇಲೆ ಹೇಳಿದ ದೇಶಗಳಿಗೆ ಹೋಗಿ ವಸಾಹತು ಮಾಡುತ್ತಾರಷ್ಟೇ? ಹಾಗೆಯೇ ಎಲ್ಲ ಪ್ರಾಣಿಗಳೂ ಬೇರೆಬೇರೆ ವಸಾಹತುಗಳನ್ನು ಸ್ಥಾಪಿಸಿಕೊಳ್ಳಲಿಕ್ಕೆ ಯತ್ನಿಸುತ್ತಿರುವವೆಂದೆನ್ನಬಹುದು. ಉನ್ನತವಾದ ಪರ್ವತಶಿಖರಗಳಿಂದ ಹಿಡಿದು ಸಮುದ್ರಗಳ ಅನಂತವಾದ ತಳಗಳವರೆಗೆ ಸಿಗಬಹುದಾದ ಪ್ರತಿಯೊಂದು ಅವಕಾಶಪರಮಾಣುವನ್ನೂ ಕೂಡ ಆ ವಂಶವಿಸ್ತಾರವು ತನ್ನ ಸ್ವಾಧೀನಪಡಿಸಿಕೊಳ್ಳಲಿಕ್ಕೆ ಹವಣಿಸುತ್ತಿರುವುದು. ಮತ್ತು ಆ ಆ ಸ್ಥಾನಗಳಲ್ಲಿ ವಾಸಿಸಲಿಕ್ಕೆ ಬೇಕಾಗುವಂತಹ ಜೀವರೂಪಗಳನ್ನು ಧಾರಣಮಾಡುತ್ತಿರುವುದು. ಎಂದರೆ ಮನುಷ್ಯನು ಅತ್ಯುಷ್ಣ, ಉಷ್ಣ, ಸಮಶೀತೋಷ್ಣ, ಶೀತ, ಅತಿಶೀತ, ಮೊದಲಾದ ಪ್ರದೇಶಗಳಲ್ಲಿ ಹೇಗೆ ಬೇಕಾದ ಪರಿವರ್ತನೆಗಳನ್ನು ಮಾಡಿಕೊಂಡು ಜೀವಿಸಹತ್ತುವನೋ ಹಾಗೆಯೇ ಉಳಿದೆಲ್ಲ ಜೀವಿಗಳೂ ಮಾಡುವವೆಂದು ಇದರ ಅರ್ಥವು. ಕಿಂಬಹುನಾ, ಜೀವಿಗಳೆಲ್ಲ

ತಮ್ಮ ಜೀವನಕ್ಕಾಗಿ ಉಳಿದ ಜೀವಿಗಳನ್ನು ನಾಶಪಡಿಸಬೇಕೆಂದು ಹಗಲಿರುಳೂ ಚಿಂತಿಸುತ್ತಲೇ ಇರುವವೆಂದು ಹೇಳಿದರೆ ತಪ್ಪಾಗಲಾರದು. ಅವುಗಳಲ್ಲಿ ಯಾವು ದೊಂದು ಬಲಿಷ್ಠವಾದರೆ ಅದು ಉಳಿದ ಪ್ರಾಣಿಗಳ ರಕ್ತದಿಂದಲೇ! "ಜೀವೋ ಜೀವಸ್ಯ ಜೀವನಮ್" ಎಂಬ ಮಾತು ಅಕ್ಷರಶಃ ಸತ್ಯವಿದೆ. ಯಾವುದೊಂದು ಪ್ರಾಂತದೊಳಗಿನ ಜೀವರಾಶಿಯೆಂದರೆ (ವನಸ್ಪತಿವರ್ಗಸಹಿತ) ಆ ಪ್ರಾಂತ ದೊಳಗಿದ್ದುಕೊಂಡು, ಅಲ್ಲಿಯ ಜೀವನಸೌಕರ್ಯಗಳ ಉಪಯೋಗವನ್ನೆಲ್ಲ ಸಂಪೂರ್ಣವಾಗಿ ಮಾಡಿಕೊಂಡು, ಚೀಲದೊಳಗಿನ ಕಲ್ಲುಗಳಂತೆ ಒಂದಕ್ಕೊಂದು ಹತ್ತಿಕೊಂಡು, ತಮತಮಗೆ ವಿಹಿತವಾದ ಸ್ಥಾನಗಳಲ್ಲಿ ವಾಸಿಸುತ್ತಿರುವ ಪ್ರಾಣಿ ಗಳ ಸಮೂಹವೆಂದು ವರ್ಣನೆಮಾಡಬಹುದು. ಕೆಲವು ದಿವಸಗಳ ಮೇಲೆ ಆ ಆ ಪ್ರಾಣಿಜಾತಿಗಳ ಸಂಖ್ಯೆಯು ಕೆಲವೊಂದು ಮಿತಿಗೆ ಬಂದು ಅಲ್ಲಿ ಸ್ಥಿರವಾಗಿ ನಿಲ್ಲು ವುದು. (ಸಜೀವಪ್ರಾಣಿಗಳ ವಿಕಾಸವು ಪು. ೬೧).

ಈ ರೀತಿಯಾಗಿ ಪ್ರಾಣಿಸಂಖ್ಯೆಯು ಮಿತಿಮೀರಿ ಬೆಳೆಯುತ್ತಿರುವುದರಿಂದ ಜೀವನಕಲಹವು ಸಹಜವಾಗಿಯೇ ಘೋರರೂಪವನ್ನು ತಾಳಬೇಕಾಗುವುದು.

**ಅದರಿಂದುಂಟಾಗುವ ಜೀವನಕಲಹವು**

ಮೇಲೆ ಹೇಳಿದಂತೆ ಆ ಸಂಖ್ಯೆಯು ಕೆಲವೊಂದು ಮಿತಿಗೆ ಬಂದು ಅಲ್ಲಿ ಸ್ಥಿರವಾಗಿ ನಿಲ್ಲುವುದೆಂಬುದು ನಿಜ. ಆದರೆ ಬೇರೆ ಕೆಲವು ಸಂಗತಿಗಳ ಮೂಲಕ ಆ ಸ್ಥಿತಿಯು ಅಕ ಸ್ಮಾತ್ತಾಗಿ ಬದಲಾಯಿತೆಂದರೆ ಈ ಕಲಹದ ವಿಕೃತರೂಪವನ್ನು ನೋಡಲಾಸಲ್ಲ. ಹವೆಯೊಳಗಿನ ಬದಲಾವಣೆಗಳೂ, ಜೆಟ್ಟಿ ಮೊದಲಾದ ಹುಳಗಳ ಸೈನ್ಯವೂ, ಬೇನೆಗಳ ಸುಳಿದಾಟವೂ ಇದರ ಉದಾಹರಣೆಗಳು. ಒಂದೇ ತರದ ಪ್ರಾಣಿಗಳು ಅನ್ಯೋನ್ಯರ ಜೀವನಯಾತ್ರೆಗೆ ಹೆಚ್ಚಾಗಿ ಅಡ್ಡಬರುವುದರಿಂದ ಸಮಾನವಂಶದ ಪ್ರಾಣಿವರ್ಗಗಳಲ್ಲಿ ಈ ಕಲಹವು ಹೆಚ್ಚು ಕ್ರೂರವಾಗುತ್ತದೆ. ಅದರಲ್ಲಿಯೂ ಅದೇ ಜಾತಿಯಲ್ಲಿ ಬಣಬಣಗಳ ನಡುವೆ, ಕುಲಕುಲಗಳಲ್ಲಿ, ಮನೆಮನೆಗೆ, ಊರು ಊರಿಗೆ, ಮತ್ತು ಉಳಿದ ಸಾಮಾಜಿಕ ಸಂಸ್ಥೆಗಳ ನಡುವೆ, ಕಿಂಬಹುನಾ, ವ್ಯಕ್ತಿ ವ್ಯಕ್ತಿಗಳಲ್ಲಿ ಕೂಡ ಇದು ತನ್ನ ದಾರುಣವಾದ ರೂಪವನ್ನು ತೀರ ಕನಿಕರವಿಲ್ಲದೆ ತೋರಿಸುತ್ತಿರುವುದೆಂಬುದು ಎಲ್ಲರಿಗೂ ಗೊತ್ತಿದ್ದ ಮಾತು. ಹೆಚ್ಚೇನು? "ಸೃಷ್ಟಿ ಯಲ್ಲಿ ನೀತಿಯಿಲ್ಲ; ಸಹಾನುಭೂತಿಯಿಲ್ಲ; ದಯೆಯ ಗಂಧವೂ ಕೂಡ ಇಲ್ಲ" ವೆಂದು ಈಗಿನ ಶಾಸ್ತ್ರಕಾರರು ನಿರ್ಣಯಿಸಿದ್ದಾರೆ. ಬಲವೇ ನ್ಯಾಯವೆಂದೂ

ಬಲಿಷ್ಠರ ಹಿತವೇ ನೀತಿಯೆಂದೂ ನಿರ್ಣಯಿಸಿ ಅದಕ್ಕನುಸರಿಸಿ ನಡೆಯುವುದೇ ತಮಗೆ ವಿಹಿತವಾದುದೆಂದು ಪಾಶ್ಚಿಮಾತ್ಯರು ತಿಳಿದುಕೊಂಡಿರುವುದು ಈ ಜೀವನ ಕಲಹದ ದೃಷ್ಟಾಂತದಿಂದಲೇ !

ಜೀವನ ಕಲಹದಲ್ಲಿ ಜಯವು ಹೇಗಾಗಬಹುದು?

ಈ ಜೀವನಕಲಹದಲ್ಲಿ ಯಾರು ಪರಿಸ್ಥಿತಿಗೆ ಅನುಸರಿಸಿ ನಡೆಯುಹತ್ತುವರೋ ಅವರೇ ಮುಂದೆಬರುವರೆಂಬುದು ಮೇಲಿನ ಮಾತುಗಳ ಮೇಲಿಂದ ಸ್ಪಷ್ಟವಾಗುವಂತಿದೆ. ಮುಖ್ಯವಾಗಿ ಹವೆಯ ಬದಲಾವಣೆಗಳನ್ನು ತಡಕೊಳ್ಳುವ ಶಕ್ತಿಯು ಪ್ರಾಣಿಗಳಲ್ಲಿ ಅವಶ್ಯವಾಗಿ ಇರಬೇಕಾಗುವುದು. ಭೌತಿಕಶಾಸ್ತ್ರಗಳ ಅಭ್ಯಾಸ ಮಾಡಿಕೊಂಡು ಮನುಷ್ಯನು ಈ ರೀತಿಯಿಂದಲೇ ಮುಂದುವರಿದಿರುವನೆಂದು ಹೇಳಬಹುದು. ಜ್ಞಾನವೆಂದರೆ ಸೃಷ್ಟಿಯ ಮೇಲಣ ಒಡೆತನವೆಂದು ಹೇಳಿರುವುದರ ಮರ್ಮವಾದರೂ ಇದೇ. ಮನುಷ್ಯನು ಸೃಷ್ಟಿಯ ನಿಯಮಗಳನ್ನು ಸೂಕ್ಷ್ಮ ರೀತಿಯಿಂದ ಅಭ್ಯಾಸಮಾಡಿ, ಮುಂದೆ ತನಗೆ ಯಾವ ತರದ ವಿಘ್ನಗಳು ಬರಬಹುದೆಂಬುದನ್ನು ಮೊದಲೇ ತಿಳಿದುನೋಡಿ, ಅವಕ್ಕೆ ತಕ್ಕ ಪ್ರತೀಕಾರದ ಹಂಚಿಕೆಗಳನ್ನು ಮಾಡಿಡುವನು. ನಿತ್ಯದ ನಮ್ಮ ವ್ಯವಹಾರವೆಲ್ಲ ಇದೇ ತತ್ತ್ವದ ಉದಾಹರಣೆಯಾಗಿರುವುದು. ಮಳೆಗಾಲ ಬರುವುದರಿಂದ ಆಹಾರಸಂಗ್ರಹವನ್ನು ಮಾಡಿಡಬೇಕೆಂದೂ, ಜಲಪ್ರವಾಸಕ್ಕೆ ಹೋಗುವುದಾದರೆ ಸಂಗಡ ಕೆಲವು ಆವಶ್ಯಕವಾದ ಸಾಮಾನುಗಳನ್ನು ಒಯ್ಯಬೇಕೆಂದೂ ಅವನು ವಿಚಾರಮಾಡಿ, ಅದೇ ರೀತಿಯಿಂದ ತನ್ನ ಕಾರ್ಯವನ್ನು ಸಾಧಿಸುವುದರಿಂದ, ಈ ಜೀವನಕಲಹದಲ್ಲಿ ಅವನಷ್ಟು ಮುಂದೆಬಂದಿದ್ದಾನೆ. ಉಳಿದ ಪ್ರಾಣಿಗಳಿಗೆ ಈ ತರದ ಹಿಂದುಮುಂದಿನ ವಿಚಾರವು ಇರದ್ದರಿಂದಲೇ ಅವು ಸೃಷ್ಟಿಯ ಅಪಘಾತಗಳಿಗೆ ಅಷ್ಟು ತೀವ್ರವಾಗಿ ನಾಶವಾಗಿ ಹೋಗುವವು. ಬೇಕಾದಂತಹ ಪರಿಸ್ಥಿತಿಯಲ್ಲಿ ಇರಲಿಕ್ಕೆ ಸಿದ್ಧನಾದ ಮನುಷ್ಯನು ಉಳಿದ ಮನುಷ್ಯರಿಗಿಂತ ಈ ಕಲಹದಲ್ಲಿ ಹೆಚ್ಚು ಯಶಸ್ವಿಯಾಗುವನು. ಎಂತೆಯೇ ಶಾಸ್ತ್ರಜ್ಞರಾದ ಪಾಶ್ಚಾತ್ಯರು ನಮ್ಮನ್ನು ಹಿಂದೆಹಾಕಿ ತಾವು ಜಗತ್ತಿನ ಸಾರ್ವಭೌಮತ್ವವನ್ನು ಸಂಪಾದಿಸಿರುವರು. ಮತ್ತೂ ಅದರಿಂದಲೇ ಅಮೇರಿಕಾ, ಆಫ್ರಿಕಾ, ಆಸ್ಟ್ರೇಲಿಯಾ ಮತ್ತು ನ್ಯೂಝಿಲಂಡಗಳಿಗೆ ಹೋಗಿ, ವಸಾಹತುಮಾಡಿ, ಅಲ್ಲಿಯ ಮೂಲನಿವಾಸಿಗಳನ್ನು ನಾಮಶೇಷಮಾಡಿರುವರು.

ಪರಿಸ್ಥಿತಿಗೆ ಅನುಸರಿಸಿ ನಡೆಯುವಾಗ ನಾವು ನಮ್ಮ ಗುಣಧರ್ಮಗಳಲ್ಲಿ ಕೆಲವು ಮಾರ್ಪಾಟುಗಳನ್ನು ಮಾಡಿಕೊಳ್ಳುತ್ತೇವೆ. ಇಂಗ್ಲಿಷ ಜನರು ಉಷ್ಣ ಕಟಿಬಂಧದ ಪ್ರದೇಶಗಳಿಗೆ ಬಂದರೆಂದರೆ ಅವರ ಬಣ್ಣವು ಕಂದಾಗುವುದು. ಈ ಕಂದೀಬಣ್ಣವು ಹೊರಗಿನ ಪರಿಸ್ಥಿತಿಯ ಪ್ರೇರೇಪಕಗಳು, ಸೂರ್ಯಪ್ರಕಾಶ, ಮತ್ತು ಅವರ ಆನುವಂಶಿಕ ಧರ್ಮಸಂಯೋಗದ ಫಲವೆಂಬುದಂತೂ ಸ್ಪಷ್ಟವಿದೆ. ಅವರ ಮಕ್ಕಳಾದರೂ ಇಲ್ಲಿಯೇ ಉಳಿದರೆಂದರೆ ಅವರ ಶರೀರವಾದರೂ ತುಸು ಕಪ್ಪಾಗುವುದು. Cyclopaedia of Practical Medicine Vol. II p. 419ರಲ್ಲಿ ಡಾ. ಬ್ರೌನ್‌ರೆಂಬವರು ಹೇಳುವುದೇನೆಂದರೆ: "ಉಷ್ಣದೇಶಗಳಲ್ಲಿದ್ದುದರಿಂದ ಬದಲಾದ ಅವರ ಕಂದೀಬಣ್ಣವು ಬಹುಶಃ ಅವರ ಮಕ್ಕಳಿಗಾದರೂ ಹೋಗುವುದು." ಇದರಮೇಲಿಂದ "ಅರ್ಜಿತ ಧರ್ಮ"ಗಳಾದರೂ (Acquired Characteristics) ಮಕ್ಕಳಿಗೆ ಆನುವಂಶಿಕವಾಗುವವೆಂಬ ಮಾತು ಸಿದ್ಧವಾಗುತ್ತದೆ. ಎಂದರೆ ಅಜ್ಜನಿಂದ ಗಳಿಸಿದ ಗುಣಧರ್ಮಗಳಿಗೆ ಭಿನ್ನವಾದ ಕೆಲವು ಧರ್ಮಗಳನ್ನು ತಂದೆಯು ಗಳಿಸಿದನೆಂದರೆ ಅವು ಹಾಗೆಯೇ ಅವನ ಮಕ್ಕಳಿಗೆ ಹೋಗಬಹುದೆಂದು ಇದರ ಅರ್ಥವು. (ಆದರೂ ಈ ಪ್ರಶ್ನೆಯು ಇನ್ನೂ ತೊಡಕಿನದೇ ಆಗಿರುವುದೆಂಬುದನ್ನು ಲಕ್ಷದಲ್ಲಿಡಬೇಕು. ಶಾಸ್ತ್ರಜ್ಞರಲ್ಲಿ ಇದರ ವಿಷಯಕ್ಕೆ ಬಹಳೇ ಮತಭೇದವಿರುವುದು. ಆದರೆ ಅದೆಲ್ಲ ಬಹು ಗೊಂಪಲದ್ದಾಗಿರುವುದರಿಂದ ಅದನ್ನು ಇಷ್ಟಕ್ಕೇ ಮುಗಿಸಿರುವೆವು.)

ಅರ್ಜಿತ ಧರ್ಮಗಳು ಸಂತತಿಗೆ ಹೋಗಬಹುದು

ಈ ಜಗತ್ತು ಬಲಿಷ್ಠರದೆಂಬ ಮಾತು ಇದರಿಂದ ನಿರ್ವಿವಾದವಾಗಿ ಸಿದ್ಧವಾಗುತ್ತದೆ. ಜಗತ್ತಿನಲ್ಲಿ ಮಿತಿಯಿಲ್ಲದ ಪ್ರಾಣಿಗಳು ಹುಟ್ಟುವುದರಿಂದ ಅವೆಲ್ಲ ಬದುಕುವುದಂತೂ ಶಕ್ಯವಿಲ್ಲ. ಯಾವು ಜೀವನಕಲಹದಲ್ಲಿ ಉಪಯೋಗವಾಗುವಂತಹ (ಮಾನಸಿಕ ಮತ್ತು ದೈಹಿಕ) ಮಾರ್ಪಾಟುಗಳನ್ನು ಮಾಡಿಕೊಂಡಿರುವುದಿಲ್ಲವೋ ಅವು ತಮ್ಮ ಹಿಂದ ಯಶಸ್ವಿಯಾಗುವಂತಹ ಪ್ರಾಣಿಗಳನ್ನು ಬಿಡುವುದು ಶಕ್ಯವಿಲ್ಲ. ಆದುದರಿಂದ ಅವು ಕಡಿಮೆಯಾಗುತ್ತ ಹೋಗಿ, ಕೆಲವು ಕಾಲದಲ್ಲಿ ನಾಮಶೇಷವಾಗಿ ಹೋಗಬಹುದು. ಉದಾಹರಣೆಗಾಗಿ ಒಂದು ಊರಲ್ಲಿ ಒಬ್ಬನೇ ಬಡಿಗನಿರುವನೆಂದು

ಈ ಜಗತ್ತು ಬಲಿಷ್ಠರದು

ತಿಳಿಯೋಣ. ಒಬ್ಬನೇ ಇರುವುದರಿಂದ ಅವನು ಅಲ್ಲಿ ಸುಸೂತ್ರವಾಗಿ ಹೊಟ್ಟೆ ತುಂಬಿಸಿಕೊಂಡು, ಮಕ್ಕಳುಮರಿಗಳ ಸಂಗೋಪನವನ್ನು ಚೆನ್ನಾಗಿ ಮಾಡಿಕೊಂಡಿರುವನು. ಆದರೆ ಅಲ್ಲಿಯೇ ಮತ್ತೊಬ್ಬ ಬಡಿಗನು ಬಂದು ಸೇರಿದನೆಂದರೆ, ಅವರಿಬ್ಬರಲ್ಲಿ ಒಬ್ಬನಾದರೂ ಬಡತನದಿಂದ ಸಾಯಬೇಕಾಗುವುದು. ಯಾಕೆಂದರೆ ಆ ಒಂದೇ ಚಿಕ್ಕ ಊರಲ್ಲಿ ಇಬ್ಬರೂ ಹೊಟ್ಟೆತುಂಬಿಕೊಂಡು ಸುಖದಿಂದಿರುವುದು ಶಕ್ಯವಿಲ್ಲ. ಇದನ್ನೇ ಮತ್ತೊಂದು ಉದಾಹರಣೆಯಿಂದ ಸಿದ್ಧಮಾಡಿ ತೋರಿಸಬಹುದು. ಜಾಣನಾದ ವ್ಯಾಪಾರಸ್ಥನೊಬ್ಬನು ಇರುವನೆಂದು ಕಲ್ಪಿಸೋಣ. ಅವನು ತನ್ನ ಉದ್ಯೋಗದಿಂದಲೂ, ಜಾಣತನದಿಂದಲೂ, ಮಿತವ್ಯಯದಿಂದಲೂ ಸಾಕಷ್ಟು ದುಡ್ಡನ್ನು ಗಳಿಸಿಕೊಂಡು ಸುಖವಾಗಿರುವನಲ್ಲದೆ, ತನ್ನ ಇಬ್ಬರು ಮಕ್ಕಳನ್ನೂ ಯೋಗ್ಯರೀತಿಯಿಂದ ಕಲಿಸಿ ಜಾಣರನ್ನಾಗಿ ಮಾಡುವನು. ಆದರೆ ಇಬ್ಬರ ಬದಲು ಅವನಿಗೆ ಆರು ಮಂದಿ ಮಕ್ಕಳಿರುವರೆಂದು ಕಲ್ಪಿಸಿದರೆ, ಆ ಕುಟುಂಬದ ಇತಿಹಾಸವೇ ಬದಲಾಗುವುದೆಂಬುದರಲ್ಲಿ ಸಂದೇಹವೇ ಇಲ್ಲ. ಎಲ್ಲ ಹುಡುಗರಿಗೂ ಅದೇ ದುಡ್ಡಿನಲ್ಲಿ ಮೊದಲಿನಂತೆ ವ್ಯವಸ್ಥೆಮಾಡಲಿಕ್ಕಾಗುವುದು ಶಕ್ಯವಿಲ್ಲ. ಅವರ ಅರಿವೆಅಂಚಡಿಗಳು, ಆಹಾರ ವಿಹಾರ, ಶಿಕ್ಷಣ— ಇವೆಲ್ಲವೂ ಈಗ ಮೊದಲಿನಕಿಂತ ಕಡಿಮೆಪ್ರತಿಯವಾಗುತ್ತವೆ. ದೇಹದಿಂದವರು ಜೀವನಕಲಹಕ್ಕೆ ಹೆಚ್ಚು ಅಯೋಗ್ಯರಾಗುವರು. ಅವರ ಮನೋವಿಕಾಸವು ಮೊದಲಿನಂತೆ ಬೆಳೆಯುವುದು ಶಕ್ಯವಿಲ್ಲ. ಅದರಿಂದ ರೋಗಗಳನ್ನು ತಡೆದುಕೊಳ್ಳುವ ಅವರ ಶಕ್ತಿಯು ಕಡಿಮೆಯಾಗಿ, ತುಸು ವರುಷಗಳಲ್ಲಿಯೇ ಅವರು ತಮ್ಮ ದುಃಖಜೀವನವನ್ನು ಮುಗಿಸಬೇಕಾಗುತ್ತದೆ. ಅಥವಾ ಎಲ್ಲ ಮಕ್ಕಳ ಹೊಟ್ಟೆಗಾಗಿ ಆಹಾರವನ್ನೊದಗಿಸುವ ಕಷ್ಟಮಯವಾದ ಪ್ರಯತ್ನದಲ್ಲಿ ತಾಯಿತಂದೆಗಳಿಬ್ಬರೂ ಮೃತಪಟ್ಟು ಆ ಹುಡುಗರೆಲ್ಲ ಅನಾಥರಾಗಬೇಕಾಗುತ್ತದೆ. ಇಂತಹ ಸಾವಿರಾರು ಮಾತುಗಳು ಎಲ್ಲರ ಅನುಭವದ ಸ್ವತ್ತಾಗಿರುವವು; ಮತ್ತು ತಾಯಿತಂದೆಗಳ ಅಂತಃಕರಣವನ್ನು ಕರಗಿಸಿ ಅವರನ್ನು ಪ್ರತಿನಿತ್ಯದ ದುಃಖಕ್ಕೆ ಗುರಿಮಾಡುವವು. ಆದರೆ ಇದು ವಿಶ್ವನಿಯಮದೊಂದು ಭಾಗಮಾತ್ರವೆಂದು ಹೇಳಬಹುದು. ಈ ದೃಷ್ಟಿಯಿಂದ ನೋಡಿದರೆ ನಮ್ಮ ಭೂಮಿಯೆಲ್ಲ ಒಂದು ಗ್ರಾಮವೆಂದೂ, ಮಾನವಜಾತಿಯೆಲ್ಲ ಮಿತಿಮೀರಿ ಬೆಳೆದದ್ದೊಂದು ಕುಟುಂಬವೆಂದೂ ಹೇಳಬಹುದು. ಆದರೆ ಎಲ್ಲಕ್ಕೂ ವಿಶಾಲ

ವಾದ ಗೃಹವು (ಎಂದರೆ ವಿಶ್ವವು) ಕೂಡ ಅಳೆಯಲ್ಪಡಬಹುದು; ಅದರ ಕ್ಷೇತ್ರಕ್ಕೂ ಮಿತಿಯುಂಟು. ಕಿಂಬಹುನಾ ಈ ವಿಶ್ವದ ಜಡದ್ರವ್ಯಗಳೂ ಕೂಡ ಒಂದು ರೀತಿಯಿಂದ ಮಿತವಾಗಿರುವವೆಂದು ನಾವು ಈ ಮೊದಲೇ ಹೇಳಿದ್ದೇವೆ. ಆದುದರಿಂದ ಯಾವುದೇ ತರದಿಂದಾಗಲಿ, ಮೇಲೆ ಹೇಳಿದಂತೆ, ಒಬ್ಬ ಬಡಿಗನು ಅವನ್ನು ಹೆಚ್ಚು ಉಪಯೋಗಿಸಿದನೆಂದರೆ, ಮತ್ತೊಬ್ಬನಿಗೆ ಸಾವು ತಪ್ಪಿದ್ದಲ್ಲ. ನಮ್ಮ ಪೃಥ್ವಿಯು ಮೇಲಂತೂ ಈ ಮಾತಿನ ಬಗ್ಗೆ ವಿಚಾರಮಾಡುವ ಕಾರಣವೇ ಇಲ್ಲ. ಅದರ ಕ್ಷೇತ್ರ, ಆಹಾರಪದಾರ್ಥಗಳನ್ನು ಹುಟ್ಟಿಸುವ ಅದರ ಶಕ್ತಿ, ಆಹಾರ ಸಾಮುಗ್ರಿ, ಶುದ್ಧವಾದ ಹವೆ–ಇವೆಲ್ಲವೂ ನಿಯಮಿತವಾಗಿವೆ. ಪೃಥ್ವಿಯು ಗರ್ಭದೊಳಗಿನ ಕಲ್ಲಿದ್ದಲಿಯೆಲ್ಲ ಇನ್ನು ಅಲ್ಪಕಾಲದಲ್ಲಿಯೇ ತೀರಿಹೋಗುವುದೆಂದು ತರ್ಕವಾಗಿದೆ. ಇಲ್ಲಿಯ ಉಷ್ಣತೆಯೆಲ್ಲ ತೀರಿಹೋಗಿ ಇದು ಚಂದ್ರನಂತೆ ನಿರ್ಜೀವವಾದ ಹಿಮಗೋಳವಾಗಬಹುದೆಂದೂ, ಅಥವಾ ಸೂರ್ಯನೊಳಗೆ ಹೋಗಿ ಕೂಡಿಕೊಳ್ಳಬಹುದೆಂದೂ ವಿಚಾರಮಾಡಹತ್ತಿದ್ದಾರೆ. ಅಥವಾ ಸೂರ್ಯನ ಉಷ್ಣತೆಗೆ ಕೂಡ ಮಿತಿಯಿರುವುದರಿಂದ, ಅವನೂ ಕೂಡ ದೀರ್ಘಕಾಲದ ನಂತರ ಆರಿ ಬೂದಿಯಾಗುವನೆಂದೂ, ಇಲ್ಲವಾದರೆ ಬೇರೆ ಸೂರ್ಯಗಳೊಡನೆ ತಿಕ್ಕಾಡಿ ಮತ್ತೆ ಈ ಸೃಷ್ಟಿಕ್ರಮವು ಸುರುವಾಗಬಹುದೆಂದೂ ನಿರ್ಣಯಿಸಿದ್ದಾರೆ. "ಎಲ್ಲರೂ ಮಾಡುವುದು ಹೊಟ್ಟೆಗಾಗಿ" ಎಂದು ಕೇವಲ ಬಕ್ಕರಿಯು ಬೆನ್ನುಹತ್ತಿದವರಿಗೆ ಇಂತಹ ವಿಚಾರಗಳು ಕೇವಲ ಕಾಲ್ಪನಿಕವೆಂದೆನಿಸಬಹುದು. ಆದರೆ ಸುಧಾರಣೆಯು ಶಿಖರವನ್ನು ಮುಟ್ಟಿರುವೆವೆಂದು ಹೆಮ್ಮೆಪಡುವವರ ಕಣ್ಣು ಕುಕ್ಕಿಸಲಿಕ್ಕೆ ಈ ಮಾತುಗಳು ಸಾಕಾಗಿವೆ. ಇರಲಿ, ಜೀವನಕಲಹವು ವಿಶ್ವವ್ಯಾಪಕವಾದ ನಿಯಮವು. ಎಂದರೆ "ಕ್ರಮೇಣವಾದ ಪ್ರಾಣಿಹಿಂಸೆಯಲ್ಲಿ ಸೃಷ್ಟಿಯು ಮನುಷ್ಯನನ್ನು ಹಿಮ್ಮೆಟ್ಟಿಸುತ್ತದೆ" ಎಂದೊಬ್ಬರು ಹೇಳಿರುವುದು ಇದರಿಂದ ಯಥಾರ್ಥವಾಗುವುದು. ಆದರೆ ಇಂತಹ ಪ್ರಾಣಿಹಿಂಸೆಯು ಇಲ್ಲದಿದ್ದರೆ ಮನುಷ್ಯನ ಅಸ್ತಿತ್ವವೇ ಶಕ್ಯವಾಗುತ್ತಿದ್ದಿಲ್ಲವೆಂದು ಹೇಳಬಹುದು. ಈ ಕಲಹದಿಂದಲೇ ಮನುಷ್ಯನು ಬೆಳೆದು ದೊಡ್ಡವನಾಗುವಂತೆ, ಈ ಕಲಹದಿಂದಲೇ ಬೇರೆ ಬೇರೆ ಜಾತಿಯ ಪ್ರಾಣಿಗಳು ಅಸ್ತಿತ್ವದಲ್ಲಿ ಬಂದಿರುವವು. ಎಂತೆಯೇ ಡಾರ್ವಿನ್ನನು "ಈ ಜೀವನಕಲಹದ ವಿಶ್ವವ್ಯಾಪಕತೆಯನ್ನು ಒಪ್ಪುವುದಕ್ಕಿಂತ ಸುಲಭತರವಾದ ಮಾತು ಮತ್ತೊಂದಿರಲಾರದು. ಅಥವಾ–ನಾನಂತೂ

ಹೀಗೆ ತಿಳಿಯುತ್ತೇನೆ– ಅದನ್ನು ಸರ್ವಕಾಲದಲ್ಲಿಯೂ ನೆನಪಿನಲ್ಲಿಡುವುದರ ಹೊರತು ಬೇರೊಂದು ಕಠಿಣತರವಾದ ಮಾತಿರಲಾರದು. ಆದರೂ ಇದನ್ನು ನಾವು ಲಕ್ಷದಲ್ಲಿಡದಿದ್ದರೆ ಅಪರೂಪತೆ (Rarity), ಹೆಚ್ಚಳ (Abundance), ನಾಶ ಮತ್ತು ಮಾರ್ಪಾಟು ಮೊದಲಾದ ಸಂಗತಿಗಳೂ, ಸೃಷ್ಟಿಯ ಮಿತ ವ್ಯಯವೂ ನಮಗೆ ತಿಳಿಯಲಾರವೆಂಬವಿಷ್ಟೇ ಅಲ್ಲ; ಅವುಗಳ ಬಗ್ಗೆ ವಿಪರೀತ ಜ್ಞಾನವು ಮಾತ್ರ ಹೆಚ್ಚಾಗುವ ಸಂಭವವಿದೆಯೆಂದು ನಿಃಸಂದೇಹವಾಗಿ ಹೇಳ ಬಹುದು" ಎಂದು ಹೇಳಿದ್ದಾನೆ.

ಸೃಷ್ಟಿ ಶೋಧನೆ

ಜೀವನಕಲಹದಲ್ಲಿ ಬಲಿಷ್ಠರ ಬಾಳ್ವೆಯಾಗುವ ಮಾತಿಗೇ ಸೃಷ್ಟಿಯ ಶೋಧನೆ (Natural Selection)ಯೆಂದು ಕರೆಯುತ್ತಾರೆ. ಬಲಿಷ್ಠರಾದವರು ಯಾರು ? ಎಂದು ಕೇಳಿದರೆ, ಜೀವನಕಲಹದಲ್ಲಿ ಬದುಕುವವರು ಎಂದು ಉತ್ತರ ಕೊಡಬಹುದು. ಮಿತವಾದ ಈ ಜಗತ್ತಿನಲ್ಲಿ ಮಿತಿಯಿಲ್ಲದ ಪ್ರಾಣಿಗಳು ಹುಟ್ಟುತ್ತವೆಂದು ಮೇಲೆ ಹೇಳಿದ್ದೇವೆ. ಹುಟ್ಟಿದ ಪ್ರಾಣಿಗಳೆಲ್ಲ ಕೆಲಕಾಲವಾದರೂ ಬದುಕಿರುವುದು ಶಕ್ಯವಿಲ್ಲದ್ದರಿಂದ, ಯಾವ ನಿಯಮಕ್ಕನುಸರಿಸಿ ಈ ಪ್ರಾಣಿಗಳು ನಾಶಹೊಂದುತ್ತವೆಂದು ಕೇಳಿದರೆ, ಅದಕ್ಕೆ ಕೊಡಬಹುದಾದ ಉತ್ತರವೇ ಈ ಸೃಷ್ಟಿಶೋಧನೆಯೆಂಬ ಶಬ್ದದಲ್ಲಿ ಅಡಕವಾಗಿದೆ. ಬಲಿಷ್ಠರ ಬಾಳ್ವೆ, ಪ್ರಕೃತಿಶೋಧನೆಗಳೆಂಬ ಶಬ್ದಗಳು ಇದಕ್ಕೆ ಭಿನ್ನವಾಗಿಲ್ಲ. ಒಂದೇ ಕಲ್ಪನೆಯನ್ನು ಬೇರೆ ಬೇರೆ ದೃಷ್ಟಿಯಿಂದ ವರ್ಣಿಸುವ ಮಾತುಗಳವು. ಬದಲಾಗುತ್ತ ನಡೆದ ಪರಿಸ್ಥಿತಿಗೆ ಯಾರು ಅನುಸರಿಸಿ ನಡೆಯುತ್ತಾರೋ ಅವರೇ ಬದುಕುವರೆಂಬ ಮಾತು ಮೇಲಿನ ವಿವರಣೆಯಿಂದ ಸ್ಪಷ್ಟವಾಗುವಂತಿರುವುದರಿಂದ ಅದನ್ನೇ ಇಲ್ಲಿ ಹೆಚ್ಚಾಗಿ ಚರ್ಚಿಸುವ ಅವಶ್ಯಕತೆ ತೋರುವುದಿಲ್ಲ.

ಸದೃಶಸಂತಾನದ ಉತ್ಪತ್ತಿ

ಇನ್ನುಳಿದ ಮುಖ್ಯವಾದ ಪ್ರಶ್ನೆಯೆಂದರೆ ಆನುವಂಶಿಕ ತತ್ತ್ವವು (Principle of Heredity). ತಾಯಿತಂದೆಗಳಿಂದ ಸದೃಶಸಂತಾನವು ಹೇಗೆ ಉತ್ಪನ್ನವಾಗುವುದು ? ಎಂಬುದೇ ಇಲ್ಲಿ ಚರ್ಚಿಸಬೇಕಾದ ವಿಷಯವು. ನಮ್ಮ ಶಾಸ್ತ್ರಕಾರರು ಪುರುಷನ ಶುಕ್ರ ಹಾಗೂ ಸ್ತ್ರೀಶೋಣಿತಗಳ ಸಂಯೋಗದಿಂದ

ಗರ್ಭಧಾರಣೆಯಾಗುವುದೆಂದು ಹೇಳಿದ್ದಾರೆ. **पुमान्पुंसोऽधिके शुक्रे स्त्री भवत्यधिके स्त्रियः ॥ याज्ञवल्क्यस्मृति. व्यवहार ८०.** ಎಂಬುದರಿಂದ ಪುರುಷಾವಯವಗಳೇ ಹೆಚ್ಚಾದರೆ ಬೀಜವು ಪುರುಷವಾಗುವುದೆಂದೂ ಸ್ತ್ರ್ಯವಯವಗಳೇ ಹೆಚ್ಚಾದರೆ ಸ್ತ್ರೀಯಾಗುವುದೆಂದೂ ಹೇಳಿದ್ದಾರೆ. ಆದರೆ ತಾಯಿತಂದೆಗಳಂತೆ ಮಕ್ಕಳೇಕಿರಬೇಕು ? (ಎಂದರೆ ತಾಯಿತಂದೆಗಳು ಮನುಷ್ಯವರ್ಗದವಾಗಿದ್ದರೆ, ಸಂತಾನವಾದರೂ ಮನುಷ್ಯವರ್ಗದ್ದೇ ಏಕಾಗಿರಬೇಕು ? ನಾಯಿಯ ಜಾತಿಯದೇಕೆ ಆಗಬಾರದು ? ) ಎಂಬ ಪ್ರಶ್ನೆಗೆ ಅವರು ಅಷ್ಟು ಯೋಗ್ಯವಾದ ಉತ್ತರವನ್ನು ಕೊಟ್ಟಂತೆ ಕಾಣುವುದಿಲ್ಲ. ಲಿಂಗಶರೀರದಿಂದ ಯುಕ್ತನಾದ ಆತ್ಮನು ಮೇಘಗಳೊಡನೆ ನೆಲಕ್ಕಿಳಿದು ಬರುವನೆಂದೂ, ಅಲ್ಲಿಂದ ವನಸ್ಪತಿಗಳ ಸಂಗಡ ಪುರುಷನಲ್ಲಿ ಸೇರಿ, ವೀರ್ಯರೂಪದಿಂದ ಗರ್ಭಾಶಯವನ್ನು ಸೇರುವನೆಂದೂ ನಮ್ಮ ಶಾಸ್ತ್ರಗಳು ಹೇಳುವಂತೆ ತೋರುತ್ತದೆ. ತಮ್ಮ ಕರ್ಮದಿಂದ ಜೀವಗಳು ಜನಿಸಿಬರುವುದರಿಂದ, ತಂದೆತಾಯಿಗಳ ಸಾಮ್ಯಕ್ಕೂ ಮಗನ ಸಾಮ್ಯಕ್ಕೂ ಕಾರ್ಯಕಾರಣಭಾವವನ್ನು ತೋರಿಸುವುದು ವೇದಾಂತಿಗಳಿಗೆ ಅಷ್ಟು ಸರಿಯಾಗಿ ಸಾಧಿಸಲಾರದು. ಜೀವನು ತನ್ನ ಕರ್ಮಕ್ಕನುಸರಿಸಿ ಅಂತಹ ತಾಯಿತಂದೆಗಳ ಹೊಟ್ಟೆಯಿಂದಲೇ ಹುಟ್ಟುತ್ತಾನೆಂದು ಬೇಕಾದರೆ ಅವರು ಕಲ್ಪಿಸಬಹುದು. ಆದರೆ ಸದ್ಯಕ್ಕೆ ಈ ಪ್ರಶ್ನೆಗಳು ಶಾಸ್ತ್ರೀಯರೀತಿಯಿಂದ ಚರ್ಚಿಸಲ್ಪಡುತ್ತಿರುವುದರಿಂದ, ಈ ಪ್ರಾಚೀನಶಾಸ್ತ್ರಗಳ ಕಲ್ಪನೆಗಳಿಗೆ ಯಾರೂ ಅಷ್ಟು ಗಮನವನ್ನು ಕೊಡುತ್ತಿರುವುದಿಲ್ಲ.

ಇದಕ್ಕೆ ಶಾಸ್ತ್ರೀಯ ಉತ್ತರ

ಈ ವಿಷಯದ ಅಭ್ಯಾಸವು ಡಾರ್ವಿನ್ನನ ಮೊದಲೇ ಸುರುವಾಗಿದ್ದರೂ ಸನ್ ೧೯೦೦ರಿಂದ ಇತ್ತೀಚೆಗೆ ಕೆಲವು ಮಹತ್ತ್ವದ ಸಿದ್ಧಾಂತಗಳು ಕಂಡುಹಿಡಿಯಲ್ಪಟ್ಟಿವೆ. ಇವೆಲ್ಲ "ಆನುವಂಶಿಕ ಗುಣಧರ್ಮಗಳ ಬಗ್ಗೆ ಮೆಂಡೆಲ್ಲನ ನಿಯಮಗಳು" (Mendelian Laws of Heredity) ಎಂಬ ಹೆಸರಿನಿಂದ ಕರೆಯಲ್ಪಡುತ್ತವೆ. ಅವನ್ನೆಲ್ಲ ಸವಿಸ್ತರವಾಗಿ ಇಲ್ಲಿ ಚರ್ಚಿಸುವುದು ಶಕ್ಯವಿಲ್ಲ. ಬೇಕಾದವರು ಅವನ್ನು ಪ್ರಾಣಿಶಾಸ್ತ್ರಗಳ ಮೇಲಿನ ದೊಡ್ಡ ಪುಸ್ತಕಗಳಲ್ಲಿ ನೋಡಿಕೊಳ್ಳಬಹುದು. ತಂದೆತಾಯಿಗಳ ಗುಣಧರ್ಮಗಳು, ಏನೂ ಹೆಚ್ಚುಕಡಿಮೆಗಳನ್ನು ಹೊಂದದೆ, ಮಕ್ಕಳಲ್ಲಿ ಇದ್ದಕ್ಕಿದ್ದಂತೆ ಕೆಲವೊಂದು ವಿಶಿಷ್ಟ

ರೀತಿಯಿಂದ ಸೇರಿಕೊಳ್ಳುತ್ತವೆಂಬ ತತ್ತ್ವವೇ ಈ ಮೆಂಡಲ್ಲನ ನಿಯಮಗಳಲ್ಲಿ ಅಡಕವಾಗಿದೆ. ತಂದೆ ತಾಯಿಗಳಲ್ಲಿದ್ದ ಗುಣಧರ್ಮಗಳು ಮಕ್ಕಳಲ್ಲಿ ಕಾಣಹ. ತ್ತಿದವೆಂದರೆ ಅವು ಆನುವಂಶಿಕವಿರುವವೆಂದು ನಾವು ಹೇಳುತ್ತೇವೆ. ಆ ಆನುವಂಶಿಕ ತತ್ತ್ವಕ್ಕೇ ಈಗ ಕಾರ್ಯಕಾರಣ ಭಾವವನ್ನು ಹಚ್ಚಿ ಯಾಂತ್ರಿಕರೀತಿಯಿಂದ ಅದರ ಅರ್ಥ ಮಾಡಬಹುದೆಂದು ಈ ಎಲ್ಲ ಶಾಸ್ತ್ರಜ್ಞರ ಅಭಿಪ್ರಾಯವಿದೆ. ಜನನ ಕ್ರಿಯೆಯಲ್ಲಿ ಸೇರಿದ ಪುರುಷಾಣುಮಿಶ್ರಿತಸ್ತ್ರ್ಯಣುಗಳು ಅಥವಾ ಜೀವಕೋಶಗಳು, ಅವು ನಾಯಿಯವಾಗಿದ್ದರೆ ನಾಯಿಯನ್ನೂ, ಪಕ್ಷಿಯವಾಗಿದ್ದರೆ ಪಕ್ಷಿಯನ್ನೂ, ಮನುಷ್ಯನವಾಗಿದ್ದರೆ ಮನುಷ್ಯನನ್ನೂ ಏಕೆ ಹುಟ್ಟಿಸಬೇಕು? ಅದೇ ದೇಹರಚನೆ, ಅವೇ ದೈಹಿಕವ್ಯಾಪಾರಗಳು, ಅದೇ ಮಾನಸಿಕಶಕ್ತಿಯು, ಅದೇ ತರದ ವ್ಯಕ್ತಿಯು ಏಕೆ ಜನ್ಮಿಸಬೇಕು? ಇದಕ್ಕೆ ಉತ್ತರವೇನೆಂದರೆ ಜೀವನರಸವು ಎರಡೂ ಕಡೆಗೆ ಒಂದೇ ಆಗಿರುವುದು. ತಂದೆ ತಾಯಿಗಳೂ ಮಕ್ಕಳೂ ಒಂದೇ ಬಿಂದುವಿನಿಂದ ಹೊರಡುವರು. ದ್ರವ್ಯಗಳ ಕೆಲವೊಂದು ಸಂಯೋಗ, ಅವುಗಳ ಕೆಲವೊಂದು ರಚನೆ, ಮತ್ತು ಕೆಲವೊಂದು ಬೆಳೆವಣಿಗೆ ಇವೆಲ್ಲ ಇಬ್ಬರಿಗೂ ಸಮಾನವಾಗಿರುವವು. ಆದುದರಿಂದ ಸುತ್ತಲಿನ ಪರಿಸ್ಥಿತಿಯು ಅದೇ ತರದ್ದಿದ್ದರೆ ಮಕ್ಕಳಾದರೂ ತಂದೆ ತಾಯಿಗಳಂತೆಯೇ ಬೆಳೆಯಬೇಕೆಂಬುವು ಸ್ಪಷ್ಟವಿದೆ. ಈ ತರದ ದ್ರವ್ಯಗಳ ಸಂಯೋಗವೂ, ಅವುಗಳೊಡನೆ ಕೆಲವು ಗುಣಧರ್ಮಗಳ ಸಹಚರತ್ವವೂ ಜನನೇಂದ್ರಿಯವ್ಯಾಪಾರದಲ್ಲಿ ತೊಡಗಿದ ಜೀವಕೋಶಗಳಿಂದ ಮಕ್ಕಳಿಗೆ ಬರುತ್ತವೆ. ಹೆಣ್ಣು ಪ್ರಾಣಿಯು ತತ್ತಿಯೂ ಗಂಡು ಪ್ರಾಣಿಯ ಬೀಜವೂ ಕೂಡಿ ಜೀವಕೋಶವಾಗುವುದೆಂದು ಹಿಂದೊಮ್ಮೆ ಹೇಳಿರುವೆವು. ಆ ತತ್ತಿಯಿಂದ ತಾಯಿಯ ಧರ್ಮಗಳೂ, ಬೀಜದಿಂದ ತಂದೆಯ ಧರ್ಮಗಳೂ ಆ ಸಂತಾನದಲ್ಲಿ ಸೇರುವವೆಂದು ಹೇಳಬಹುದು. ಈ ರೀತಿಯಿಂದಲೇ ತಾಯಿತಂದೆಗಳ ಗುಣಧರ್ಮಗಳು ಮಕ್ಕಳಲ್ಲಿ ಒಡಮೂಡುವವು. ಆದರೂ ಇದರ ನಿಜವಾದ ಅರ್ಥವು ಇನ್ನೂವರೆಗೆ ಎಲ್ಲರಿಗೆ ಗೊತ್ತಾದಂತೆ ಕಾಣುವುದಿಲ್ಲ. ತಂದೆ ಮಕ್ಕಳಲ್ಲಿ ಏನಾದರೊಂದು ವಿಶಿಷ್ಟವಾದ ಸಾಮ್ಯವಿದ್ದರೆ ಮಾತ್ರ ಅದು ಆನುವಂಶಿಕವೆಂದು ನಾವು ಹೇಳುತ್ತೇವೆ. ಆದರೆ ಅದು ತಪ್ಪು. ಎಲ್ಲ ತರದ ಸಾಮ್ಯಗಳನ್ನೂ ಆನುವಂಶಿಕವೆಂದು ತಿಳಿಯತಕ್ಕದ್ದು. ಈ ಆನುವಂಶಿಕ ತತ್ತ್ವವಿದ್ದ ಹೊರತು ವಿಕಾಸವೇ ಶಕ್ಯವಾಗುತ್ತಿದ್ದಿಲ್ಲವೆಂದು ಹೇಳಬಹುದು. ಒಟ್ಟಿನ

ಮೇಲೆ "ಆನುವಂಶಿಕಧರ್ಮವೆಂದರೆ ವಾದ್ಯವೆಂದೂ, ಪ್ರೇರೇಪಕಗಳೆಂದರೆ ಬಾರಿಸುವವನೆಂದೂ ಕಲ್ಪಿಸಿದರೆ, ಆ ಜೀವಿ ಮತ್ತು ಅದರ ಗುಣಧರ್ಮಗಳೇ ಆ ವಾದ್ಯದಿಂದ ಹೊರಡುವ ಧ್ವನಿಯೆನ್ನಬಹುದು. ಯಾವ ತರದ ಧ್ವನಿಯು ಹೊರಡುವುದೆಂಬುದು ಬಾರಿಸುವವನ ಮೇಲೆಯೇ ಹೆಚ್ಚಾಗಿ ಅವಲಂಬಿಸಿರುವುದು. ಆದರೆ ಹೊರಡತಕ್ಕ ಧ್ವನಿಗಳ ವೈವಿಧ್ಯವೂ, ವ್ಯಾಪಕತೆಯೂ ಆ ವಾದ್ಯದ ರಚನೆಯ ಮೇಲೂ ಅವಲಂಬಿಸಿರುತ್ತವೆಂಬುದು ಸಹಜವಿದೆ. ಯಾಕೆಂದರೆ ವಾದಕನ ಸ್ಪರ್ಶಕ್ಕೆ ಉತ್ತರಕೊಡುವ ಅದರ ಸ್ವಭಾವವು ಅದರ ರಚನೆಯ ಮೇಲೆ ಅವಲಂಬಿಸಿರುತ್ತದೆ." (ಸಜೀವ ಪ್ರಾಣಿಗಳ ವಿಕಾಸವು. ಪು. ೩೮)

ಉಪಸಂಹಾರ

ಹೀಗೆ ವಿಕಾಸವನ್ನು ತರಬಹುದಾದ ಕೆಲವು ಮುಖ್ಯಸಂಗತಿಗಳನ್ನು ಚರ್ಚಿಸಿದೆವು. ಆ ಕಾರಣಗಳಿಂದಲೇ ಒಂದೇ ಜೀವನರಸದಿಂದ ಇಷ್ಟು ಭಿನ್ನ ಭಿನ್ನವಾದ ಜೀವಕೋಟಿಗಳು ಹುಟ್ಟಿರುವವೆಂದು ಹೇಳಿದೆವು. ಈ ಪರಿಳಿತಗಳೆಲ್ಲ ನ್ಯೂನಾಧಿಕರಹಿತವಾದ ಒಂದೇ ಒಂದಾದ ಶಕ್ತಿಯುಕ್ತ ಜಡದಿಂದ ಹುಟ್ಟಿ ಕೆಲವು ನಿಯಮಗಳಿಗನುಸರಿಸಿ ನಮ್ಮ ಕಣ್ಣಿಗೆ ಗೋಚರವಾಗಿ ಮತ್ತೆ ಅದರಲ್ಲಿಯೇ ಮಾಯವಾಗುವವು. ಜೀವಕೋಟಿಯಲ್ಲಿ ವಿಕಾಸವಾಗಲಿಕ್ಕೆ ಬೇಕಾದ ಕಾರಣಗಳೆಂದರೆ ಪರಿಸ್ಥಿತಿ, ಅಂಗಾಂಗಗಳ ಉಪಯೋಗ ಮತ್ತು ನಿರುಪಯೋಗ, ಸೃಷ್ಟಿಶೋಧನೆ, ಇಂದ್ರಿಯಶೋಧನೆ, ದೈಹಿಕಶೋಧನೆ, ಮತ್ತು ಮನುಷ್ಯರಲ್ಲಿದ್ದ ಇಚ್ಛಾಪ್ರಾಬಲ್ಯ ಇವೇ ಆರು. ಅವುಗಳಲ್ಲಿ ಮೊದಲಿನವೆರಡು ಲ್ಯಾಮಾರ್ಕನಿಂದ ಶೋಧಿಸಲ್ಪಟ್ಟವು. ಮಧ್ಯದವೆರಡನ್ನು ಡಾರ್ವಿನ್ನನು ಹುಡುಕಿ ತೆಗೆದನು. ಐದನೆಯದನ್ನು ರೋಮಾನೀಸ (Romanes) ಮತ್ತು ಗುಡ್ವಿಕ್ (Gudwick) ಎಂಬವರು ಹುಡುಕಿ ತೆಗೆದಿದ್ದಾರೆ. ಆದರೆ ಅದು ಇನ್ನೂವರೆಗೆ ಎಲ್ಲರಿಗೂ ಸಮ್ಮತವಾಗಿಲ್ಲ. ಅಂಗಾಂಗಗಳ ಉಪಯೋಗ ನಿರುಪಯೋಗಗಳಿಂದ ಆ ಆ ಅವಯವಗಳು ಉತ್ಕರ್ಷವನ್ನೂ ನಾಶವನ್ನೂ ಹೊಂದುತ್ತವೆಂದು ಹೇಳಬಹುದು. ಇದಕ್ಕೆ ಪ್ರಸಿದ್ಧವಾದ ಉದಾಹರಣೆಯೆಂದರೆ "ಜಿರಾಫ" ವೆಂಬ ಪ್ರಾಣಿಯ ಕುತ್ತಿಗೆಯು. ಜೀವನಕಲಹದಲ್ಲಿ ಉದ್ದವಾದ ಕುತ್ತಿಗೆಯು ಅದಕ್ಕೆ ವಿಶೇಷ ಉಪಯುಕ್ತವಾಗಿರುವುದರಿಂದ, ಅದು (ಕುತ್ತಿಗೆಯು) ಈಗ ವಿಪರೀತವಾಗಿ ಬೆಳೆದಿದೆ. ಮತ್ತು ಹಾಗೆಯೇ ಕೆಲ

ಕೆಲವು ಇಂದ್ರಿಯುಗಳು ಎಷ್ಟೋ ತಲೆಗಳವರೆಗೆ ಉಪಯೋಗಿಸಲ್ಪಡದೇ ಇರುವು ದರಿಂದ ಅವು ಕಡೆಗೆ ನಾಶವಾಗಿಯೇ ಹೋಗುವವು. ಮನುಷ್ಯನಿಗೆ ಬೆನ್ನೆಲು ಬಿನ ತುದಿಗಿದ್ದ ಬಾಲದ ಅವಶೇಷವು ಇದಕ್ಕೆ ಸ್ಪಷ್ಟವಾದ ಉದಾಹರಣೆಯು. ಮನುಷ್ಯನ ಪ್ರಾಚೀನಾವಸ್ಥೆಯಲ್ಲಿ ಅದು ತೀರ ಅವಶ್ಯವಾಗಿದ್ದರೂ, ಕಾಲಾಂತರ ದಿಂದ ನಿರುಪಯುಕ್ತವಾಗಿ ಈಗ ಅದರ ಗುರುತು ಮಾತ್ರ ಉಳಿದಿರುವುದೆಂದು ನಿರ್ಧರಿಸಿದ್ದಾರೆ. ಉತ್ತಮ ಅಥವಾ ಮೇಲಿನ ವರ್ಗದ ಪ್ರಾಣಿಯು ಜೀವನ ಕಲಹದಲ್ಲಿ ಜಯಶಾಲಿಯಾಗಬೇಕಾಗಿದ್ದರೆ ಅದು ತನ್ನಂತಹ ಪ್ರಾಣಿಗಳನ್ನು ಹುಟ್ಟಿಸಬೇಕಷ್ಟೇ ? ಆದುದರಿಂದಲೇ ಗಂಡು ಹೆಣ್ಣುಗಳ ಫಲವತ್ತಾದ ಸಂಯೋ ಗವನ್ನು ತರುವ ದೇಹರಚನೆಗಳ ಮಹತ್ತ್ವವು ವಿಕಾಸವಾದದಲ್ಲಿ ಅಷ್ಟು ಹೆಚ್ಚಾ ಗಿದೆ. ಜನನೇಂದ್ರಿಯದ ವ್ಯತ್ಯಾಸಗಳನ್ನು ಬಿಟ್ಟು ಉಳಿದವುಗಳಿಗೆ ಗೌಣಲಿಂಗ ಧರ್ಮಗಳೆಂದು (Secondary Sexual Characters) ಹೆಸರು. ಇವುಗಳಿಂದ ಗಂಡು ಹೆಣ್ಣುಗಳು ಅನ್ಯೋನ್ಯರನ್ನು ಗುರುತಿಸಿ, ಮೈಥುನ ಕಾರ್ಯವನ್ನು ನೆರವೇರಿಸಿಕೊಳ್ಳುತ್ತವೆ. ಎಷ್ಟೋ ಜೀವಿಗಳಲ್ಲಿ ಹೆಣ್ಣನ್ನು ಅಪ್ಪಿ ಕೊಳ್ಳಲಿಕ್ಕೆ ಬೆಳೆಸಿದ ಅವಯವಗಳೂ, ಎಷ್ಟೋ ಪಶುಪಕ್ಷಿಗಳ ಒದರುವಿಕೆಯೂ, ಚಿಗರಿ ಮತ್ತು ಮಸ್ಕ ಡಿಯರಗಳಲ್ಲಿ ಪ್ರಾಯಕ್ಕೆ ಬಂದೊಡನೆ ಹೊರಬೀಳುವ ಸುವಾಸನೆಯೂ ಇದೇ ಮಾತಿನ ಉದಾಹರಣೆಗಳು. ಎಷ್ಟೋ ಧರ್ಮಗಳು ಸಕೃತ್ಸ್ಪರ್ಶನಕ್ಕೆ ತೀರ ನಿರುಪಯುಕ್ತವಾಗಿ ಕಂಡು ಬಂದರೂ ಈ ದೃಷ್ಟಿಯಿಂದ ಉಪಯುಕ್ತವಾಗಿವೆಯೆನ್ನಬಹುದು. ಲಿಂಗಶೋಧನೆಯು (Sexual Selection) ಸೃಷ್ಟಿಶೋಧನೆಯದೊಂದು ಭಾಗವು. ಅದಕ್ಕದು ಅಧೀನವಾಗಿದೆ. ಬಹುಶಃ ಗಂಡು ಪ್ರಾಣಿಗಳೆಲ್ಲ ಹೆಣ್ಣಿನ ಸಲುವಾಗಿ ಬಡೆದಾಡುವುದನ್ನು ನಾವು ನೋಡುತ್ತೇವೆ. ಈ ಕಲಹಕ್ಕೆ ಭಾರ್ಯಾಕಲಹವೆಂದು ಹೆಸರು ಕೊಡಬಹುದು. ಇವೆಲ್ಲ ರೀತಿಯಿಂದ ದೇಹರಚನೆಯಲ್ಲಿ ಮಾರ್ಪಾಟುಗಳಾಗಹತ್ತುತ್ತವೆ. ಮನು ಷ್ಯರು ಎಷ್ಟೋ ಸಾರೆ ವಿಚಾರಪೂರ್ವಕವಾಗಿ ಧ್ಯೇಯಗಳನ್ನು ಮುಂದಿಟ್ಟು ಕೊಂಡು ಅವನ್ನು ಸಾಧಿಸಿಕೊಳ್ಳಲಿಕ್ಕೆ ಪ್ರಯತ್ನಮಾಡಹತ್ತುವನು. ಈ ರೀತಿಯಿಂದಲೂ ಹೊಸ ಹೊಸ ಪ್ರಾಣಿಜಾತಿಗಳು ಹುಟ್ಟುತ್ತವೆನ್ನಲಿಕ್ಕೆ ಅಡ್ಡಿ ಯಿಲ್ಲ. ಈ ತೆರನಾಗಿ ಈ ಜಗತ್ತು ನಾನಾರೂಪಗಳನ್ನು ಧಾರಣಮಾಡಿ ತನ್ನ ನಾಟಕವನ್ನಾಡುತ್ತಿರುವುದೆಂದು ಹೇಳಿ ಈ ಭಾಗವನ್ನು ಮುಗಿಸುತ್ತೇವೆ.

---

## ೧೧

# ವೇದಾಂತವೂ ಉತ್ಕ್ರಾಂತಿವಾದವೂ

ಭೌತಿಕಶಾಸ್ತ್ರಗಳ ವಿಷಯಕ್ಕೆ ನಮ್ಮಲ್ಲಿ ಅಕ್ಷಮ್ಯವಾದ ಅಜ್ಞಾನವು ವ್ಯಾಪಿಸಿರುವುದೆಂದು ಹೇಳಬಹುದು. ಪಾಶ್ಚಿಮಾತ್ಯರೆಂದರೆ ವಿಷಯಮೃಗದ ಬೆನ್ನು ಹತ್ತಿದವರೆಂದೂ, ದುಡ್ಡಿನ ವ್ಯಾಮೋಹಕ್ಕೆ ಮರುಳಾದವರೆಂದೂ ನಾವು ಸಾಧಾರಣವಾಗಿ ತಿಳಿಯುತ್ತೇವೆ.

**ತಪ್ಪು ತಿಳುವಳಿಕೆ**

ಆಧುನಿಕಸುಧಾರಣೆಯಲ್ಲಿ ರಾವಣನ ರಾಜ್ಯವೆಂದೂ ಘಟೋತ್ಕಚನ ಮಾಯೆಯೆಂದೂ ನಮ್ಮಲ್ಲಿ ಹಲವರ ವಿಶ್ವಾಸವಿದೆ. ಮೋಟಾರ, ಉಗೆಬಂಡಿ, ವಿಮಾನ, ಅದ್ಭುತವಾದ ಯಂತ್ರಗಳು, ಉಗೆಹಡಗ, ತೋಪು ಮೊದಲಾದವುಗಳೆಲ್ಲ ಮನುಷ್ಯನನ್ನು ಮರುಳುಗೊಳಿಸುವ ಶೋಚನೀಯವಾದ ಶೋಧಗಳೆಂದು ಅವರು ಬಗೆಯುತ್ತಾರೆ. ವಿಷಯಗಳ ಸೇವನೆಯಿಂದ ಹುಚ್ಚಾಗಿ ಹೋದ ಪಾಶ್ಚಾತ್ಯರ ಮನಶ್ಚಕ್ಷುವು ನಿಜವಾದ ಜ್ಞಾನಸೂರ್ಯನನ್ನು ನೋಡಲಸಮರ್ಥವಾಗಿದೆಯೆಂಬ ಕಲ್ಪನೆಯು ಅವರಲ್ಲಿ ರೂಢವಾಗಿ ಹೋಗಿದೆ. ಅವರ ಆಚಾರವಿಚಾರಗಳು, ರೀತಿನಡಾವಳಿಗಳು, ಆಟನೋಟಗಳು ಮತ್ತು ಸುಧಾರಣೆಯ ಉಳಿದ ಗುರುತುಗಳೆಲ್ಲ ಅವರ ಮನೋಮಾಲಿನ್ಯವನ್ನು ತೋರಿಸುವ ಸ್ಪಷ್ಟವಾದ ಚಿಹ್ನಗಳೆಂದು ನಮ್ಮ ನಂಬಿಗೆಯಾಗಿದೆ. ಅವರ ಶೋಧಗಳೆಲ್ಲ ವಿಷಯಸುಖವೆಂಬ ನಂಜಿನ ವ್ಯಾಪಾರಕ್ಕಾಗಿ, ಕಲಾಕೌಶಲ್ಯಗಳೆಲ್ಲ ಇಂದ್ರಿಯತೃಪ್ತಿಗಾಗಿ, ಬುದ್ಧಿಲಾಘವವೆಲ್ಲ ಸೈತಾನನ ಸೇವೆಗಾಗಿ, ಜ್ಞಾನಸಾಧನವೆಲ್ಲ ಸ್ವಾರ್ಥಸಾಧನೆಗಾಗಿ, ಹಸ್ತನಿಪುಣತೆಯೆಲ್ಲ ಈ ಹೆಣದ ಸಿಂಗಾರಕ್ಕಾಗಿ, ದೇಹಶಕ್ತಿಯೆಲ್ಲ ಪರಪೀಡೆಗಾಗಿ, ಸಾಮ್ರಾಜ್ಯಪ್ರಭುತ್ವವೆಲ್ಲ ಬಡವರ ನಾಶಕ್ಕಾಗಿ, ವಾಕ್ಚಾತುರ್ಯವೆಲ್ಲ ಸೃಷ್ಟಿಕರ್ತನ ನಿಂದೆಗಾಗಿ, ಕಿಂಬಹುನಾ ಅವರ ದೈಹಿಕಮಾನಸಿಕಶಕ್ತಿಗಳೆಲ್ಲ ಇಂತಹ ಹೇಯವಾದ ಕೆಲಸಗಳಿಗಾಗಿಯೇ ಉಪಯೋಗಿಸಲ್ಪಡುತ್ತವೆಯೆಂದು ನಾವು ಭಾವಿಸುತ್ತೇವೆ. ಅವರ ರಮಣಿಯರ ಮೋಹವೇನು? ದೇಹದ ಮೇಲಿನ ಅಭಿಮಾನವೇನು ? ಅಹಂಕಾರವೇನು ? ಲೋಭಮದಮತ್ಸರಗಳೇನು ? ನಿಷ್ಕರುಣೆಯೇನು ? ಸ್ವಾರ್ಥೈಕಪರಾಯಣತೆಯೇನು ? ಎಲ್ಲವೂ ಪಶುಧರ್ಮಗಳೇ ಎಂದು ನಮ್ಮಲ್ಲಿ ದೊಡ್ಡವರು ಕೂಡ ಹೇಳುತ್ತಿರುವರು. ಅವರ ನೀತಿ, ಧರ್ಮ,

ತತ್ತ್ವಜ್ಞಾನಗಳೆಂದರೆ ಪಾಶವೀಶಕ್ತಿಯ ಮೇಲೆ ನಿಂತ ಸ್ವಾರ್ಥದ ವಿಶಾಲವಾದ ಮಂದಿರಗಳೆಂದು ನಮ್ಮ ತಿಳುವಳಿಕೆಯಾಗಿದೆ. ಹೆಚ್ಚೇನು? ಅವರೂ ಕೂಡ ತಮ್ಮ ಸುಧಾರಣೆಯ ಜೊಳ್ಳುತನವನ್ನು ಕಂಡುಹಿಡಿದು, ಪೌರ್ವಾತ್ಯರ ಜೀವನ ವೃತ್ತಿಯಲ್ಲಿಯೇ ತಮ್ಮ ನಿಜವಾದ ಸೌಖ್ಯವಿರುವುದೆಂಬುದನ್ನು ಮನಗಂಡಿದ್ದಾರೆಂದು ನಾವು ಹಲವು ಸಾರೆ ಓದುತ್ತೇವೆ. ಆದುದರಿಂದ ನಾವೂ ಅವರ (ಪಾಶ್ಚಾತ್ಯರ) ಹವ್ಯಾಸಕ್ಕೆ ಬಿದ್ದು, ನಮ್ಮ ಪರಂಪರಾಗತ ಆಚಾರವಿಚಾರಗಳನ್ನು ಬಿಡುವುದೆಂದರೆ "ಅಂಧೇನೈವ ನೀಯಮಾನಾ ಯಥಾಂಧಾಃ" ಎಂಬ ನ್ಯಾಯವನ್ನು ಅನುಸರಿಸಿದಂತಾಗುವುದೆಂದು ನಮಗೆ ಬೋಧಿಸಲ್ಪಡುತ್ತದೆ. ಹಳೆಯದೆಲ್ಲ ಹಿತವಾದುದೆಂದು ನಮಗೆ ತಿಳಿಸಿ ಹೇಳುತ್ತಾರೆ. ನಮ್ಮ ಅಭಿಮಾನವಾದರೂ ನಮಗಿರಕೂಡದೇ? ಎಂದು ಬೇರೆ ಕೆಲವರು ಇದಕ್ಕೆ ಪುಷ್ಟಿಯನ್ನು ಕೊಡುತ್ತಾರೆ. ಆದರೆ ಪಾಶ್ಚಿಮಾತ್ಯರ ತಿರಸ್ಕಾರದ್ವೇಷಗಳಲ್ಲಿಯೇ ನಿಜವಾದ ಸ್ವಾಭಿಮಾನವಿರುವುದೆಂದು ನಾವಂತೂ ತಿಳಿಯಲಾರೆವು. ಅಭಿಮಾನವಿರಬೇಕು, ದುರಭಿಮಾನವಿರಬಾರದೆಂಬುದು ಸರ್ವಸಮ್ಮತವಾದ ನೀತಿಯ ವಾಕ್ಯವು. ಎಂದರೆ ಸಾರವಾಗಿದ್ದುದನ್ನು, ಅದು ಹಳೆಯದಿರಲಿ, ಹೊಸದಿರಲಿ, ಅನುಸರಿಸಲೇಬೇಕು. ಎಂದರೆ ಮಾತ್ರ ವಿಶ್ವವ್ಯಾಪಿಯಾದ ಜೀವನಕಲಹದಲ್ಲಿ ನಾವು ಬದುಕಿ ಉಳಿಯುವ ಆಸೆಯು! ಹೊಸಹೊಸ ಪರಿಸ್ಥಿತಿಗಳಿಗನುಸರಿಸಿ ಹೊಸ ಹೊಸ ಮಾರ್ಗಗಳನ್ನು ಹಿಡಿಯುವುದೇ, ಜೀವನಕಲಹದಲ್ಲಿ ಜಯವನ್ನು ತಂದುಕೊಡುವ ಅವಶ್ಯವಾದ ಹಂಚಿಕೆಯೆಂದು ಹಿಂದೆ ನಾವು ವಿಸ್ತಾರವಾಗಿ ತೋರಿಸಿಕೊಟ್ಟಿರುವೆವು. ಹುಡುಗನಿಂದಲೂ ಸುಭಾಷಿತವು ಗ್ರಾಹ್ಯವು, ಮತ್ತು ನ ತೇನ ವೃದ್ಧೋ ಭವತಿ ಎಂಬ ಮೊದಲಾದ ಶ್ಲೋಕಗಳೂ ಈ ಮಾತನ್ನೇ ಸೂಚಿಸುತ್ತವೆ. ಆಚಾರಗಳ ಮೂಲಗಳಾವವೆಂಬುವ ಪ್ರಶ್ನೆಯನ್ನು ಚರ್ಚಿಸುವಾಗ, ಕರ್ಮಕಾಂಡವೆಂದರೆ ಪೂರ್ವ ಮೀಮಾಂಸೆಯ ಮೇಲೆ ಭಾಷ್ಯವನ್ನು ಬರೆದು ಸುಪ್ರಸಿದ್ಧನಾದ ಶಬರಸ್ವಾಮಿಯು, ಯುವನರಿಂದಲೂ ಕೂಡ ಸಾಧುವಾದುದನ್ನು ನಾವು ಸ್ವೀಕರಿಸಲೇಬೇಕೆಂದು ಹೇಳಿರುವನು. (Quoted by Dr. Belvalkar in his Notes on **ब्रह्मसूत्रभाष्य** II. I 1. **चोदितमशिष्टैरपि शिष्टानवगतं प्रतीयेत । यत् प्रमाणेनाविरुद्धं तदवगम्यमानं न न्याय्यं त्यक्तुम्।**) ಇದರ ಮೇಲಿಂದ ನಿಜವಾದ ಶಾಸ್ತ್ರೀಯಸ್ವಭಾವವು ಹೇಗೆ ಪ್ರಕಟವಾಗುತ್ತಿರುತ್ತದೆಂಬುದರ ಕಲ್ಪನೆಯು ತುಸುವಾದರೂ ಆಗುವಂತಿದೆ.

ಪಾಶ್ಚಿಮಾತ್ಯರು ಜೀವನಕಲಹದಲ್ಲಿ ಸದ್ಯಕ್ಕೆ ಬಲಿಷ್ಠರಾಗಿ ಬಾಳ್ವೆ ಮಾಡುತ್ತಿರುವರೆಂಬುದನ್ನಂತೂ ದುರ್ದೈವಿಗಳಾದ ಭಾರತೀಯರಿಗೆ ಬೇರೆ ಹೇಳಬೇಕಾಗಿಲ್ಲ. ಹಾಗಿರದಿದ್ದರೆ ದುಃಖಾಶ್ರುಗಳನ್ನುದುರಿಸುತ್ತಿದ್ದ ಮಹಾತ್ಮಾಗಾಂಧಿಯವರು ಇಷ್ಟು ಉಗ್ರವಾದ ತಪಶ್ಚರ್ಯೆಯನ್ನು ನಮಗಾಗಿ ಆಚರಿಸಬೇಕಾಗುತ್ತಿದ್ದಿಲ್ಲ. ಇನ್ನು ಪಾಶ್ಚಿಮಾತ್ಯರಲ್ಲಿ ಅಧ್ಯಾತ್ಮಶಾಸ್ತ್ರವೇ ಇಲ್ಲವೆಂದು ನಮ್ಮಲ್ಲಿ ಸುಶಿಕ್ಷಿತರೂ ಕೂಡ ತಿಳಿಯುತ್ತಾರೆ. ಇದಕ್ಕೇನೆನ್ನಬೇಕೋ ನಮಗಂತೂ ತಿಳಿಯದು. ಸುಧಾರಿಸಿದ ರಾಷ್ಟ್ರಗಳ ಜೀವನವು ಸಹಸ್ರಮುಖವಾಗಿ ಪ್ರಕಟವಾಗುತ್ತಿರುತ್ತದೆ. ಅವರ ಲಲಿತಕಲೆ, ಶಿಲ್ಪಕಲೆ, ಭಾಷಾಸಾಹಿತ್ಯ, ನೀತಿಶಾಸ್ತ್ರ, ಧರ್ಮಶಾಸ್ತ್ರಗಳೆಲ್ಲ ಆ ಆ ದೇಶದ ಆ ಆ ಕಾಲದ ಸ್ಥಿತಿಗತಿಗಳನ್ನು ಸ್ಪಷ್ಟವಾಗಿ ತೋರಿಸುವ ನಿರ್ಮಲವಾದ ದರ್ಪಣಗಳೆಂಬುದು ಎಲ್ಲರಿಗೂ ಗೊತ್ತಿರಬಹುದು. ಅದು ನಿಜವಿದ್ದರೆ ಸುಧಾರಿಸಿದ ಪಾಶ್ಚಾತ್ಯರು ಅಧ್ಯಾತ್ಮಶಾಸ್ತ್ರದಲ್ಲಾದರೂ ಹಿಂದುಳಿದಿರುವರೆಂದು ಹೇಳುವುದು ತಪ್ಪಾಗದಿರದು. ಸಾಕ್ರೇಟಿಸ, ಪ್ಲೇಟೋ, ಅರಿಸ್ಟಾಟಲ್, ಕಾಂಟ, ಹೇಗೆಲ್ಲ, ಬ್ರಾಡ್‌ಲೇ ಮೊದಲಾದ ಪಂಡಿತರು ನಮ್ಮಲ್ಲಿ ಯಾವ ತತ್ತ್ವಜ್ಞನಿಗೂ ಹಿಂದುಳಿಯಲಾರರೆಂಬುದು ನಾವೆಲ್ಲರೂ ಲಕ್ಷದಲ್ಲಿಡಬೇಕಾದ ಮಾತು. ಪ್ಲೇಟೋ, ಕಾಂಟ, ಹೇಗೆಲ್ಲ, ಬ್ರಾಡ್ಲೆ ಮೊದಲಾದವರ ಗ್ರಂಥಗಳನ್ನೋದುತ್ತಿರುವಾಗ, ಇವು ಮಾನವರ ಗ್ರಂಥಗಳೇ ಇರಬಹುದೇ? ಎಂದು ಹಲವು ಸಾರೆಯಂತೂ ಈ ಲೇಖಕನಿಗೆ ಎನಿಸದೆ ಹೋಗಿಲ್ಲ. ನಮ್ಮಲ್ಲಿಯ ಋಷಿಗಳ ಮಹತ್ತ್ವವನ್ನು ಈ ವಿಷಯದಲ್ಲಿ ನಾವು ಕಡಿಮೆಮಾಡಲಿಚ್ಛಿಸುವುದಿಲ್ಲ. ಆದರೆ ಪಾಶ್ಚಿಮಾತ್ಯರಾದರೂ ನಮಗೆ ಯಾವ ರೀತಿಯಿಂದಲೂ ಹಿಂದೆ ಬಿದ್ದಿಲ್ಲ; ಇಷ್ಟೇ ಅಲ್ಲ, ಪ್ರತಿಯೊಂದು ವಿಷಯದಲ್ಲಿಯೂ ಅವರು ನಮ್ಮ ಮುಂದೆ ಓಡುವ ಪ್ರಯತ್ನಮಾಡಿರುವರೆಂದು ನಮಗೆ ಹೇಳಬೇಕಾಗಿದೆ. ನಮ್ಮಲ್ಲಿ ಋಷಿಶ್ರೇಷ್ಠರಾದ ಅನುಭಾವಿಗಳಾಗಿ ಹೋದರೆ ಅವರಲ್ಲೂ ಬೋನಾವೆಂಚುರನಂಥ ಹಲವು ಅನುಭಾವಿಗಳಾಗಿ ಹೋಗಿದ್ದಾರೆಂಬುದನ್ನು ನಾವು ಲಕ್ಷದಲ್ಲಿಡಬೇಕು. ಪರಮೇಶ್ವರನೇನು ನಮ್ಮ ಆರ್ಯಾವರ್ತದ ಸ್ವತ್ತುಮಾತ್ರನಾಗಿರುವನೇ ? ಈಶ್ವರನ ಆವಿರ್ಭಾವವು ಎಲ್ಲೆಡೆಯಲ್ಲಿ ಎಲ್ಲಕಾಲಕ್ಕೆ ಒಂದಿಲ್ಲೊಂದು ರೀತಿಯಿಂದ ಆಗುತ್ತಲೇ ಇರುವುದು. "ಯದ್ಯದ್ ವಿಭೂತಿಮತ್ ಸತ್ವಂ" ಇತ್ಯಾದಿ ಗೀತಾಶ್ಲೋಕವೂ ಇದಕ್ಕೆ ಸಾಕ್ಷಿ. ಬ್ರಾಡ್‌ಲೇ ಮೊದಲಾದ

ಪಾಶ್ಚಾತ್ಯರಲ್ಲಿಯೂ ತತ್ತ್ವಭಕ್ತರಿರುವರು

ವರ ಗ್ರಂಥಗಳನ್ನೋದುವವರಿಗೆ ಇವು ಶ್ರೀಶಂಕರಾಚಾರ್ಯರ ಭಾಷ್ಯದ ರೂಪಾಂತರಗಳೇ ಇರಬಹುದೇ ? ಎಂಬ ಶಂಕೆಯು ಬರದಿರಲಾರದು. ಆದರೂ ಶಂಕರಾಚಾರ್ಯರ ಹೆಸರೂ ಕೂಡ ಆ ಆಂಗ್ಲಪಂಡಿತರಿಗೆ ಗೊತ್ತಿದ್ದಂತೆ ಕಾಣು ವುದಿಲ್ಲ. ಕಾಂಟನ "Understanding makes Nature, though it does not create it " ಎಂಬ ಪ್ರಸಿದ್ಧವಾಕ್ಯವು ಶಂಕರಾಚಾರ್ಯರ ಅಧ್ಯಾಸವಾದಕ್ಕೆ ಎಷ್ಟು ಸಮೀಪವಾಗಿರುವುದೆಂಬುದನ್ನು ಇದೇ ಪುಸ್ತಕದಲ್ಲಿ ಮುಂದೆ ತೋರಿಸಿಕೊಟ್ಟಿರುವೆವು. ಪ್ಲೇಟೋನ " Idea of the God " ಎಂದರೆ ಬ್ರಹ್ಮಕಲ್ಪನೆಯು ಬೇರೆ ಅವತಾರವೇ ಇರುವುದೆಂಬುದನ್ನು ಏ. ಈ. ಟೇಲರ ರೆಂಬವರು ಪ್ಲೇಟೋನ ಮೇಲೆ ಬರೆದ ತಮ್ಮ ಪುಸ್ತಕದಲ್ಲಿ ತೋರಿಸಿಕೊಟ್ಟಿದ್ದಾರೆ. ಹೇಗೇಲ್ಲನ " Idealism " ವಂತೂ ಪ್ರಸಿದ್ಧವೇ ಇದೆ. ಈ ರೀತಿಯಿಂದ ನೋಡಿದರೆ ಭೌತಿಕಶಾಸ್ತ್ರಗಳ ಅಭ್ಯಾಸಕ್ಕೇ ತಮ್ಮನ್ನು ಮಾರಿಕೊಂಡಿರುವರೆಂದೆನಿ ಸುವ ಪಾಶ್ಚಿಮಾತ್ಯರು, ಉಳಿದ ವಿಚಾರಗಳಿಗೆ ತಿಲಾಂಜಲಿಯನ್ನು ಕೊಟ್ಟಿಲ್ಲೆಂಬು ವುದು ಎಲ್ಲರಿಗೂ ತಿಳಿಯುವಂತಿದೆ. ಮುಖ್ಯವಾಗಿ ಅವರಿಂದ ನಾವು ಕಲಿಯತಕ್ಕ ಮಾತೆಂದರೆ: ನಿರಾಗ್ರಹವೃತ್ತಿಯಿಂದ ಶಾಸ್ತ್ರೀಯಪದ್ಧತಿಗಳಿಗನುಸರಿಸಿ, ಜ್ಞಾನ ಕ್ಕಾಗಿ ಜ್ಞಾನವನ್ನು ಕಂಡುಹಿಡಿಯುವ ಅವರ ಅಮೋಘವಾದ ಅವಿಶ್ರಾಂತವಾದ ದೀರ್ಘೋದ್ಯೋಗವು. ನಾವು ನಮ್ಮ ಪೂರ್ವಜರ ಕೀರ್ತಿಯಿಂದಲೇ ದೊಡ್ಡವ ರಾಗಬೇಕೆನ್ನುತ್ತೇವೆ. ಪಾಶ್ಚಾತ್ಯರಾದರೋ ತಮ್ಮ ಸ್ವಂತ ಪ್ರಯತ್ನದಿಂದ ದೊಡ್ಡಿ ಸ್ಥಿಕೆಯನ್ನು ಗಳಿಸಬೇಕೆನ್ನುತ್ತಾರೆ. ಈ ಸತ್ಯಶೋಧನೆಯ ಮಾರ್ಗದಲ್ಲಿ ಅವರು ಎಂತಹ ಕಷ್ಟಗಳನ್ನೂ ಎಷ್ಟು ನಿಶ್ಚಲವೃತ್ತಿಯಿಂದ ಸಹಿಸುವರೆಂಬುದನ್ನು ಮನ ಗಾಣಬೇಕಾದರೆ ಭೌತಿಕಶಾಸ್ತ್ರಗಳ ಇತಿಹಾಸವನ್ನೇ ಓದಬೇಕು. ಎಂದರೆ ಸತ್ಯ ದೇವಿಯು ಒಲಿಯಬೇಕಾದರೆ ಎಷ್ಟು ಜನ ಭಕ್ತರು ಬಲಿಬೀಳಬೇಕಾಗುವುದೆಂಬುದು ಸ್ಪಷ್ಟವಾಗುವುದು. ಕೋಪರ್ನಿಕಸ್, ಬ್ರೂನೋ, ಗ್ಯಾಲಿಲಿಯೋ, ಡೇಕಾರ್ಟ ಮೊದಲಾದವರ ಹೆಸರುಗಳು ಈ ವಿಷಯದಲ್ಲಿ ಅಜರಾಮರವಾಗಿವೆ. ದುರಾಗ್ರಹ ವೃತ್ತಿಯಿಂದ ಪ್ರೇರೇಪಿತನಾದ ಕ್ರೂರ ರಾಕ್ಷಸನು ಧರ್ಮವೆಂಬ ಉಚ್ಚ ಹೆಸರಿನ ಕೆಳಗೆ ಎಷ್ಟು ಜನ ಸತ್ಯಭಕ್ತರನ್ನು ಸಂಹರಿಸಿರುವನೆಂಬುದನ್ನು ಓದಹತ್ತಿದರೆ ಹೃದ ಯವು ತಲ್ಲಣಿಸಿ ದುಃಖಾಶ್ರುಗಳು ಧಾರೆಯಾಗಿ ಉಮರಹತ್ತುವವೆಂಬುದರಲ್ಲಿ ಸಂದೇಹವಿಲ್ಲ. ಮನುಷ್ಯನೊಮ್ಮೆ ಧರ್ಮಾಂಧನಾದನೆಂದರೆ ಅವನು ಯಾವ

ಕೃತಿಗಳನ್ನೂ ಮಾಡಲಿಕ್ಕೆ ಹೇಸುವುದಿಲ್ಲ. ಧರ್ಮದ ತತ್ತ್ವಗಳಾದರೋ ಸಾಮಾನ್ಯ ಜನರಿಗೆ ತಿಳಿಯಲಶಕ್ಯವಾಗಿರುವುದರಿಂದ, ಕುಹಕರಾದ ಕೆಲವು ಸ್ವಾರ್ಥಸಾಧಕರ ಕೈಯಲ್ಲಿ ಧರ್ಮರಕ್ಷಣೆಯಂತಹ ಪವಿತ್ರ ಕಾರ್ಯವು ಒಮ್ಮೆ ಹೇಗಾದರೂ ಸೇರಿತೆಂದರೆ, ಆ ಧರ್ಮದ ದುರ್ದೆಶೆಯನ್ನು ನೋಡಲಾಸಲ್ಲ. ಆದುದರಿಂದಲೇ ಧರ್ಮ ಪಾವಿತ್ರ್ಯವನ್ನು ಕಾಯ್ದುಕೊಳ್ಳಬೇಕಾದರೆ ಇಂತಹ ಸ್ವಾರ್ಥಸಾಧಕರ ಮಧ್ಯಸ್ಥಿಕೆಯನ್ನು ನಾವು ಅವಶ್ಯವಾಗಿ ತ್ಯಜಿಸಬೇಕಾಗುವುದು. ಈ ಕಾಲವು ನಮ್ಮ ಭರತಖಂಡದಲ್ಲಾದರೂ ಸದ್ಯಕ್ಕೆ ಬರಲೆಳಿಸಿದೆಯೆಂಬುದು ನಮ್ಮೆಲ್ಲರ ಸುದೈವದ ಮಾತು. ಬಹಿಃಪ್ರವೃತ್ತಿಯವರೆಂದು ನಾವು ಪಾಶ್ಚಾತ್ತ್ಯರನ್ನು ತಿರಸ್ಕರಿಸದೆ ಅವರಲ್ಲಿದ್ದ ಸದ್ಗುಣಗಳನ್ನು ಸ್ವೀಕರಿಸಿ ಜೀವನಕಲಹದಲ್ಲಿ ಮುಂದೊರೆಯಲು ಯತ್ನಿಸುವುದು ಸುಧಾರಿಸಿದವರ ಕರ್ತವ್ಯ. ಎಂದರೆ ಮಾತ್ರ ನಮ್ಮ ಮಾತೃಭೂಮಿಯು ವೀರಪುತ್ರಿಯಾಗುವಳೆಂದು ನಿಃಸಂದೇಹವಾಗಿ ಹೇಳಬಹುದು.

ನಿಜವಾಗಿ ನೋಡಿದರೆ ಭೌತಿಕಶಾಸ್ತ್ರಗಳಿಗೂ ಅಧ್ಯಾತ್ಮಕ್ಕೂ ವಿರೋಧವಿರುವ ಕಾರಣವಿಲ್ಲ. ಯಾಕೆಂದರೆ ಅವುಗಳ ವಿಷಯಗಳೇ ಬೇರೆ; ಅವುಗಳ ಪದ್ಧತಿಗಳೇ ಬೇರೆ. ಭೌತಿಕಶಾಸ್ತ್ರಜ್ಞನು ನಾಸ್ತಿಕನೇ ಇರಬೇಕೆಂಬ ನಿಯಮವಿಲ್ಲ; ವೇದಾಂತಿಯು ಭೌತಿಕಶಾಸ್ತ್ರಗಳ ನಿಂದಕನೇ ಇರಬೇಕೆಂಬ ನಿಯಮವಿಲ್ಲ. ಶಾಸ್ತ್ರಜ್ಞನು ವೇದಾಂತಿಯಾಗುವುದು ಶಕ್ಯವಿದೆ; ವೇದಾಂತಿಯು ಶಾಸ್ತ್ರಜ್ಞನಾಗುವುದು ಶಕ್ಯವಿದೆ. ಆದರೆ ಇಬ್ಬರಲ್ಲೂ ಶಾಸ್ತ್ರಜ್ಞನ ನಿರಾಗ್ರಹವೃತ್ತಿಯು ಅವಶ್ಯವಾಗಿ ಬೇಕು. ಈ ವಿಷಯದಲ್ಲಿ ನಾವು ಪಾಶ್ಚಾತ್ತ್ಯರನ್ನು ಎಷ್ಟು ಸ್ತುತಿಸಿದರೂ ಅದು ತುಸುವೇ! ಪ್ರಮಾಣಪೂರ್ವಕವಾಗಿ ಸಿದ್ಧಮಾಡಿಕೊಡಲೆಳಿಸಿದರೆ ಅವರು ಬೇಕಾದ ಸಿದ್ಧಾಂತಗಳನ್ನು ಒಪ್ಪಿಕೊಳ್ಳಲಿಕ್ಕೆ ಸಿದ್ಧರಾಗಿಯೇ ಇರುವರು. ನಾವು ಮಾತ್ರ ವೇದಭಿನ್ನವಾದ ಜ್ಞಾನವು ಹುಟ್ಟುವುದೇ ಶಕ್ಯವಿಲ್ಲೆಂದು ತಿಳಿದು ಪಾಶ್ಚಾತ್ಯರನ್ನು ಜರೆಯುವೆವು. ಅವರಾದರೋ ವೇದಸಿದ್ಧಾಂತಗಳನ್ನು, ಅವು ಸತ್ಯವೆಂದು ಸಿದ್ಧವಾದರೆ, ಎಂದಾದರೂ ಒಪ್ಪಲಿಕ್ಕೆ ಸಿದ್ಧರು. ಇದು ಎಂತಹ ಜ್ಞಾನಲಾಲಸೆಯೆಂಬುದನ್ನು ವಾಚಕರೇ ತರ್ಕಿಸಲಿ. ಧರ್ಮ ಹಾಗೂ ಭೌತಿಕಶಾಸ್ತ್ರಗಳ ನಡುವಿನ ಯುದ್ಧವು ತತ್ತ್ವಜ್ಞಾನಿಯ ಮಧ್ಯಸ್ಥಿಕೆಯಿಂದಲೇ ಶಾಂತವಾಗಬೇಕಾಗಿರುವುದೆಂದು ಪಾಲ್ಸನ್ ಎಂಬವರು "ತತ್ತ್ವಜ್ಞಾನಪ್ರವೇಶ"ವೆಂಬ ತಮ್ಮ ಗ್ರಂಥದಲ್ಲಿ

ಭೌತಿಕಶಾಸ್ತ್ರಕ್ಕೂ ವೇದಾಂತಕ್ಕೂ ವಿರೋಧ ವಿರುವ ಕಾರಣವಿಲ್ಲ.

ಪ್ರತಿಪಾದನೆ ಮಾಡಿದ್ದಾರೆ. ಆ ತತ್ತ್ವಜ್ಞಾನಿಯ ಸ್ಥಾನವು ನಮ್ಮ ವೇದಾಂತಿಗೆ ಸುಲಭಸಾಧ್ಯವಾಗಿರುವುದೆಂದು ಸೂಕ್ಷ್ಮವಾಗಿ ವಿಚಾರಿಸಿದರೆ ತಿಳಿದುಬರುವಂತಿದೆ. ಯಾಕೆಂದರೆ ನಮ್ಮ ವೇದಾಂತವಾದರೂ ಭೌತಿಕಶಾಸ್ತ್ರಗಳನ್ನು ದ್ವೇಷಿಸುವುದಿಲ್ಲೆಂಬ ಮಾತು ನೆನಪಿನಲ್ಲಿಡತಕ್ಕದ್ದಾಗಿದೆ. "ವಿದ್ಯೆಗಳೊಳಗೆ ನಾನು ಅಧ್ಯಾತ್ಮವಿದ್ಯೆಯು" ಎಂದು ಶ್ರೀಕೃಷ್ಣನು ವೇದಾಂತದ ಪ್ರಶಂಸೆಯನ್ನು ಮಾಡಿದರೆ ಭೌತಿಕಶಾಸ್ತ್ರವನ್ನು ತಿರಸ್ಕರಿಸಿದಂತಾಯಿತೆ? "ಅನ್ಯಾ ವಾಚೋ ವಿಮುಂಚಥ" –ಉಳಿದೆಲ್ಲ ಶಾಸ್ತ್ರಗಳನ್ನು ಬಿಟ್ಟುಬಿಡಿರಿ–ಇವೇ ಮೊದಲಾದ ವಾಕ್ಯಗಳಿಂದ ಉಳಿದ ಶಾಸ್ತ್ರಗಳ ಜ್ಞಾನವು ಅಧ್ಯಾತ್ಮಜ್ಞಾನಕ್ಕಿಂತ ಕಡಿಮೆ ಪ್ರತಿಯದೆಂದು ಮಾತ್ರ ನಮ್ಮ ವೇದಾಂತಿಗಳ ಅಭಿಪ್ರಾಯವಿರುವುದೆಂಬುದು ಸ್ಪಷ್ಟವಿದೆ. ಬರೇ ಭೌತಿಕ ಶಾಸ್ತ್ರಗಳ ಜ್ಞಾನವು ಏಕಾಂಗೀಣವಾಗುವುದು; ವೇದಾಂತದ ಸಹಾಯವಿಲ್ಲದಿದ್ದರೆ ಅದು ಕುರುಡನ ಅವಸ್ಥೆಗೀಡಾಗುವುದೆಂದು ನಮ್ಮ ಶಾಸ್ತ್ರಕಾರರ ಮತವು. ಹಾಗೆಯೇ ಭೌತಿಕಶಾಸ್ತ್ರಗಳ ಸಹಾಯವಿಲ್ಲದ ವೇದಾಂತವೂ ಕುಂಟವಾಗುವುದೆಂದು ಹೇಳಬಹುದು. ಸತ್ಯಶೋಧನೆಗೆ ಎರಡೂ ಅಂಗಗಳು ಅವಶ್ಯವಾಗಿರುವವೆಂಬುದೇ ಇದೆಲ್ಲದರ ಸಾರಾಂಶವು. ಈ ಮಾತನ್ನು ಭಾಗವತದಲ್ಲಿ ಒಂದೆಡೆಗೆ ಸ್ಪಷ್ಟಮಾಡಿ ತೋರಿಸಿದ್ದಾರೆ. "ಭಗವಂತನ ಗುಣಯುಕ್ತವಾದ ಸ್ಥೂಲರೂಪದಲ್ಲಿ ಮಾತ್ರ ತೊಡಗಿದ ಮನಸ್ಸನ್ನು ನಿರ್ಗುಣನಾದ ಸೂಕ್ಷ್ಮ ಪರಬ್ರಹ್ಮನಲ್ಲಿಯೂ ನಿಲ್ಲಿಸುವುದು ಶಕ್ಯವಿದೆ." ( **भगवतो गुणमये स्थूलरूप आवेशितं मनः ह्यगुणेऽपि सूक्ष्मतम आत्मज्योतिषि परेब्रह्मणि भगवति वासुदेवाख्ये क्षममावेशितुम् ॥ भागवत** V. XVI. 3 ) ಹೀಗಿರದಿದ್ದರೆ ಪರಮಾತ್ಮಜ್ಞಾನನಿರತರಾದ ಮಹರ್ಷಿಗಳೇ ವೈದ್ಯಶಾಸ್ತ್ರ, ರಸಾಯನಶಾಸ್ತ್ರ, ಕಾಮಶಾಸ್ತ್ರ ಮೊದಲಾದವುಗಳನ್ನು ರಚಿಸುತ್ತಿರಲಿಲ್ಲ. ಕಿಂಬಹುನಾ, ಜ್ಞಾನಸಾಧನೆಗೆ ಮಾನವದೇಹವು ಅತ್ಯವಶ್ಯವಾಗಿರುವುದರಿಂದ ತದ್ದ್ವಾರಾ ಭೌತಿಕಶಾಸ್ತ್ರಗಳ ಜ್ಞಾನವೂ ಅವಶ್ಯವಾಗಿದೆಯೆಂದು ಹೇಳಬಹುದು. ( **शरीरमाद्यं खलु धर्मसाधनम् । कु. सं.** V. 33. **देहस्तु सर्वसंघातो जगत्तस्थुरिति द्विधा । अत्रैव मृग्यः पुरुषो नेति नेतीत्यतत्त्यजन् ॥ भागवत** VII. VII. 23 )

ಆಗಲಿ, ವೇದಾಂತಕ್ಕೆ ಭೌತಿಕಶಾಸ್ತ್ರಗಳ ಅಭ್ಯಾಸವು ವಿರುದ್ಧವಾಗಿಲ್ಲೆಂದು ಒಪ್ಪಬಹುದು. ಆದರೆ ಈ ವಿಕಾಸವಾದವು ಮಾತ್ರ ನಮಗೆ

ವಿಕಾಸವಾದವು ನಾಸ್ತಿಕವಾಗಿದೆ

ನಿರುಪಯುಕ್ತವಾಗಿರುವುದು; ಅದು ಶುದ್ಧವಾದ ಸರಳವಾದ ನಾಸ್ತಿಕವಾದವೆಂಬುದು ಪ್ರಸಿದ್ಧವಿದೆ. ಬೈಬಲ್ಲಿನಲ್ಲಿ ಹೇಳಿದ ತತ್ತ್ವಗಳಂತೂ ಡಾರ್ವಿನ್ನನ ಶೋಧಗಳಿಂದ ಮೂಲೆಗುಂಪಾಗಿ ಬಿದ್ದಿರುತ್ತವೆ. ಅದರಂತೆಯೇ ಉಳಿದ ಧರ್ಮಗಳಾದರೂ ಈ ವಾದದ ಸೆಳವಿಗೆ ಸಿಕ್ಕು ನಾಶವಾಗುವ ಸಂಭವವಿರುವುದರಿಂದ, ಈ ನಾಸ್ತಿಕವಾದದಿಂದ ನಮಗೇನಾಗಬೇಕಾಗಿದೆ ? " ವಿಕಾಸವಾದವು ಅಶಿಕ್ಷಿತತನದಲ್ಲಿ ಹುಟ್ಟಿ ನಾಸ್ತಿಕತನದಲ್ಲಿ ಪರಿಣಮಿಸುತ್ತದೆ"ಂಬ ವಾಕ್ಯದ ಸಾರಾಂಶವೂ ಇದೇ. " ಒಳ್ಳೇ ಆಸ್ತಿಕರಾದ ಚಿಕ್ಕ ಬಾಲಕರು ಕಾಲೇಜುಗಳಿಗೆ ಹೋಗಿ, ಅಲ್ಲಿ ನಾಲ್ಕು ವರುಷ ಶಿಕ್ಷಣವನ್ನು ಪಡೆದರೆಂದರೆ, ಅಲ್ಲಿಂದ ನಾಸ್ತಿಕರಾಗಿ ತಮ್ಮ ಧರ್ಮಗ್ರಂಥಗಳನ್ನೂ, ದೇವಾಲಯುಗಳನ್ನೂ, ಧರ್ಮವನ್ನೂ ತಿರಸ್ಕಾರಮಾಡುವುದನ್ನು ಕಲಿತೇ ಮನೆಗೆ ತಿರುಗಿಬರುವರು. ಆದುದರಿಂದ ಈ ವಿಕಾಸವಾದವು ನಮ್ಮ ವಿದ್ಯಾಪೀಠಗಳ ಹುಡುಗರನ್ನು ನಾಸ್ತಿಕರನ್ನಾಗಿಮಾಡುವುದು. " ಎಂದು ಹಲವು ಅಮೇರಿಕನ್ ಪಂಡಿತರು ಅಭಿಪ್ರಾಯಪಡುತ್ತಿರುವರು. ಸನ್ ೧೯೨೩ ರಲ್ಲಿ ಪ್ರಸಿದ್ಧವಾದ "Atheism in our Universities" by Fairhurst — " ನಮ್ಮವಿದ್ಯಾಪೀಠಗಳಲ್ಲಿಯ ನಾಸ್ತಿಕತನವು " ಎಂಬ ಪುಸ್ತಕವು ಈ ದೃಷ್ಟಿಯನ್ನು ಬಹು ಚೆನ್ನಾಗಿ ಮಂಡಿಸಿರುತ್ತದೆ. " ಈಗಿನ ಅಭ್ಯಾಸಕ್ರಮಗಳು ಶೀಲದ ಸುಧಾರಣೆಯ ಕಡೆಗೆ ತುಸುವಾದರೂ ಲಕ್ಷಗೊಡುವುದಿಲ್ಲ; ಈ ಜಗತ್ತಿನಲ್ಲಿ (ಎರಡನೆಯವರನ್ನು ಮುರಿಬಡೆದು) ತಾನು ಹೇಗೆ ಬಲಿಷ್ಠನಾಗಬೇಕೆಂಬ ದೃಷ್ಟಿಯಿಂದಲೇ ಅವುಗಳನ್ನು ರಚಿಸಿದ್ದಾರೆ. ನಮ್ಮಲ್ಲಿಯ ಎಷ್ಟೋ ಜನರ ಮನಸು ಇನ್ನೂ ಸ್ಥೂಲಜಡವಾದದಲ್ಲಿಯೇ (gross materialism) ಹೊರಳಾಡುತ್ತಿರುವುದು. ನ್ಯಾಯವಾಗಿ ನೋಡಿದರೆ ನಾಸ್ತಿಕರೂ, ಅಜ್ಞೇಯವಾದಿಗಳೂ, ಜಡವಾದಿಗಳೂ ನಮ್ಮ ವಿದ್ಯಾಪೀಠಗಳ ಅಭ್ಯಾಸಕ್ರಮವನ್ನು ಏರ್ಪಡಿಸುವ ಸಂಸ್ಥೆಗಳಲ್ಲಿರಲಿಕ್ಕೆ ಅನರ್ಹರು. ನಾಸ್ತಿಕವಾದವೇ ಹಬ್ಬಬೇಕೆಂದು ಜನರು ಈ ವಿದ್ಯಾಪೀಠಗಳಿಗೆ ದುಡ್ಡು ಕೊಡುತ್ತಿರುವುದಿಲ್ಲ......" ಇದರ ಮೇಲಿಂದ ವಿಕಾಸವಾದವು ಕ್ರಿಸ್ತಧರ್ಮದ ಮೇಲೆ ಯಾವ ತರದ ಪರಿಣಾಮವನ್ನು ಹುಟ್ಟಿಸಿದೆಯೆಂಬುದು ಸ್ಪಷ್ಟವಾಗುವಂತಿದೆ. ಈ ಜಗತ್ತನ್ನು ಸರ್ವಜ್ಞನಾದ, ಸರ್ವವ್ಯಾಪಿಯಾದ ದೇವರು ಹುಟ್ಟಿಸಿದನೆಂದೂ, ಅವನಿಂದಲೇ ಈ ಜಗತ್ತು ನಡೆದಿರುವುದೆಂದೂ ಬೈಬಲ್ಲು ಹೇಳುತ್ತದಷ್ಟೇ ? ಮನುಷ್ಯನು

ದೇವರ ಪ್ರತಿಬಿಂಬನೆಂದು ಆ ಧರ್ಮದ ಅಂಬೋಣವಿದೆ. ಈ ಜಗತ್ತಿನೊಳಗಿನ ಪ್ರಾಣಿವರ್ಗಗಳು ಮೊದಲಿನಿಂದಲೂ ನಿಶ್ಚಿತವಾಗಿವೆ. ಯೇಸೂಕ್ರಿಸ್ತನು ದೇವರ ಮಗನು; ಕನ್ನಿಕೆಯಾದ ಮೇರಿಯ ಹೊಟ್ಟೆಯಲ್ಲಿ ಅವನು ಅಗಾಧವಾದ ರೀತಿಯಿಂದ ಹುಟ್ಟಿಬಂದನು. ಅಡಮ್ ಮತ್ತು ಈವ್ಹರು ಮಾಡಿದ ಪಾಪಗಳ ವಿಮೋಚನೆಗಾಗಿ ಅವನು ಜನ್ಮತಾಳಬೇಕಾಯಿತು. ಶಿಲುಬೆಗೆ ಕಳುಹಿದ ಮೂರು ದಿನಗಳ ಮೇಲೆ ಅವನು ತಿರುಗಿ ಎದ್ದು ಬಂದು ಜನರಿಗೆ ಉಪದೇಶಮಾಡಿ ಎಲ್ಲರೂ ನೋಡುತ್ತಿರುವಂತೆ ಸ್ವರ್ಗಾರೋಹಣವನ್ನು ಮಾಡಿದನು. ಮುಂದೆ ಹುಟ್ಟಬಹುದಾದ ಎಲ್ಲ ಮಾನವರ ಅಂಶಗಳು ಸೂಕ್ಷ್ಮರೂಪದಿಂದ ಈವ್ಹಳ ಹೊಟ್ಟೆಯಲ್ಲಿ ಮುಂಚಿನಿಂದಲೇ ಇದ್ದವು. ಗರ್ಭಧಾರಣೆಯಾದ ಕೆಲವು ದಿವಸಗಳ ಮೇಲೆ ದೇವರಿಂದ ಪ್ರೇರಿತನಾದ ಅಮರ ಆತ್ಮನು ಗರ್ಭಕೋಶದಲ್ಲಿ ಸೇರುವನು. ಹುಡುಗನು ಹುಟ್ಟಬೇಕಾಗಿದ್ದರೆ ಈ ಆತ್ಮನು ಗರ್ಭಧಾರಣೆಯಿಂದ ೪೦ ದಿನಗಳ ಮೇಲೂ, ಹುಡುಗೆಯಾಗಬೇಕಾಗಿದ್ದರೆ ೮೦ ದಿನಗಳ ಮೇಲೂ, ಗರ್ಭಾಶಯವನ್ನು ಸೇರುವನು. ಅಲ್ಲಿಯವರೆಗೆ ಗರ್ಭಾಶಯವು ಆತ್ಮವಿರಹಿತವಾಗಿರುವುದು. ಇದೇ ಆತ್ಮನೇ ಮುಂದೆ ಜನ್ಮತಾಳಿ, ಸಂಸಾರದ ಸುಖದುಃಖಗಳನ್ನು ಅನುಭವಿಸಿ, ಇಲ್ಲಿ ಮಾಡುವ ಪಾಪಪುಣ್ಯಗಳಿಗೆ ಕರ್ತೃವಾಗುವನು. ಮರಣಾನಂತರ ನ್ಯಾಯನಿರ್ಣಯದ ವರೆಗೆ (Judgment Day) ಎಲ್ಲಿಯೋ ಅಲೆದಾಡುತ್ತಿರುವನು. ಆ ದಿವಸ ದೇವರು ಎಲ್ಲ ಆತ್ಮರನ್ನೂ ಕರೆಸಿಕೊಂಡು, ಅವರ ಪುಣ್ಯಾಪುಣ್ಯಗಳ ವಿಚಾರಮಾಡಿ, ಅವರವರ ಕೃತಿಗಳಿಗೆ ತಕ್ಕಂತೆ ಆತ್ಯಂತಿಕಸ್ವರ್ಗವನ್ನಾಗಲಿ ನರಕವನ್ನಾಗಲಿ ದಯಪಾಲಿಸುವನು. ಆದುದರಿಂದ ನಾವೆಲ್ಲರೂ ದೇವರ ಮಕ್ಕಳೆಂಬುದನ್ನರಿತುಕೊಂಡು ಶುದ್ಧಚಿತ್ತದಿಂದ ಪರರಿಗೆ ಸಹಾಯಮಾಡಬೇಕು; ಪರೋಪಕಾರಕ್ಕಾಗಿಯೇ ಈ ದೇಹವನ್ನು ಸವೆಸುತ್ತಿರಬೇಕು. ಮನುಷ್ಯನು ಮೂಲತಃ ಪಾಪಿಷ್ಠನಾಗಿರುವುದರಿಂದ, ದೇವರ ಅನುಗ್ರಹವಿದ್ದ ವಿನಹ ಅವನು ಸ್ವರ್ಗಕ್ಕೆ ಬಾಧ್ಯಸ್ಥನಾಗಲಾರನು. ಆದರೂ ಮೇಲೆ ಹೇಳಿದಂತೆ ಇಂದ್ರಿಯ ಸಂಯಮಮಾಡಿ, ಪರೋಪಕಾರದಲ್ಲಿ ಆಯುಷ್ಯವನ್ನು ಕಳೆದರೆ, ಸ್ವರ್ಗವು ಸುಲಭಸಾಧ್ಯವು. ಈ ಜಗತ್ತಿನ ಸುಖಗಳಿಗೆ ಮರುಳಾಗಬಾರದು; ನಮ್ಮ ದೃಷ್ಟಿಯು ಯಾವಾಗಾದರೂ ಪರಲೋಕದ ಮೇಲೆಯೇ ನೆಟ್ಟಿರಬೇಕು. ನಾವಿರುವ ಭೂಮಿಯು ಸ್ಥಿರವಾಗಿರುವುದೆಂದೂ,

ಅದು ಸಪಾಟ ಅಥವಾ ಚಪ್ಪಟೆಯಾದ ಬೈಲಾಗಿರುವುದೆಂದೂ, ಸೂರ್ಯನು ಅದರ ಸುತ್ತಲೂ ತಿರುಗುತ್ತಿರುವನೆಂದೂ ಯೇಸೂಕ್ರಿಸ್ತನು ತಿಳಿಯುತ್ತಿದ್ದನು. ದೇವರಿಗೆ ಅಧೀನವಾದ ಒಂದು ಮುಖ್ಯ ಪಿಶಾಚಿಯು (Satan) ಮನುಷ್ಯ ಹಾಗೂ ಉಳಿದ ಪ್ರಾಣಿಗಳಿಗೆ ಕೇಡುಬಗೆಯುವುದಕ್ಕಾಗಿ, ದೇವರ ಅಪ್ಪಣೆಯಿಂದಲೇ ಸಾವಿರಾರು ಅನುಯಾಯಿಗಳನ್ನು ಕಳಿಸುವುದೆಂತಲೂ ಯೇಸುಕ್ರಿಸ್ತನ ವಿಶ್ವಾಸವಿತ್ತು. ಆದರೆ ಈ ವಿಚಾರಗಳೆಲ್ಲ ಉತ್ಕ್ರಾಂತಿವಾದದ ಹೊಡೆತಕ್ಕೆ ಸಿಕ್ಕು ಜಿಬ್ಬಿಯಾಗಿಹೋಗುವವೆಂಬುದು ಮೇಲೆಯೇ ಕಾಣುವಂತಿದೆ. ವಿಕಾಸವಾದವು ನಿಜವಿದ್ದರೆ ಕ್ರಿಸ್ತಧರ್ಮದ ಈ ತತ್ತ್ವಗಳೆಲ್ಲ ಹುಡುಗಾಟಿಕೆಯ ಕಲ್ಪನೆಗಳೆಂದು ತಾನೇ ಸಿದ್ಧವಾಗುತ್ತಿದೆ. ಇದರಿಂದ ಕ್ರಿಸ್ತಧರ್ಮವು ಜೊಳ್ಳಿಲ್ಲದ್ದೆಂದೂ, ಮೇಲೆ ಚೆಂದವಾಗಿ ಕಂಡರೂ ಒಳಗೆ ಹೆಗ್ಗಣಹತ್ತಿದ ಗೋಡೆಯಂತಿರುವುದೆಂದೂ, ಹೂರಣವಿಲ್ಲದ ಹೋಳಿಗೆಯಂತೆ ಸ್ವಾದರಹಿತವಾದುದೆಂದೂ ಸ್ವಾಭಾವಿಕವಾಗಿಯೇ ಅನುಸರಿಸುವುದು. ಇವೆಲ್ಲ ಸ್ಪಷ್ಟವಾದ ಫಲಗಳನ್ನು ಅರಿತವರಾದುದರಿಂದಲೇ ಅಮೇರಿಕೆಯೊಳಗಿನ ಎಷ್ಟೋ ಪ್ರಾಂತಗಳು ತಮ್ಮ ಶಾಲೆ ಕಾಲೇಜುಗಳಲ್ಲಿ ಉತ್ಕ್ರಾಂತಿವಾದವನ್ನು ಕಲಿಸಬಾರದೆಂಬ ಶಾಸನವನ್ನು ವಿಧಿಸಿದ್ದಾರೆ ! ಪ್ರೊಫೇಸರರು ಸುಮ್ಮನಿರಬೇಕೆಂದೂ ಇಲ್ಲವಾದರೆ ರಾಜೀನಾಮೆ ಕೊಡಬಹುದೆಂದೂ ಅವರು ಪ್ರಸಿದ್ಧಪಡಿಸಿದ್ದಾರೆ. ಓಕ್ಲಾಹಾಮಾ (oklahama) ಎಂಬ ಪ್ರಾಂತದ ಪ್ರಜಾಪ್ರತಿನಿಧಿಗಳ ಸಭೆಯಲ್ಲಿ ೮೭:೨ ಓಟುಗಳಿಂದ ಪಾಸಾಗಿ ಉತ್ಕ್ರಾಂತಿವಾದವು ಶಿಕ್ಷಣಖಾತೆಯಲ್ಲಿರಲಿಕ್ಕೆ ಅನರ್ಹವೆಂದು ಸಿದ್ಧವಾಯಿತು. ( ಇದು ಫೆಬ್ರುವರಿ ತಿಂಗಳ ೨೧ನೇ ತಾರೀಖು, ೧೯೨೩ನೇ ಇಸ್ವಿಯ ದಿವಸ ಪಾಸಾಯಿತು.) ಅದರಂತೆಯೇ ಟೆಕ್ಸಸ್ (Texas), ಫ್ಲೋರಿಡಾ (Florida) ಮೊದಲಾದ ಪ್ರಾಂತಗಳೂ ವಿಕಾಸವಾದವನ್ನು ತಮ್ಮ ಅಭ್ಯಾಸಕ್ರಮದೊಳಗಿಂದ ತೆಗೆದುಹಾಕಿಬಿಟ್ಟವು. ಎಂದ ಮೇಲೆ ವಿಕಾಸವಾದವು ನಾಸ್ತಿಕವೆಂಬುವರ ಬಗ್ಗೆ ಸಂಶಯವೂ ಕೂಡ ಉಳಿಯುವ ಕಾರಣವಿಲ್ಲ.

ಆದರೆ ವಿಷಯಗಳನ್ನು ನಿಜವಾಗಿ ಅಭ್ಯಾಸಿಸುವ ಶಾಸ್ತ್ರೀಯಪದ್ಧತಿಯು ಇದಲ್ಲ. ಡಾರ್ವಿನ್, ವಾಲೇಸ ಮೊದಲಾದವರು ಎಷ್ಟೋ ವರುಷ ಪರಿಶ್ರಮ

ಅಭ್ಯಾಸಪದ್ಧತಿಯು ಹೇಗಿರಬೇಕು ?

ಮಾಡಿ, ಪ್ರತ್ಯಕ್ಷಪ್ರಮಾಣಗಳಿಂದ ಸಿದ್ಧಮಾಡಿ ತೋರಿಸಿದ್ದನ್ನು, ಅದು ಕೇವಲ ಬೈಬಲ್ಲಿನ ಆಗ್ರಹದ ವಾಕ್ಯಗಳಿಗೇ ವಿರುದ್ಧವಾಗಿರುವುದೆಂಬ ಕಾರಣದಿಂದಲೇ, ತಿರಸ್ಕರಿಸುವುದು ಅನ್ಯಾಯವಾಗುವುದು. ಅನುಭವಕ್ಕಿಂತ ಬೇರೊಂದು ಮಹತ್ವದ ಪ್ರಮಾಣವಿರುವುದು ಶಕ್ಯವಿಲ್ಲದ್ದರಿಂದ ಪ್ರತ್ಯಕ್ಷ ತೋರಿಸಿದ ಮಾತು ನಂಬದಿದ್ದರೆ ತರ್ಕಶಾಸ್ತ್ರದಲ್ಲಿ ಸ್ವಾದವೇ ಇಲ್ಲೆಂದು ಹೇಳಬೇಕಾದೀತು. ವಿಕಾಸವಾದವು ಅಗಣಿತವಾದ ಸಂಗತಿಗಳ (facts) ಮೇಲೂ, ವಿಶಿಷ್ಟತರದ ಪ್ರಯೋಗಗಳ ಮೇಲೂ ಅವಲಂಬಿಸಿರುವುದು. ಈ ಸಂಗತಿಗಳನ್ನು ಅಲ್ಲಗಳೆಯುವುದು ಯಾವನಿಗೂ ಸಾಧ್ಯವಿಲ್ಲ. ದುರಾಗ್ರಹಗಳನ್ನೂ, ಮೊದಲೇ ಮಾಡಿಟ್ಟುಕೊಂಡ ಕಲ್ಪನೆಗಳನ್ನೂ ಬಿಡುವಹೊರತು ಯಾವನೂ ಭೌತಿಕಶಾಸ್ತ್ರಗಳ ಅಭ್ಯಾಸಕ್ಕೆ ಅಧಿಕಾರಿಯಾಗಲಾರನು. ಆದುದರಿಂದ ಆಪ್ತವಾಕ್ಯವನ್ನು ತಿರಸ್ಕರಿಸದಿದ್ದರೂ, ಅದಕ್ಕೆ ಪ್ರಥಮತಃ ಅಷ್ಟು ವಿಶೇಷ ಮಹತ್ತ್ವವನ್ನು ಕೊಡದೆ, ನಾವು ಈ ಮೊದಲೇ ಚರ್ಚಿಸಿದ ಶಾಸ್ತ್ರೀಯಪದ್ಧತಿಗಳಿಗನುಸರಿಸಿ, ಸತ್ಯಾನ್ವೇಷಣೆಯ ಕೆಲಸವನ್ನು ಸಾಗಿಸಬೇಕು. ಎಂದರೆ ಮಾತ್ರ ನಮಗೆ ಸತ್ಯದೇವಿಯ ಪ್ರಸಾದವಾಗಬಹುದು. ಈ ದೃಷ್ಟಿಯಿಂದ ತೆಗೆದ ಸಿದ್ಧಾಂತಗಳು ನಮ್ಮ ವೇದಕ್ಕೆ ಅನುಸರಿಸಿರಲಿ, ಅನುಸರಿಸದೇ ಇರಲಿ, ನಮಗೆ ಗಮ್ಯವೇ ಆಗಬೇಕು. ವೇದದ ಸತ್ಯಾಸತ್ಯತೆಯನ್ನು ಕೂಡ ನಿರ್ಣಯಿಸಲಿಕ್ಕೆ ಇದರ ಹೊರತು ಬೇರೊಂದು ಸಾಧನವಿಲ್ಲೆಂದು ಹೇಳಬಹುದು. ಈ ದೃಷ್ಟಿಯಿಂದಲೇ ನಾವು ಈ ಪುಸ್ತಕವನ್ನು ಬರೆದಿದ್ದೇವೆ. ಈ ದೃಷ್ಟಿಯಿಂದಲೇ ವಾಚಕರು ಈ ಪುಸ್ತಕವನ್ನು ಓದಬೇಕೆಂದು ನಾವು ಬಿನ್ನವಿಸುತ್ತೇವೆ. ನಾಸ್ತಿಕವಾದದ ಸಿದ್ಧಾಂತಗಳನ್ನು ಎದುರಿಸಲಿಕ್ಕೆ ಅಶಕ್ತವಾದ ಆಸ್ತಿಕವಾದವು ತತ್ತ್ವಜ್ಞಾನವಲ್ಲ; ಸ್ವಾರ್ಥಸಾಧಕರ ಡಂಭಾಚಾರದ ಮಾತದು ! ನಿಸ್ಪೃಹಬುದ್ಧಿಯಿಂದ ವಿಚಾರಮಾಡಿ ಒಪ್ಪಬೇಕಾದ ಸಿದ್ಧಾಂತಗಳನ್ನು ನಾವು ಒಪ್ಪಲೇಬೇಕು. ಅವು ಹೇಗಿದ್ದರೇನು ? ವೇದಕ್ಕೆ ವಿರುದ್ಧವಾದರೇನು ? ಇಲ್ಲದಿದ್ದರೇನು ? ಎಲ್ಲವೂ ಅಷ್ಟೇ. ನಮ್ಮ ವೇದಾಂತ ತತ್ತ್ವಜ್ಞಾನದಲ್ಲಿ ಹುರುಳಿದ್ದುದು ನಿಜವಿದ್ದರೆ, ಅದು ನೂರಾರು ಉತ್ಕ್ರಾಂತಿವಾದಗಳಿಂದಲೂ ರವೆಯಷ್ಟಾದರೂ ಕೀಳ್ತರಗತಿಗಿಳಿಯಲಾರದೆಂಬುದು ಸ್ಪಷ್ಟವಿದೆ. ನಾವು ನಿರಪರಾಧಿಗಳೇ ಇದ್ದುದಾದರೆ ನ್ಯಾಯಾಧೀಶನ ನ್ಯಾಯನಿರ್ಣಯಕ್ಕೆ ಹೆದರುವ ಕಾರಣವಿಲ್ಲ.

ವಿಕಾಸವಾದ ಮತ್ತು ವೇದಾಂತಗಳ ಸಾಮ್ಯವೈಷಮ್ಯಗಳನ್ನು ಎರಡು ದೃಷ್ಟಿಗಳಿಂದ ವಿಚಾರಮಾಡಬಹುದು. ಅವು ಜ್ಞಾನಸಾಧನೆಗಾಗಿ ಅನುಸರಿಸುವ ರೀತಿ ಪದ್ಧತಿ, ಸಾಧನೆ ಮೊದಲಾದವು ಮೊದಲನೆಯ ದೃಷ್ಟಿಯು. ಅವುಗಳ ಸಾಧ್ಯ, ಧ್ಯೇಯ ಅಥವಾ ಸಿದ್ಧಾಂತಗಳು ಎರಡನೆಯದು. ಎಂದರೆ ಅವೆರಡರ ನಡುವಿನ ತಾರತಮ್ಯವು ಒಡೆದು ತೋರುವಂತಿದೆ.

ಇಂದ್ರಿಯಜನ್ಯ ಅನುಭವವೇ ವಿಕಾಸವಾದಿಗಳ ಅಭೇದ್ಯವಾದ ದುರ್ಗ ವೆಂಬುದನ್ನು ಎರಡನೆಯ ಪ್ರಕರಣದಲ್ಲಿ ತೋರಿಸಿಕೊಟ್ಟಿರುವೆವು. ಅದಕ್ಕೆ

ಭೌತಿಕಶಾಸ್ತ್ರಗಳ ಪ್ರಮಾಣಗಳು

ಅನುಮಾನ ಅಥವಾ ಊಹೆಯೆಂಬ ಸೈನ್ಯವೇ ಕಾವಲಾಗಿರುವುದೆಂದು ಹೇಳಬಹುದು. ಎಂದರೆ ಅವರು ಅನುಸರಿಸುವ ಮುಖ್ಯ ಪ್ರಮಾಣಗಳೆಂದರೆ ಇವೇ ಎರಡು. ಆದರೆ ನಿರಾಗ್ರಹವಾದ, ನಿಜವಾದ ಜ್ಞಾನಲಾಲಸೆಯು ಆ ಸಾಧಕನಲ್ಲಿರಬೇಕೆಂದು ವಿಕಾಸವಾದವು ಹೇಳುತ್ತದೆ. ಇಂತಹ ಸಾಮ್ಯಬುದ್ಧಿಯು ನಮ್ಮಲ್ಲಿರದಿದ್ದರೆ ನಮಗೆ ವಿಕಾಸವಾದದ ಅರ್ಥವೇ ಚೆನ್ನಾಗಿ ತಿಳಿಯುವುದಿಲ್ಲೆಂದು 'ಈಗಿನವರ ಖಂಡಿತವಾದ ಅಭಿಪ್ರಾಯವಿದೆ. ಮತ್ತು ಭೌತಿಕಶಾಸ್ತ್ರಗಳೂ ಈ ಮಾತನ್ನೇ ಪುಷ್ಟೀಕರಿಸುತ್ತವೆ. ಕಿಂಬಹುನಾ, ನಿಜವಾದ ಜ್ಞಾನಸಾಧನೆಗೆ ಇದರ ಹೊರತು ಅನ್ಯಗತಿಯೇ ಇಲ್ಲವೆಂದು ಸ್ಪಷ್ಟವಾಗಿ ಹೇಳಬಹುದು. ಯಾವ ದೇಶದಲ್ಲಿ ಯಾವ ಕಾಲಕ್ಕಾದರೂ ಇಂತಹ ನಿಜವಾದ ಜ್ಞಾನಲಾಲಸೆಯು ಜನರಲ್ಲುದಯಿಸಿದ ಹೊರತು ಆ ದೇಶವು ಜ್ಞಾನಮಂದಿರವಾಗಲಾರದೆಂಬುದನ್ನು ಇತಿಹಾಸಜ್ಞರಿಗೆ ಬೇರೆ ಹೇಳಬೇಕಾಗಿಲ್ಲ. ನಾಲ್ಕೈದು ನೂರು ವರುಷಗಳ ಹಿಂದೆ ಸುರುವಾದ ಪಾಶ್ಚಾತ್ಯಸುಧಾರಣೆಯ ಬೀಜವೆಂದರೆ, ಜೀರ್ಣವಾಗಿಹೋದ ಆದರೂ ಬಹು ಕಾಲದಿಂದ ನಡೆದುಬಂದ ಸಾಂಪ್ರದಾಯಗಳನ್ನೂ ವಿಚಾರಪದ್ಧತಿಗಳನ್ನೂ ಸಂಪೂರ್ಣವಾಗಿ ಬದಿಗಿರಿಸಿ, ಸ್ವತಂತ್ರವಿಚಾರದ ಜ್ಞಾನಮಾರ್ಗವನ್ನೇ ಅನುಸರಿಸಿದುದೆಂದು ಹೇಳಬಹುದು. ನಮ್ಮಲ್ಲಿ ಸದ್ಯಕ್ಕೆ ಗೋಚರವಾಗುತ್ತಿರುವ ಸ್ವತಂತ್ರವಿಚಾರದ ಜನರೂ ಇದೇ ಮಾರ್ಗವನ್ನು ಹಿಡಿದಿದ್ದಾರೆ. ಇರಲಿ, ಇದನ್ನೆಲ್ಲ ಮೇಲೆ ಹೇಳಿಯೇ ಇರುವೆವಾದುದರಿಂದ ಚರ್ವಿತಚರ್ವಣ ಮಾಡುವುದರಲ್ಲಿ ಅರ್ಥವಿಲ್ಲ.

ನಮ್ಮ ವೇದಾಂತದ ಕಡೆಗೆ ಹೊರಳಿದೆವೆಂದರೆ ಇದೇ ಮಾತು ದೃಷ್ಟಿಗೆ ಬೀಳ ದಿರಲಾರದು. ಪ್ರತ್ಯಕ್ಷ, ಅನುಮಾನ, ಮತ್ತು ಶಬ್ದಗಳೆಂಬ (ಕೆಲವರು ಇವಕ್ಕೆ ಇನ್ನೂ ಮೂರು ಪ್ರಮಾಣಗಳನ್ನು ಕೂಡಿಸುತ್ತಾರೆ.) ಮೂರು ಮುಖ್ಯವಾದ ಪ್ರಮಾಣಗಳನ್ನು ಅಂಗೀಕರಿಸಿರುವರೆಂದು ಹೇಳಬಹುದು. ಎಲ್ಲ ಜ್ಞಾನಕ್ಕೂ

ವೇದಾಂತದ ಪ್ರಮಾಣಗಳು

ಅನುಭವವೇ ಆದಿಜನನಿಯೆಂಬುವುದು ಸ್ವತಃಸಿದ್ಧವಾದ ಮಾತು. ಇನ್ನು ಈ ಅನುಭವವು ಪ್ರತ್ಯಕ್ಷಪ್ರಮಾಣದಿಂದ ಭಿನ್ನವಾಗಿರಲಾರದೆಂಬುವು ವಿಚಾರಾಂತ್ಯದಲ್ಲಿ ಕಂಡುಬರುವಂತಿದೆ. ಪ್ರತ್ಯಕ್ಷವೆಂದರೆ ಇದೇ ದೇಹದಲ್ಲಿ, ಇವೇ ಇಂದ್ರಿಯಗಳ ಸಹಾಯದಿಂದ ಆವುದೊಂದು ವಸ್ತುವಿನ ಜ್ಞಾನವನ್ನು ಪಡೆಯುವ ಸಾಧನವು. ಆದರೆ ಶಬ್ದ ಅಥವಾ ಆಪ್ತವಾಕ್ಯಪ್ರಮಾಣಕ್ಕೆ ನಮ್ಮ ವೇದಾಂತವು ಬಹಳೇ ಮಹತ್ತ್ವವನ್ನೀಯುವುದೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. **श्रद्धत्स्व सोम्य**—ಅಪ್ಪಾ, ವಿಶ್ವಾಸವನ್ನಿಡು ಎಂದು ವೇದದಲ್ಲಿ ಹೇಳಿದೆ. **अज्ञश्चाश्रद्धधानश्च संशयात्मा विनश्यति ॥** – ತಿಳಿಗೇಡಿಯೂ, ನಂಬುಗೆಯನ್ನಿಡದೆ ಸಂಶಯವೃತ್ತಿಯುವನಾಗಿರುವವನೂ, ನಾಶಹೊಂದುತ್ತಾನೆಂದು ಭಗವದ್ಗೀತೆಯಲ್ಲಿ ಹೇಳಿದೆ. ಋಷಿಗಳೆಂದರೆ 'ಮಂತ್ರದ್ರಷ್ಟಾರರೆಂದೂ, ದೇವರು ಅವರಿಗೆ ಪ್ರತ್ಯಕ್ಷವಾಗಿ ತೋರಿಸಿಕೊಟ್ಟ (Revealed) ಜ್ಞಾನವೇ ವೇದಾಂತವೆಂದೂ ನಾವು ನಂಬುತ್ತೇವೆ. ಆದರೆ ಇದರ ಸರಳವಾದ ಅರ್ಥವೇನೆಂದರೆ: ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡು ವೈರಾಗ್ಯವೃತ್ತಿಯಿಂದ ಅವುಗಳಿಗೆ ವಿಶಿಷ್ಟವಾದ ಶಿಕ್ಷಣವನ್ನು ಕೊಡುತ್ತ, ಧ್ಯಾನನಿರತರಾಗಿ, ಎಷ್ಟೋ ವರುಷಗಳ ಅಭ್ಯಾಸದಿಂದ ಕಂಡುಹಿಡಿದ ತತ್ತ್ವಗಳೇ ವೇದಾಂತರೂಪದಿಂದ ಜಗತ್ತಿನ ಹಿತಕ್ಕಾಗಿ ಪ್ರಕಟವಾಗಿರುತ್ತವೆಂದು ಹೇಳಬಹುದು. ಎಂದರೆ ನಿಜವಾದ ಜ್ಞಾನಸಾಧಕನ ಗುರುತುಗಳೆಲ್ಲ ಆ ಋಷಿಗಳಲ್ಲಿರದೆ ಇರಲಿಲ್ಲ. ನಿಃಸ್ಪೃಹರಾದುದರಿಂದ ಯಾರ ಹಂಗನ್ನೂ ಹಿಡಿಯದೆ ಅವರು ಸತ್ತತ್ತ್ವದ ಬೆನ್ನುಹತ್ತಿದರು; ಇಂದ್ರಿಯಗಳು ಸ್ವಾಧೀನವಿದ್ದುದರಿಂದ ಅವರ ಮನಸು ಅತ್ತಿತ್ತ ಹೊರಳಾಡದೆ ಜ್ಞಾನಸಾಧನೆಯು ಅವರಿಗೆ ಸುಲಭವಾಗಿಯೇ ಸಾಧಿಸುತ್ತಿತ್ತು. ಆ ಇಂದ್ರಿಯಗಳಿಗೆ ಕೆಲವೊಂದು ರೀತಿಯಿಂದ ಸಂಸ್ಕಾರವನ್ನು ಕೊಡುತ್ತಿದ್ದುದರಿಂದ ಅವು ಜ್ಞಾನಸಾಧನೆಯ ಕೆಲಸವನ್ನು ಬಲು ಚೆನ್ನಾಗಿ ಮಾಡುತ್ತಿದ್ದವು. ಎಷ್ಟೋ ವರುಷಗಳವರೆಗೆ ಅಭ್ಯಾಸಮಾಡುತ್ತಿದ್ದು

ದರಿಂದ ಅವರು ಕಂಡುಹಿಡಿದ ಶೋಧಗಳಲ್ಲಿ ತಪ್ಪಾಗುವ ಸಂಭವವಿರಲಿಲ್ಲ. ಧ್ಯಾನನಿರತರಾಗಿದ್ದುದರಿಂದ ಅವರ ದಿವ್ಯಚಕ್ಷುವು ಜಾಗೃತವಾಗಿ ಅದು ಬೇಕಾದಂತಹ ಗಹನತತ್ತ್ವಗಳನ್ನು ಸ್ವೀಕರಿಸಲಿಕ್ಕೆ ಸಿದ್ಧವಾಗಿತ್ತು. ಅವರ ಜ್ಞಾನಲಾಲಸೆಯನ್ನಂತೂ ಎಷ್ಟು ವರ್ಣಿಸಿದರೂ ಅಲ್ಪವೇ! **ज्ञानादेव तु कैवल्यं**–ಜ್ಞಾನದಿಂದಲೇ ಮೋಕ್ಷವು, **नान्यः पंथा विद्यतेऽयनाय**– ನಿಜವಾದ ಜ್ಞಾನದಹೊರತು ಸದ್ಗತಿಗೆ ಬೇರೆ ಮಾರ್ಗವೇ ಇಲ್ಲ- ಇವೇ ಮೊದಲಾದ ವಾಕ್ಯಗಳಿಂದ ಅವರು ಈ ಕೆಲಸಕ್ಕೆ ಎಷ್ಟು ಉತ್ತಮ ಅಧಿಕಾರಿಗಳಾಗಿರುತ್ತಿದ್ದರೆಂಬುದರ ಕಲ್ಪನೆಯಾಗುವಂತಿದೆ. ಇಷ್ಟೇ ಅಲ್ಲ; ಜಗತ್ತಿನ ಲಂಪಟವಿರುವವರೆಗೆ ಸ್ವಾರ್ಥವು ತಪ್ಪಲಾರದಾದುದರಿಂದ, ಸಂಸಾರಕ್ಕೆ ಶರಣುಹೊಡೆದೇ ಜ್ಞಾನಸಾಧನೆ ಮಾಡಬೇಕೆಂದು ಹಲವುಕಡೆಗೆ ಹೇಳಿದ್ದಾರೆ. ಈ ವಿಷಯವನ್ನು ಇನ್ನೂ ಹೆಚ್ಚಾಗಿ ಅಭ್ಯಾಸ ಮಾಡಬೇಕೆನ್ನುವವರು ವಿವೇಕ, ವೈರಾಗ್ಯ, ಮುಮುಕ್ಷುತಾ, ಮತ್ತು ಶಮದಮಾದಿ ಷಟ್‌ಸಂಪತ್ತಿಗಳಿಂದ ಯುಕ್ತನಾದವನೇ ವೇದಾಂತಕ್ಕೆ ಅಧಿಕಾರಿಯಾಗುವನೆಂಬುದರ ರಹಸ್ಯವನ್ನರಿತುಕೊಳ್ಳುವ ಪ್ರಯತ್ನಮಾಡಬೇಕು. ಎಂದರೆ ಈಗಿನ ಭೌತಿಕಶಾಸ್ತ್ರಜ್ಞರಕಿಂತಲೂ ನಮ್ಮ ಋಷಿಗಳು ಜ್ಞಾನಸಾಧನೆಯ ಕೆಲಸದಲ್ಲಿ ಎಷ್ಟು ಉತ್ತಮರೀತಿಯಿಂದ ಪ್ರವೇಶಮಾಡುತ್ತಿದ್ದರೆಂಬುದು ತಿಳಿಯುವಂತಿದೆ.

ವೇದಾಂತವೆಂದರೆ ಅನುಭವದ ಶಾಬ್ದಿಕ ವರ್ಣನೆಯು

ಅವರು ಈ ರೀತಿಯಿಂದ ಅಭ್ಯಾಸಮಾಡಿ ಕಂಡುಹಿಡಿದ ತತ್ತ್ವಗಳೇ ವೇದಾಂತವಾಗಿರುವುದರಿಂದ, ವೇದಾಂತವೂ ಕೂಡ ಋಷಿಗಳ ಅಭ್ಯಸ್ಥ ಅನುಭವದ ಶಾಬ್ದಿಕ ವರ್ಣನೆಯೆಂದೇ ಹೇಳಬಹುದು. ಉಪನಿಷದ್ವಾಕ್ಯಗಳನ್ನು ಓದುತ್ತಿರುವಾಗ ಅವು ಅನುಭವಪೂರ್ಣ ಮಾತುಗಳೆಂಬುದರ ನಿಶ್ಚಯವಾಗದಿರದು. ಆ ಋಷಿಗಳ ಹೃದಯದೊಳಗಿರುವ ಅನುಭವವು ಈ ಉಪನಿಷತ್ತುಗಳಲ್ಲಿ ಸಂಪೂರ್ಣವಾಗಿ ಇಳಿದು ಬಂದಿರಲಾರದೆಂಬುದು ನಿಜವಿದೆ. ಯಾರ ಹೃದಯಾನುಭವವು ಶಬ್ದಚಿತ್ರಗಳಲ್ಲಿ ಸಂಪೂರ್ಣವಾಗಿ, ಸರಿಯಾಗಿ ರೇಖಿಸಲ್ಪಡುವುದು ಶಕ್ಯವಿದೆ ? ಕವಿಗಾಗಲಿ, ಅನುಭವಿಗಾಗಲಿ, ಕಲಾಪಂಡಿತನಿಗಾಗಲಿ, ತನ್ನ ಅನುಭವವು ಪರಾಕಾಷ್ಠೆಯನ್ನು ಮೀರಿದಾಗ, ಆಗಿಂದಾಗಲೇ ಅದನ್ನು ವರ್ಣಿಸಬೇಕೆಂಬ ಕಲ್ಪನೆಯೂ ಕೂಡ ಬರಲಿಕ್ಕಿಲ್ಲ. ಕಿಂಬಹುನಾ ದ್ವೈತಭಾವವೇ ಅಲ್ಲಿರುವುದಿಲ್ಲೆಂದು ಹೇಳಬಹುದು. ನಾನು ಅನುಭವಿಸುವವನು, ಅನುಭವಿಸುವ

ವಸ್ತುವೊಂದು ಭಿನ್ನವಾಗಿರುವುದು, ಅದರ ವರ್ಣನೆಯನ್ನು ನಾನು ಮಾಡಬೇಕು ಎಂಬ ಕಲ್ಪನೆಯೇ ಆಗ ಅವನಿಗೆ ಬರಲಾರದು. ಆದರೆ ಆ ಅನುಭವದ ಉತ್ಕರ್ಷವು ಕಡಿಮೆಯಾಯಿತೆಂದರೆ ಕವಿಯು ಆ ಹಿಂದಿನ ಅನುಭವವನ್ನು ಸ್ಮರಿಸಿಕೊಂಡು, ಅದರ ವರ್ಣನೆಯನ್ನು ಮಾಡಿದ್ದೇ ಮುಂದೆ ಕಾವ್ಯವಾಗುವುದು. ಈ ಕೆಲಸವೂ ಕೂಡ ಶಬ್ದ ಚಿತ್ರಗಳಲ್ಲಿ ಸರಿಯಾಗಿ ಆಗಲಾರದೆಂಬುದನ್ನು ಟೆನಿಸನ್ನ ಕವಿಯು ಒಂದು ಕಾವ್ಯದಲ್ಲಿ ಕಾಣಬಹುದು. " ನನಗೆ ಎನಿಸಿದ್ದನ್ನೆಲ್ಲ ಶಬ್ದಗಳ ರೂಪದಿಂದ ಹೊರಗೆಹಾಕುವುದೆಂದರೆ ಮಹತ್ಪಾಪವೆಂದೇ ನಾನು ತಿಳಿಯುತ್ತೇನೆ"ಂದು ಆ ಕವಿವರ್ಯನು ಯಥಾರ್ಥವಾಗಿ ಹೇಳಿದ್ದಾನೆ. ಹೃದಯದ ಅನುಭವವು ಅದರ ಶಬ್ದ ಚಿತ್ರವನ್ನೆಲ್ಲ ವ್ಯಾಪಿಸಿ ಹತ್ತುಬೆರಳು ಹೆಚ್ಚಾಗಿ ನಿಲ್ಲುವದೆಂದೆನ್ನಬಹುದು. ಅದರ ಅನಂತವಾದ ಮಹಿಮೆಯನ್ನು ಕೆಲವು ಕಿರುಕುಳ ಶಬ್ದಗಳಲ್ಲಿ ಬಂಧಿಸಲು ಯತ್ನಿಸುವುದೆಂದರೆ ಹುಚ್ಚುತನವೇ ಸರಿ. ಎಂತೆಯೇ ಪಂಡಿತ ಶ್ರೇಷ್ಠನಾದ ಪ್ಲೇಟೋನ ತತ್ತ್ವಜ್ಞಾನವು ಕೇವಲ ವೈಯ್ಯಕ್ತಿಕ ವಿಷಯವು,(Philosophy is an intensely personal thing) ಅದನ್ನು ಶಬ್ದಗಳಲ್ಲಿ ವರ್ಣಿಸಿ ಪುಸ್ತಕರೂಪದಿಂದ ಬೇರೆಯವರಿಗೆ ಕೊಡಲಿಕ್ಕೆ ಬರಲಾರದು; ಎಷ್ಟೋ ದಿವಸಗಳವರೆಗೆ ತಮ್ಮ ಹತ್ತರ ಇದ್ದುಕೊಂಡರೆ ಮಾತ್ರ ಅದರ ಅಲ್ಪಾಂಶವನ್ನು ಪರರಿಗೆ ಕೊಡಬಹುದು; ಹಾಗಾದರೆ ಮಾತ್ರ ಪರರ ಹೃದಯಜ್ಯೋತಿಯನ್ನು ಪ್ರಜ್ವಲಿಸುವುದು ಶಕ್ಯವಿದೆ; ಎಂದು ಮೊದಲಾಗಿ ಅಭಿಪ್ರಾಯ ಬಡುತ್ತಾನೆ. ಎಂತೆಯೇ ನಮ್ಮ ವೇದಾಂತದಲ್ಲಿ ಗುರುವಿಗೆ ಇಷ್ಟು ಮಹತ್ತ್ವಬಂದಿದೆಯೆಂದು ಹೇಳಬಹುದು. ಆದುದರಿಂದಲೇ ಆತ್ಮಸಾಕ್ಷಾತ್ಕಾರಕ್ಕೆ ಗುರುವಿನ ಅನುಗ್ರಹವು ಅವಶ್ಯವಾಗಿ ಬೇಕೆಂದು ಶ್ರೀಶಂಕರಾಚಾರ್ಯರು ಹೇಳಿದ್ದಾರೆ. (**तथापि शक्यते नैव श्रीगुरोः करुणां विना । अपरोक्षयितुं लोके मूढैः पंडितमानिभिः ॥**) ಇರಲಿ. ವೇದಾಂತವನ್ನೋದುವಾಗ ನಮ್ಮ ಋಷಿಗಳ ಅನುಭವವು ಎಂತಹದಾಗಿರಬೇಕೆಂಬುದರ ಅಲ್ಪಪರಿಚಯವಾದರೂ ವಾಚಕರ ಮನದಲ್ಲಿ ಬಿಂಬಿಸದಿರದು. ಸಚ್ಚಿದಾನಂದ ವಸ್ತುವಿನ ಅನುಭವವು ಬಂದಿತ್ತೆಂತಲೇ ಅವರ ಬಾಯಿಂದ ಅಂತಹ ದಿವ್ಯ ವಾಣಿಗಳು ಹೊರಟರಲಿಕ್ಕೆಬೇಕು: **भिद्यते हृदयग्रंथिश्छिद्यंते सर्वसंशयाः ।**— ಸದ್ವಸ್ತುವಿನ ಜ್ಞಾನವಾದೊಡನೆ ಹೃದಯದೊಳಗಿನ ತೊಡಕುಗಳೆಲ್ಲ ಬಿಚ್ಚಿ ಹೋಗುತ್ತವೆ; ಸಂಶಯಗಳು ಛಿನ್ನವಾಗಿ ಹೋಗುತ್ತವೆ. **तत्र कः शोकः को**

**मोह एकत्वमनुपश्यतः** – ಏಕತ್ವದ ಅನುಭವವನ್ನು ಪಡೆದವನಿಗೆ ಶೋಕವೆಲ್ಲಿಯದು, ಮೋಹವೆಲ್ಲಿಯದು ? (ಇಲ್ಲವೆಂದರ್ಥ); **ब्रह्मविद्ब्रह्मैव भवति**– ಬ್ರಹ್ಮಜ್ಞಾನಿಯು ಬ್ರಹ್ಮರೂಪನಾಗುತ್ತಾನೆ, ಮೊದಲಾದ ವಾಕ್ಯಗಳು ಈ ಮಾತಿಗೆ ಸಾಕ್ಷಿಯಾಗಿವೆ. ಇಂತಹ ಅನುಭವವು ಪ್ರತ್ಯಕ್ಷವಾಗುದೇ ಎಂದು ಬೇರೆ ಹೇಳಬೇಕೆ ? ಇಲ್ಲಿ, ಇದೇ ಲೋಕದಲ್ಲಿ, ಇದೇ ದೇಹದಲ್ಲಿ ಈ ಏಕತ್ವದ ಅನುಭವ ಪಡೆದು ಅಮೃತರಾಗಬಹುದೆಂದು ಆ ಋಷಿವರ್ಯರು ಸಾರಿಸಾರಿ ಹೇಳಿದ್ದಾರೆ. ನಾವು ವಿವರಿಸಿದ ಪದ್ಧತಿಗಳನ್ನನುಸರಿಸಿ ನಡೆದರೆ ನೀವೂ ಈ ಸಚ್ಚಿದಾನಂದ ವಸ್ತುವಿನ ಅನುಭವವನ್ನು ಸಾಕ್ಷಾತ್ತಾಗಿ ಪಡೆಯಬಹುದೆಂದು ಅವರ ದೀರ್ಘವಾದ ಆಶ್ವಾಸನವಿದೆ. ಎಂದರೆ ಅವರು ಪ್ರತ್ಯಕ್ಷವಾದ, ದೀರ್ಘವಾದ, ಅವಿಶ್ರಾಂತವಾದ ಪ್ರಯೋಗಗಳನ್ನು ಮಾಡಿ ಈ ತತ್ತ್ವಗಳನ್ನು ಅನುಭವಿಸಿದ್ದಾರೆ. ನಾವಾದರೂ ಅಂತಹ ಪ್ರಯೋಗಗಳನ್ನು ಮಾಡಿದರೆ ನಮಗಾದರೂ ಆ ಸತ್ತತ್ತ್ವದ ಅನುಭವವು ಬರದಿರಲಾರದೆಂಬುದೇ ಎಲ್ಲ ವೇದಾಂತದ ಸಾರಾಂಶವು. ಜ್ಞಾನಯೋಗ, ಕರ್ಮಯೋಗ, ಪಾತಂಜಲಯೋಗಗಳೆಲ್ಲ ಈ ತತ್ತ್ವಾನುಭವವೆಂಬ ರೂಪದಿಂದ ಸತ್ಯವಸ್ತುವಿನ ಪ್ರತ್ಯಕ್ಷದರ್ಶನವನ್ನು ಮಾಡಿಸುವ ಬೇರೆಬೇರೆ ಪ್ರಯೋಗರೂಪಗಳಾದ ಸಾಧನಗಳು. ಈ ಮಾತನ್ನು ಲಕ್ಷದಲ್ಲಿಟ್ಟರೆ ಇದು ಈಗಿನ ಶಾಸ್ತ್ರೀಯ ಪದ್ಧತಿಯನ್ನು ಎಷ್ಟೋ ಹಿಂದಕ್ಕೆ ಒಗೆಯುತ್ತದೆಂಬುದು ಸಿದ್ಧವಾಗದಿರದು. ನೀರೆಂದರೆ ಹೈಡ್ರೋಜನ್, ಮತ್ತು ಆಕ್ಸಿಜನ್‌ವಾಯುಗಳ ಮಿಶ್ರಣವೆಂದು ಹೇಳುವರಷ್ಟೇ? ಅದಕ್ಕೆ ಆಧಾರವೇನೆಂದು ನಾವು ಯಾವನಾದರೊಬ್ಬ ಶಾಸ್ತ್ರಜ್ಞನನ್ನು ಕೇಳಿದರೆ ಅದಕ್ಕೆ ಅವನು ಏನೆಂದು ಉತ್ತರಕೊಡಬಹುದು ? ಇವೆರೆಡು ವಾಯುಗಳನ್ನು ಕೆಲವೊಂದು ಪ್ರಮಾಣದಿಂದ ಕೂಡಿಸಿ ಅದರಲ್ಲಿ ವಿದ್ಯುಚ್ಛಕ್ತಿನದೊಂದು ಕಿಡಿಯನ್ನು ಹಾಯಿಸಿದೆವೆಂದರೆ ಅದು ನೀರಾಗುತ್ತದೆ; ಬೇಕಾದರೆ ಪ್ರಯೋಗಮಾಡಿ ನೋಡಿರಿ; ನಾವಂತೂ ಹಾಗೆ ಪ್ರಯೋಗಗಳನ್ನು ಮಾಡಿ ಮನಗಂಡಿದ್ದೇವೆ. ಇಷ್ಟೇ ಉತ್ತರವನ್ನು ಅವನು ಕೊಡಬಹುದಲ್ಲದೆ ಬೇರೆ ಯಾವ ಉತ್ತರವೂ ಅವನಿಗೆ ತೋಚಲಾರದು. ಎಂದಮೇಲೆ ನಮ್ಮ ಋಷಿಗಳ ವೇದಾಂತವಾದರೂ ಇದರಿಂದ ಹೇಗೆ ಭಿನ್ನವಾಗಿರುವುದೆಂದು ಹೇಳಬೇಕು ? ಇನ್ನು ಪ್ರತಿಯೊಂದು ಮಾತನ್ನು ಪ್ರತಿಯೊಬ್ಬನು ಪ್ರತ್ಯಕ್ಷಪ್ರಯೋಗಗಳಿಂದ ಸಿದ್ಧಮಾಡಿ ಮನಗಾಣುತ್ತ ಕೂಡ್ರುವುದಿಲ್ಲ. ಎರಡನೆಯವರು ಅನೇ

ತರದಿಂದ ಪ್ರಯತ್ನಮಾಡಿ ಕೆಲವು ನಿರ್ಣಯಗಳನ್ನು ತೆಗೆದಿದ್ದರೆ ನಾವೂ ಅವನ್ನು ಸುಮ್ಮನೇ ಸ್ವೀಕರಿಸಿ ಬಿಡುತ್ತೇವೆ. ಇದೇ ಆಪ್ತವಾಕ್ಯಪ್ರಮಾಣವೆನಿಸುವುದು. ಎಂದರೆ ನಮ್ಮನ್ನು ವಂಚಿಸಬೇಕೆಂಬ ಇಚ್ಛೆಯಿಲ್ಲದೆ ನಮ್ಮ ನಿಜವಾದ ಹಿತವನ್ನು ಸಾಧಿಸಬೇಕೆನ್ನುವವರೇ ನಮಗೆ ತಮ್ಮ ಅನುಭವದಿಂದ ಕಂಡುಬಂದ ಸಂಗತಿಗಳನ್ನು ತಿಳಿಸಿಹೇಳಿ, ನೀವು ಈ ರೀತಿಯಿಂದ ನಡೆಯುವುದು ವಿಹಿತವಾಗುವುದು ಎಂದು ಉಪದೇಶಮಾಡಿದರೆ ಅದನ್ನು ಶಬ್ದಪ್ರಮಾಣವೆಂದು ಕರೆಯಬಹುದು. ಅವನ್ನು ಪ್ರತ್ಯಕ್ಷವಾಗಿ ನೋಡುತ್ತ ಕೂಡ್ರದೇ ಅವರು ಹೇಳುವರೆಂಬ ಕಾರಣದಿಂದಲೇ ನಾವು ಆ ಸಿದ್ಧಾಂತಗಳನ್ನು ಸ್ವೀಕರಿಸುವೆವೆಂಬ ಕಾರಣದಿಂದ ಅದು ಶಬ್ದಪ್ರಮಾಣವೆನಿಸುವುದು. ಈ ದೃಷ್ಟಿಯಿಂದ ನೋಡಿದರೆ ಶಬ್ದಪ್ರಮಾಣವು ಪ್ರತ್ಯಕ್ಷ ಅಥವಾ ಅನುಭವದಿಂದ ಭಿನ್ನವಾಗಿಲ್ಲೆಂಬುದು ಸ್ಪಷ್ಟವಾಗುವಂತಿದೆ.

ಅದ್ವೈತದಲ್ಲಿ ಅನುಭವದ ಸ್ಥಾನವು

ಎಂತೆಯೇ ಅದ್ವೈತಶಾಸ್ತ್ರದಲ್ಲಿ ಅನುಭವಕ್ಕೆ ಇಷ್ಟು ಪ್ರಾಶಸ್ತ್ಯವು ಬಂದಿರುವುದು. ಶಂಕರಾಚಾರ್ಯರು ಅಪರೋಕ್ಷಾನುಭೂತಿ, ಪ್ರೌಢಾನುಭೂತಿ ಎಂಬ ಗ್ರಂಥಗಳನ್ನೂ, ಜ್ಞಾನೇಶ್ವರರು ಅಮೃತಾನುಭವವೆಂಬ ಪುಸ್ತಕವನ್ನೂ ಬರೆದಿರುವರು. ಕನ್ನಡದಲ್ಲಿ ಮಹಲಿಂಗ ರಂಗನು ರಚಿಸಿದ ಅಮೃತಾನುಭವವೆಂಬ ಷಟ್ಪದೀ ಕಾವ್ಯವಂತೂ ಕನ್ನಡ ವೇದಾಂತ ಗ್ರಂಥಗಳಿಗೆ ಅಲಂಕಾರಪ್ರಾಯವಾಗಿದೆ. ಕರ್ನಾಟಕ ಭೂಷಣರಾದ ನಿಜಗುಣ ಶಿವಯೋಗಿಗಳು ಅನುಭವವೆಂಬ ಶಬ್ದವನ್ನೊಳಗೊಂಡ ಹೆಸರುಗಳುಳ್ಳ ಎಷ್ಟೋ ವೇದಾಂತ ಗ್ರಂಥಗಳನ್ನೂ ರಚಿಸಿರುವರು. ಹೆಚ್ಚೇನು ? ಅದ್ವೈತ ಶಾಸ್ತ್ರವೆಂದರೆ ಅನುಭವಶಾಸ್ತ್ರವೆಂದು ಹೇಳಿದರೆ ತಪ್ಪಾಗದು. ಶ್ರೀಶಂಕರಾಚಾರ್ಯರಂತೂ ಈ ಮಾತನ್ನು ಒತ್ತಿ ಒತ್ತಿ ಹೇಳಿರುವರು. ಬ್ರಹ್ಮಸೂತ್ರ ಭಾಷ್ಯದ ಅವತರಣಿಕೆಯಲ್ಲಿಯೇ ಅವರು ಈ ಬಹ್ಮಶಾಸ್ತ್ರದಲ್ಲಿ ಅನುಭವವಾದರೂ ಸಮಯೋಚಿತವಾಗಿ ಪ್ರಮಾಣವಾಗುವುದೆಂದು ಹೇಳಿರುವರು. " ಧರ್ಮಜಿಜ್ಞಾಸೆಯೊಳಗೆ ಶ್ರುತ್ಯಾದಿಗಳೇ ಮಾತ್ರ ಪ್ರಮಾಣವಾಗಿರುವವು. ಆದರೆ ಬ್ರಹ್ಮಜಿಜ್ಞಾಸೆಯೊಳಗೆ ಶ್ರುತ್ಯಾದಿ ಪ್ರಮಾಣಗಳೊಡನೆ ಅನುಭವವೂ ಕಾಲೋಚಿತವಾಗಿ ಪ್ರಮಾಣವಾಗುತ್ತದೆ. ಯಾಕೆಂದರೆ ಬ್ರಹ್ಮಜ್ಞಾನವು ಅನುಭವದೊಳಗೇ ಕೊನೆಯಾಗುತ್ತದೆ. ಮತ್ತು ಬ್ರಹ್ಮಜ್ಞಾನವು ಸಿದ್ಧವಸ್ತುವಿಗೆ ಸಂಬಂಧಿಸಿರುತ್ತದೆ. " ( न धर्मजिज्ञासायामिव श्रुत्यादय

**एव प्रमाणं ब्रह्मजिज्ञासायाम् । किं तु श्रुत्यादयोऽनुभवादयश्च यथासंभवमिह प्रमाणं, अनुभवावसानत्वात् भूतवस्तुविषयत्वाच्च ब्रह्मज्ञानस्य । ब्र. सू.** ೧. ೧. ೨.) ಅದರಂತೆಯೇ ಗೀತಾಭಾಷ್ಯ ೧೫. ೬೬ರಲ್ಲಿಯೂ ಅನುಭವದ ಮಹತಿಯನ್ನು ಅವರೇ ಪಾಡಿದ್ದಾರೆ. "ಅಗ್ನಿಯು ಶೀತವೆಂದಾಗಲಿ, ಪ್ರಕಾಶರಹಿತವಾದುದೆಂದಾಗಲಿ ನೂರಾರು ಶ್ರುತಿಗಳು ಹೇಳಿದರೂ ಅವು ಪ್ರಮಾಣವಾಗಲಾರವು." **न हि श्रुतिशतमपि शीतोऽग्निरप्रकाशो वेति ब्रुवत्प्रामाण्यमुपैति । गी. भा.** ೧೮. ೬೬ ) ಜೀಮೂತವಾಹನನೆಂಬ ಧರ್ಮಗ್ರಂಥಕಾರನಾದರೂ ನೂರಾರು ಶ್ರುತಿಗಳೂ ಕೂಡ ಸತ್ಯಭೂತವಸ್ತುವನ್ನು ಅಲ್ಲಗಳೆದರೆ, ಆ ವಸ್ತುವು ಅನ್ಯಥಾ ಆಗಲಾರದೆಂದು ಹೇಳಿದ್ದಾನೆ. ಶ್ರುತಿಗಳಾದರೇನು ? ಯಾರಾದರೇನು ? ಅನುಭವಕ್ಕೆ ಒಪ್ಪುವಂತಹ ಮಾತನ್ನೇ ಹೇಳಬೇಕು. ಒಂದು ವೇಳೆ ಶ್ರುತಿಯು ಅಗ್ನಿಯು ಶೀತವೆಂದಾಗಲಿ, ಪ್ರಕಾಶರಹಿತವಾದುದೆಂದಾಗಲಿ ಹೇಳಿದರೆ, ಶಕ್ಯವಿದ್ದರೆ ಅದಕ್ಕೆ ಬೇರೆ ಅರ್ಥವನ್ನು ಕಲ್ಪಿಸಿ ಶ್ರುತಿವಿರೋಧವನ್ನು ಪರಿಹಾರ ಮಾಡಬೇಕೆಂದು ಆಚಾರ್ಯವರ್ಯರು ಅಲ್ಲಿಯೇ ಮುಂದೆ ಹೇಳಿರುವರು. ಬ್ರಹ್ಮಾವಗತಿಯೆಂದರೆ ಬ್ರಹ್ಮಾನುಭವವೇ ನಿಜವಾದ ಸಾಧ್ಯವೆನ್ನುವುದನ್ನು ಆಚಾರ್ಯರು ಮೇಲಿಂದ ಮೇಲೆ ಸ್ಪಷ್ಟಪಡಿಸಿದ್ದಾರೆ. ಸಚ್ಚಿದಾನಂದ ವಸ್ತುವಿನ ಅನುಭವವು ಆಗದೇ ಹೋದರೆ ನಮ್ಮ ಜನ್ಮವು ವ್ಯರ್ಥವಾಯಿತೆಂದು ತಿಳಿಯಬೇಕು. ಈ ಅನುಭವವು ಮಾನವದೇಹದಲ್ಲಿಯೇ ಬರುವುದು ಶಕ್ಯವಿರುವುದರಿಂದ, ಎಷ್ಟೋ ಕೋಟಿ ಜನ್ಮಗಳ ಪುಣ್ಯದಿಂದ ಅಕಸ್ಮಾತ್ತಾಗಿ ಲಭಿಸಿದ ಈ ಮಾನವದೇಹದಲ್ಲಿಯೇ ನಾವು ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಂಡು ಧನ್ಯರಾಗಬೇಕು. ನೀಚಯೋನಿಗಳಲ್ಲಿ ಸಾರಾಸಾರ ವಿವೇಕಶಕ್ತಿಯು ಇಲ್ಲದ್ದರಿಂದ ಅವು ಇಂತಹ ಅನುಭವವನ್ನು ತಂದುಕೊಡಲಿಕ್ಕೆ ಅಸಮರ್ಥವೆಂಬುದು ಸ್ಪಷ್ಟವಿದೆ. ಈ ಅನುಭವವು ತನಗಾಯಿತೋ ಇಲ್ಲವೋ ಎಂಬುದು ತನಗೇ ಗೊತ್ತಾಗಬಹುದಲ್ಲದೆ, ಅದು ಅನ್ಯರಿಗೆ ಹೇಗೆ ಗೊತ್ತಾಗಬೇಕೆಂದು ಆಚಾರ್ಯರು ಗೀತಾಭಾಷ್ಯದಲ್ಲಿ ಕೇಳಿರುವರು. ಯಾಕೆಂದರೆ ನನಗೆ ಬಂದ ಅನುಭವವು ಪರರಿಗೆ ಗೊತ್ತಾಗುವುದು ಶಕ್ಯವಿಲ್ಲ. ನಾವೇ ನಮ್ಮ ನಿಜವಾದ ಹಿತಚಿಂತಕರಾದರೆ ಈ ಅನುಭವವನ್ನು ನಮ್ಮೊಳಗೇ ನಾವು ಪಡೆಯಬೇಕು. " ತನ್ನ ತಾನರಿತೊಡೆ, ತನ್ನರಿವೇ ಗುರು " ಎಂಬುದರ ನಿಜವಾದ ಅರ್ಥವೂ ಇದೇ.

ಇದರ ವಿಷಯಕ್ಕೆ ಆಚಾರ್ಯರು ಸಮರ್ಪಕವಾದುದೊಂದು ದೃಷ್ಟಾಂತವನ್ನು ಕೊಟ್ಟಿದ್ದಾರೆ. ಕತ್ತಲೆಯಲ್ಲಿ ಕುಳಿತವರು ದೀಪದ ಮಾತುಗಳನ್ನಾಡುವುದರಿಂದ, ದೀಪಾನುಭವವು ಅವರಿಗಾಗುವುದು ಹೇಗೆ ಶಕ್ಯವಿಲ್ಲವೋ, ಹಾಗೆಯೇ ಬ್ರಹ್ಮನ ಬಗ್ಗೆ ಮಾತುಗಳನ್ನಾಡಿದರೆ ಮಾತ್ರ ಬ್ರಹ್ಮಾನುಭವವು ಬರಲಾರದು. ( **नानुध्यायेद्बहूञ्शब्दान् वाचो विग्लापनं हि तत् ॥** ) ಒಣ ಶಬ್ದಾಡಂಬರದಿಂದ ಪ್ರಯೋಜನವೇನು ? ಶಬ್ದಜಾಲವೆಂಬುದು ಮಹಾರಣ್ಯದಂತಿದ್ದು ತಲೆಯನ್ನು ಕೆಡಿಸುತ್ತದೆಂದು ಆಚಾರ್ಯರು ಈ ಮಾತನ್ನೇ ಹೇಳಿರುವರು. ಆದುದರಿಂದ ಇಲ್ಲದ ಶಬ್ದಜ್ಞಾನದ ಭ್ರಮೆಗೆ ಬೀಳದೆ ಸಚ್ಚಿದಾನಂದವಸ್ತುವಿನ ಅನುಭವ ಬರಬೇಕೆಂದು ನಾವೆಲ್ಲರೂ ಪ್ರಯತ್ನಮಾಡತಕ್ಕದ್ದು. ಒಟ್ಟಿನ ಮೇಲೆ ಅನುಭವವೇ ಮುಖ್ಯವಾಗಿರುವುದರಿಂದ ನಮ್ಮ ಅನುಭವವನ್ನು ನಾವು ಪುನಃ ಪುನಃ ಪರೀಕ್ಷಿಸುತ್ತಿರಬೇಕು. ಎಂದರೆ ಮಾತ್ರ ನಮ್ಮ ಉದ್ಧಾರವಾಗಬಹುದು.

"ನಮ್ಮ ಅನುಭವಕ್ಕನುಸರಿಸಿ ತರ್ಕಿಸಬೇಕು; ಇಲ್ಲದ ಕುತರ್ಕಗಳನ್ನು ಮಾತ್ರ ಮಾಡಬಾರದು." ( **स्वानुभूत्यनुसारेण तर्क्यतां मा कुतर्क्यताम् ।** )

ಅನುಭವಯುತವಾದ ತರ್ಕವು.

ಎಂಬ ಪಂಚದಶಿ ವಾಕ್ಯದಲ್ಲಿ ಶ್ರೀವಿದ್ಯಾರಣ್ಯರು ಇದೆಲ್ಲದರ ಸಾರಾಂಶವನ್ನೇ ಕೊಟ್ಟಿದ್ದಾರೆಂದು ಹೇಳಬಹುದು. ಎಂದರೆ ಅನುಭವವೇ ಮುಖ್ಯ; ಆ ಅನುಭವಕ್ಕನುಸರಿಸಿಯೇ ನಾವು ತರ್ಕದ ಉಪಯೋಗವನ್ನು ಮಾಡಿಕೊಳ್ಳುತ್ತ ಹೋಗಬೇಕು. ಅನುಮಾನವು ಪ್ರಮಾಣವಾಗಬಲ್ಲುದಾದರೂ, ಅನುಭವವಿಲ್ಲದ ತರ್ಕವು ದಾರವಿಲ್ಲದ ಹೊಲಿಗೆಯಂತೆಯೇ ಸರಿ. ಮಾನವಜೀವನಕ್ಕೆ ಅನುಮಾನದ ಅವಶ್ಯಕತೆಯಿದ್ದರೂ, ನಾವು ಸಿಕ್ಕ ಸಿಕ್ಕಂತೆ ತರ್ಕ ಮಾಡುತ್ತ ಹೋಗಬಾರದು. ಹೀಗೆ ಇದೊಂದು ವಾಕ್ಯದಲ್ಲಿ ವಿದ್ಯಾರಣ್ಯರು ಭೌತಿಕ ಶಾಸ್ತ್ರಗಳ ಪ್ರಮಾಣಸಾಧನಗಳನ್ನೆಲ್ಲ; ಹೇಳಿಬಿಟ್ಟಿದ್ದಾರೆಂದರೆ ವಿಶೇಷ ತಪ್ಪಾಗಲಿಕ್ಕಿಲ್ಲ. ಹಾಗೂ ಇಂತಹ ಅನುಭವವಾದರೂ ಸಂಸ್ಕೃತವಾದ ಇಂದ್ರಿಯಗಳಿಂದಲೇ ಸಿಗುವುದಲ್ಲದೆ, ಅದಕ್ಕೆ ಬೇರೊಂದು ಸಾಧನವಿಲ್ಲೆಂಬುದನ್ನಾದರೂ ಲಕ್ಷ್ಯದಲ್ಲಿಡಬೇಕು. ತತ್ತ್ವಜ್ಞಾನವನ್ನು ತಿಳಿದುಕೊಳ್ಳುವ ಶಕ್ತಿಯೊಂದು ಮನುಷ್ಯರಲ್ಲಿ ಪ್ರತ್ಯೇಕವಾಗಿಯೇ ಇರುವುದೆಂದು ಹಲವರು ತಿಳಿಯುತ್ತಾರೆ. ಅದಕ್ಕೆ ಇಂಗ್ಲಿಷದಲ್ಲಿ "ಇಂಟೂಶನ್" (Intuition–ಅಂತಸ್ಫೂರ್ತಿ) ಎಂದು ಕರೆಯುವುದುಂಟು.

ಎಂದರೆ ಧಾರ್ಮಿಕವಿಷಯಗಳನ್ನರಿತುಕೊಳ್ಳುವುದೊಂದು ವಿಶಿಷ್ಟವಾದ ಶಕ್ತಿಯಿರುವುದೆಂದೂ, ಅದು ಇದ್ದವರಿಗೆ ಮಾತ್ರ ದೇವರ ಜ್ಞಾನವಾಗುವುದು ಶಕ್ಯವಿದೆಯೆಂದೂ ಅವರ ಭಾವನೆ. ನಮ್ಮ ಪಾಪಸಂಸ್ಕಾರಗಳಿಂದ ಅದು ಮಲಿನವಾಗಿ ಹೋಗಿರುತ್ತದೆ. ಗುರುಶುಶ್ರೂಷಾದಿಗಳಿಂದಲೂ, ಪರೋಪಕಾರಾದಿ ಪುಣ್ಯಸಂಚಯದಿಂದಲೂ ಅದು ನಿರ್ಮಲವಾಗಿ ಜಾಗೃತವಾಯಿತೆಂದರೆ ತತ್ತ್ವಜ್ಞಾನವಾಗಿ ಮೋಕ್ಷ ಸಿಗುವುದೆಂದು ಈ ಜನರು ಭಾವಿಸುವಂತೆ ತೋರುತ್ತದೆ. ಆದರೆ ಇಂತಹ ಅಜ್ಞೇಯವಾದ, ಅಪರಿಚಿತವಾದ, ವಿಶಿಷ್ಟವಾದ, ಭಿನ್ನಶಕ್ತಿಯೊಂದು ಮಾನವದೇಹದಲ್ಲಿರುವುದಿಲ್ಲೆಂದು ಶಂಕರಾಚಾರ್ಯರು ಸ್ಪಷ್ಟವಾಗಿ ಹೇಳಿದ್ದಾರೆ. ಮೋಕ್ಷದಾಯಕವಾದ ಸಮ್ಯಕ್‌ಜ್ಞಾನವು ಏತರಿಂದಾಗುವುದು ? ಎಂಬ ಶಂಕೆಯನ್ನು ತೆಗೆದು ಆಚಾರ್ಯರು ಅದಕ್ಕೆ ಸಂಸ್ಕೃತವಾದ ಮನಸ್ಸೇ ಸಾಧನವೆಂದು ಹೇಳಿದ್ದಾರೆ. ( **करणागोचरत्वादिति चेन्न मनसैवानुद्रष्टव्यं बृ. ४-४-१९ इति श्रुतेः । शास्त्राचार्योपदेशशमदमादिसंस्कृतं मन आत्मदर्शने करणम् । गी. भा.** ). ನಮ್ಮೆಲ್ಲರ ಮನಸು ಮಲಿನವಾಗಿರುವುದರಿಂದ ಅದು ಇದ್ದಕ್ಕಿದ್ದಂತೆ ತತ್ತ್ವಾನುಭವವನ್ನು ಹೊಂದಲಿಕ್ಕೆ ಅಸಮರ್ಥವಾಗಿರುವುದು. ಆದುದರಿಂದ ಅದಕ್ಕೆ ಕೆಲವೊಂದು ಸಂಸ್ಕಾರವನ್ನು ಕೊಡುವುದು ಅವಶ್ಯವು. ಹಿಂದಕ್ಕೆ ಋಷಿಗಳೂ, ಗುರುಗಳೂ ಆಚರಿಸಿ ಹೇಳಿದ ಮಾರ್ಗದಿಂದಲೇ ಆಗಬೇಕು; ಇಲ್ಲವಾದರೆ ನಮಗೆ ಬೇಕಾದ ಫಲವು ಸಿಕ್ಕಲಾರದು. ಬ್ರಹ್ಮಾನುಭವವು ಬರಬೇಕಾದರೆ ಈ ಮನಃಸಂಸ್ಕಾರವೆಂಬ ಪ್ರಯೋಗವನ್ನು ನಾವು ಅವಶ್ಯವಾಗಿ ಮಾಡಬೇಕು. ಎಂದರೆ ಆ ಸತ್ತತ್ತ್ವವು ನಮ್ಮ ಮನದಲ್ಲಿ ನೆಡುವುದು; ಇಲ್ಲವಾದರೆ ಇಲ್ಲ. ಮತ್ತಮೊದಲು ಅವರು ಹೇಳಿದ ಮಾತುಗಳಮೇಲೆ ವಿಶ್ವಾಸವಿಟ್ಟು—ನಾವು ಈ ತರದ ವಿಶ್ವಾಸವನ್ನೂ ಭೌತಿಕಶಾಸ್ತ್ರಜ್ಞರಮೇಲೂ ಇಡಬೇಕಾಗುವುದೆಂಬುವನ್ನು ಲಕ್ಷದಲ್ಲಿಡಬೇಕು. —ಅವರು ತೋರಿಸಿಕೊಟ್ಟ ಮಾರ್ಗಗಳಿಂದ ಪ್ರವಾಸಮಾಡಹತ್ತಿದರೆ, ಅವರು ವರ್ಣಿಸುವ ಸತ್ಯದೇವಿಯ ದರ್ಶನವಾಗದಿರದು. ನಮ್ಮ ಪ್ರಾಚೀನ ಋಷಿಗಳು ಹೇಳಿರುವರೆಂಬಿಷ್ಟೇ ಕಾರಣದಿಂದ ಇದನ್ನು ಒಪ್ಪಬೇಕೆಂದು ನಾವೆಂದೂ ಹೇಳಲಾರೆವು. ಆದರೆ ಅವರು ಹೇಳುವ ಸಿದ್ಧಾಂತಗಳ ಸತ್ಯಾಸತ್ಯತೆಯನ್ನು ನಿರ್ಣಯಿಸಬೇಕಾದರೆ, ಅವರು ವರ್ಣಿಸಿರುವ ಪ್ರಯೋಗಗಳನ್ನು ಮಾಡಿನೋಡಿ, ಅವುಗಳಿಂದ ನಿರ್ದಿಷ್ಟಫಲಗಳು ಸಿಗದಿದ್ದರೆ, ಆಮೇಲೆ

ಬೇಕಾದರೆ ಅವನ್ನು ನಾವು ತ್ಯಜಿಸಬಹುದು. ಆದರೆ ಹಾಗೆ ನಿರ್ಣಯ ಮಾಡುವ ಮೊದಲೇ ಭೌತಿಕಶಾಸ್ತ್ರಗಳ ಸೆಳವಿಗೆ ಸಿಕ್ಕು ವೇದಾಂತವೆಲ್ಲ ಹುರುಳಿಲ್ಲದ ಮಾತೆಂದು ಹೇಳುವುದೆಂದರೆ ಗಂಡಸುತನವಿಲ್ಲದ ಮನುಷ್ಯನು ಪೌರುಷವುಳ್ಳ ಪುರುಷನ ಸ್ತ್ರೀಸಂಭೋಗದಸುಖದ ವರ್ಣನೆಗೆ ಸುಳ್ಳೆಂದು ಹೆಸರಿಟ್ಟಂತೆಯೇ ಸರಿ. ನೀವು ಹೇಳುವ ಶಾಸ್ತ್ರೀಯಪದ್ಧತಿಯೂ ಕೂಡ ಹೀಗೆ ಇಲ್ಲದ ಆಗ್ರಹದಿಂದ ಏನಾದರೊಂದು ಸಿದ್ಧಾಂತವನ್ನು ತೆಗೆಯಬಾರದೆಂದು ಹೇಳುತ್ತದೆ. ಆದುದರಿಂದ ನಿರ್ದುಷ್ಟವಾದ ವೇದಾಂತಸಿದ್ಧಾಂತಗಳು ಇನ್ನೂವರೆಗೆ ಅಜೆಂಕ್ಯವಾಗಿಯೇ ಉಳಿದಿರುವವೆಂದು ಹೇಳಿದರೆ ವೇದಾಂತಾಭಿಮಾನದ ಅತಿರೇಕದೋಷವು ತಟ್ಟಲಾರದೆಂದೆನಿಸುತ್ತದೆ.

ಪಾಶ್ಚಾತ್ಯರ ಬಹಿಃಪ್ರವೃತ್ತಿ

ಇನ್ನೊಂದು ವಿಷಯದಲ್ಲಿ ಮಾತ್ರ ವೇದಾಂತಕ್ಕೂ ವಿಕಾಸವಾದಕ್ಕೂ ಭೂಮ್ಯಾಕಾಶದಷ್ಟು ಅಂತರವಿದೆ. ಭೌತಿಕಶಾಸ್ತ್ರಗಳು ಬಾಹ್ಯವಸ್ತುಗಳ ಮೇಲೆಯೇ ವಿಶೇಷವಾಗಿ ಅವಲಂಬಿಸುತ್ತವೆ. ಎಂದರೆ ನಮ್ಮ ಸ್ಥೂಲವಾದ ಇಂದ್ರಿಯಗಳ ಬಹಿಃಪ್ರವೃತ್ತಿಯೇ ಭೌತಿಕಶಾಸ್ತ್ರಗಳ ಮುಖ್ಯಕಾರಣವೆಂದು ಹೇಳಬಹುದು. ಕಣ್ಣಿನಿಂದ ನೋಡಿದ, ಕಿವಿಯಿಂದ ಕೇಳಿದ ವಸ್ತುಗಳನ್ನೆಲ್ಲ ಶಾಸ್ತ್ರೀಯರೀತಿಯಿಂದ ಅಭ್ಯಾಸಮಾಡಿ, ಅವುಗಳ ವ್ಯವಸ್ಥಿತವಾದ ವಿಭಜನೆಯನ್ನು ಸರಿಪಡಿಸಿಕೊಂಡು, ಅವುಗಳ ನಾನಾತ್ವದ ಕೆಳಗೆ ಏಕತ್ವವನ್ನು ಕಂಡುಹಿಡಿಯುವುದೇ ಈಗಿನ ಶಾಸ್ತ್ರೀಯ ಪದ್ಧತಿಯೆಂದು ಹೇಳಬಹುದು. ಬುದ್ಧಿಯ ಪಾಟವವು ಭೌತಿಕಶಾಸ್ತ್ರಗಳಿಗೆ ಅವಶ್ಯವಲ್ಲೆಂದು ನಮ್ಮ ಅಭಿಪ್ರಾಯವಲ್ಲ. ಶಾಸ್ತ್ರಜ್ಞರಿಗಾದರೂ ಬುದ್ಧಿಚಾಪಲ್ಯವಿದ್ದ ವಿನಹ ಮಹತ್ತ್ವದ ಶೋಧಗಳನ್ನು ಹುಡುಕಿತೆಗೆದು ಮಾನವಜಾತಿಯ ಮೇಲೆ ಅನಂತ ಉಪಕಾರಗಳನ್ನು ಮಾಡಿದ ದೊಡ್ಡಸ್ತಿಕೆಯು ಬರುತ್ತಿರಲಿಲ್ಲ. ನ್ಯೂಟನ್, ಕೆಪ್ಲರ, ಗ್ಯಾಲಿಲಿಯೋ, ಕೋಪರ್ನಿಕಸ್, ಮೊದಲಾದವರು ತಮ್ಮ ಬುದ್ಧಿಶಕ್ತಿಯಿಂದಲೇ ಜಗತ್ತಿನ ಕಣ್ಣುಗಳನ್ನು ಕುಕ್ಕಿಸಿರುವುದು. ತಮ್ಮ ಆಶ್ಚರ್ಯಕರವಾದ ಸ್ಫೂರ್ತಿಯಿಂದಲೇ ಬಾಹ್ಯವಸ್ತುಗಳ ಮೇಲಿನ ಕಠಿಣವಾದ ಅಜ್ಞಾನಪರೆಯನ್ನು ಹರಿದುಹಾಕಿ ನಿಸರ್ಗದೇವತೆಯ ಹೃದಯವ್ಯಾಪಾರವನ್ನವರು ಕಂಡುಹಿಡಿದಿರುವರು. ಗಹನವಾದ ಗಣಿತವಿಷಯದೊಳಗಿನ ಗೂಢವಾದ ಸಮಸ್ಯೆಗಳನ್ನು ಬಿಡಿಸಬೇಕೆಂದು ಕುಳಿತಾಗ ಆಹಾರನಿದ್ರೆಗಳ ಪರಿವೆಯಿಲ್ಲದ

ನ್ಯೂಟನನು ಎಷ್ಟೋ ದಿವಸಗಳವರೆಗೆ ಕುಳಿತ ಸ್ಥಳವನ್ನು ಬಿಟ್ಟು ಏಳುತ್ತಿದ್ದಿಲ್ಲ ವಂತೆ ! ಜಲನಿಯಮದ (Law of Archimedes) ಶೋಧವನ್ನು ಹಚ್ಚಿದ ಆರ್ಕಿಮಿಡಿಸನು ಸ್ನಾನಮಾಡುತ್ತಿರುವಾಗಲೇ ತನಗೆ ಬೇಕಾದ ತತ್ತ್ವವು ಹೊಳೆಯಲು, ಹಾಗೆಯೇ ಎದ್ದುನಿಂತು, "ನನಗದು ಸಿಕ್ಕಿತು, ನನಗದು ಸಿಕ್ಕಿತು," ಎಂದು ಆನಂದದ ಭರದಲ್ಲಿ ಬತ್ತಲೆಯಾಗಿಯೇ ಓಡರುತ್ತ ನಡೆದನಂತೆ ! ಫೋನೋಗ್ರಾಫ ಯಂತ್ರವನ್ನು ಹುಡುಕಿತೆಗೆದ ಎಡಿಸನ್ನನ ಬಗ್ಗೆಯಾದರೂ ಇಂತಹದೇ ಒಂದು ಕಥೆಯು ಪ್ರಸಿದ್ಧವಿದೆ. ವಿದ್ಯುತ್ತು ಮೊದಲಾದವುಗಳನ್ನಾದರೂ ಹುಡುಕಿತೆಗೆದವರ ಬುದ್ಧಿಸಾಮರ್ಥ್ಯವಾದರೂ ಸಾಮಾನ್ಯವಲ್ಲೆಂಬುವುದು ಎಲ್ಲರಿಗೂ ತಿಳಿಯುವಂತಹ ಮಾತು. ಇವರಲ್ಲಿ ಹಲವು ಮಹನೀಯರು ಸಂಸಾರದ ಪರಿವೆಯನ್ನುಕೂಡ ಬಿಟ್ಟುಕೊಟ್ಟು, ಜ್ಞಾನದೇವಿಯ ಸೇವೆಯನ್ನು ಮಾಡಿದ್ದಾರೆ. ನ್ಯೂಟನನು ಕಡೆಯವರೆಗೆ ಬ್ರಹ್ಮಚಾರಿಯೇ ಉಳಿದು ತನ್ನ ವಯಸ್ಸಿನ ಎಂಬತ್ತನೇ ವರುಷ ದೇಹವಿಟ್ಟನು. ಮಹಾಪಂಡಿತನಾದ ಪ್ಲೇಟೋನು ಕೂಡ (ಕ್ರಿ. ಪೂ ೪೨೭ರಿಂದ ೩೪೭ರ ವರೆಗೆ) ೮೦ ವರುಷಗಳವರೆಗೆ ಸ್ವಾರ್ಥರಹಿತನಾಗಿ ಮನೆಮಾರುಗಳ ಗೊಂದಲದಲ್ಲಿ ಮೊದಲಿನಿಂದಲೂ ಹೋಗದೆ, ತತ್ತ್ವಜ್ಞಾನದೇವಿಯ ಉಪಾಸಕನಾಗಿ ಸೇವೆಮಾಡಿದನು. ಜರ್ಮನ ಪಂಡಿತನಾದ ಕಾಂಟನಂತಹ ಜಿತೇಂದ್ರಿಯನಂತೂ ಈ ಜಗತ್ತಿನಮೇಲೆಯೇ ಮತ್ತೊಬ್ಬರಾಗಿಲ್ಲೆಂದು ಹೇಳಿದರೆ ಸಿಕ್ಕಂತೆ ಬೊಗಳುವ ದೋಷಕ್ಕೆ ನಾವು ಪಾತ್ರರಾಗುವೆವೆಂದು ತಿಳಿಯಲಾರೆವು. ನಾಸ್ತಿಕಾಗ್ರೇಸರನಾದ ಹರ್ಬರ್ಟ ಸ್ಪೆನ್ಸರನು ಕೂಡ ತನ್ನ ದೀರ್ಘಾಯುಷ್ಯದ ಪ್ರೌಢಕಾಲವನ್ನೆಲ್ಲ ೫೭ ವರುಷಗಳವರೆಗೆ, ಆ ಕಾಲಕ್ಕೆ ಗೊತ್ತಿದ್ದ ಎಲ್ಲ ಶಾಸ್ತ್ರಗಳ ಅಭ್ಯಾಸವನ್ನು ಮಾಡುವುದರಲ್ಲಿ ಕಳೆದು, ತನ್ನ ವಿಕಾಸವಾದವನ್ನು ಜಗತ್ತಿನ ಮುಂದಿಟ್ಟನು. ಎಂದಮೇಲೆ ಇವರೆಲ್ಲರೂ ಬಹಿರ್ಮುಖರೇ ಆಗಿದ್ದರೆಂದು ಹೇಳುವ ಧೈರ್ಯವು ಆವನದು ? ಅದರಲ್ಲಿಯೂ ಕಾಂಟ ಮತ್ತು ಪ್ಲೇಟೋ ಇವರ ಅಂತರ್ಮುಖತೆಯು ಮನನೀಯವಾಗಿರುವುದು. ಆದರೂ ಕೂಡ ಒಟ್ಟಿನ ಮೇಲಿಂದ ನೋಡಿದರೆ ಭೌತಿಕಶಾಸ್ತ್ರಗಳ ವೃತ್ತಿಯೆಲ್ಲ ಬಹಿರ್ಮುಖವಾಗಿರುವುದೆಂದೇ ಹೇಳಬೇಕಾಗುವುದು. ಎಂದರೆ ಅವುಗಳ ದೃಷ್ಟಿಯೆಲ್ಲ ಹೊರಗಿನ ವಸ್ತುಗಳಮೇಲೆಯೆ. ಆ ಶಾಸ್ತ್ರಜ್ಞರು ಶಾಸ್ತ್ರೀಯಶೋಧಗಳಿಗಾಗಿ ತಮ್ಮ ಅಂತಃಕರಣವನ್ನು ಪರೀಕ್ಷಿಸಬೇಕಾಗಿದ್ದರೂ, ಆ ಅಂತಃಪರೀಕ್ಷೆಯೂ ಕೂಡ, ಬಾಹ್ಯವಸ್ತು

ಗಳ ವಿಚಾರಣೆಗಾಗಿಯೇ; ಎಂದರೆ ಜಡದಲ್ಲಿಯೇ ಅವರಿಗೆ ವಿಶೇಷವಾದ ಅಭಿರುಚಿಯಿರುವುದು. ಅವರು ಸ್ವಾಭಾವಿಕವಾದ ಸ್ಥೂಲಇಂದ್ರಿಯ ವೃತ್ತಿಯನ್ನು ಹಿಡಿದುಕೊಂಡು ತತ್ತ್ವಗಳನ್ನು ಅಭ್ಯಾಸಿಸಬೇಕೆನ್ನುವರು. ಆಧುನಿಕ ಮಾನಸಶಾಸ್ತ್ರದಲ್ಲಿ ಅಂತಃಪರೀಕ್ಷೆಯು (Introspection) ಒಂದು ಪ್ರಮುಖವಾದ ಸಾಧನವಾಗಿದ್ದರೂ ಅದು ಬರಬರುತ್ತ ಬೇರೊಂದು ಹೊಸಪದ್ಧತಿಗೆ ಸಾಧನವಾಗುತ್ತ ಹೋಗಹತ್ತಿದೆ. ಎಂದರೆ ಮನುಷ್ಯನೆಂದರೆ ಸಾಮಾಜಿಕಪ್ರಾಣಿಯೆಂದೂ, ಸಮಾಜದ ಸಹವಾಸವು ಅವನಿಗಿರದೇ ಹೋದರೆ, ಅವನ ಮನುಷ್ಯತ್ವವೇ ಹಾಳಾಗಿಹೋಗುವುದೆಂದೂ ಪಾಶ್ಚಾತ್ಯರ ಇಭಿಪ್ರಾಯವಿದೆ. ಯಾವುದೊಂದು ಕೂಸನ್ನು ಅದು ಹುಟ್ಟಿದಕೂಡಲೇ ಬೇರೆಕಡೆಗೆ ಒಯ್ದಿಟ್ಟು, ಅಲ್ಲಿ ಮನುಷ್ಯಸಂಸರ್ಗವೇ ಅದಕ್ಕೆ ಸಿಗದಂತೆ ವ್ಯವಸ್ಥೆಮಾಡಬಹುದೆಂದು ಕಲ್ಪಿಸಿದರೆ. ಅದು ಮಾನವಕೋಟಿಯಲ್ಲಿ ಹುಟ್ಟಿದ್ದರೂ. ಮನುಷ್ಯನ ಧರ್ಮಗಳಿಂದ ಅದು ಸಂಪೂರ್ಣವಾಗಿಯೇ ಹೀನವಾಗುವುದೆಂದು ಈ ಮೊದಲೇ ಹೇಳಿದ್ದೇವೆ. ಮನುಷ್ಯನಾಗಿ ಬೆಳೆಯುವ ಶಕ್ತಿಯು ಅದರಲ್ಲಿದ್ದರೂ, ಅದಕ್ಕನುಕೂಲವಾದ ಪರಿಸ್ಥಿತಿಯು (ಎಂದರೆ ಸಾಮಾಜಿಕ ಜೀವನವು) ಸಿಗದೇಹೊದರೆ, ಅದು ಎಂದೂ ಮನುಷ್ಯನಾಗಲಾರದೆಂದು ಇದೆಲ್ಲದರ ಅರ್ಥವು. ಎಂತೆಯೇ "ಸಾಮಾಜಿಕ ಜೀವನವೇ (ನಿಜವಾದ) ಜೀವನವು; ಅದರ ಅಭಾವವೇ ಮರಣವು." Fellow-ship is life, lack of fellowship, death) ಎಂದೊಬ್ಬ ಆಂಗ್ಲ ಕವಿಯು ಹೇಳಿರುವನು. ಆದುದರಿಂದಲೇ ವೈಯಕ್ತಿಕಮಾನಸಶಾಸ್ತ್ರಕ್ಕೆ ಮಹತ್ತ್ವವಿಲ್ಲೆಂದೂ, ಸಮಾಜ ಸಹವಾಸದಲ್ಲಿ ಪ್ರಕಟವಾಗುವ ಅವನ ಸ್ವಭಾವದ ಅಭ್ಯಾಸವೇ ನಿಜವಾದ ಮಾನಸಶಾಸ್ತ್ರವೆಂದೂ ಇತ್ತೀಚೆಯವರ ಅಭಿಪ್ರಾಯವಾಗಿದೆ. ಇದಕ್ಕೆ ಇಂಗ್ಲೀಷದಲ್ಲಿ 'Behaviouristic Psychology' ಎಂದು ಕರೆಯುತ್ತಾರೆ. ಈ ರೀತಿಯಿಂದ ವಿಚಾರಮಾಡಿಯೇ ಅವರು ಅಂತರ್ನಿರೀಕ್ಷಣೆಯು ತೀರ ನಿರುಪಯುಕ್ತವಾದುದೆಂದೂ, ಅದರಿಂದ ನಿಜವಾದ ತತ್ತ್ವವು ಲಭಿಸಲಾರದೆಂದೂ ಸಿದ್ಧಾಂತ ಕಟ್ಟಿದ್ದಾರೆ. ಬಹಳೇನು ? ಇಲ್ಲಿಯವರೆಗಾದ ಮಾನಸಶಾಸ್ತ್ರದೊಳಗಿನ ದೋಷಗಳಿಗೆಲ್ಲ ಈ ಅಂತರ್ಮುಖತೆಯೇ ಕಾರಣವೆಂದು ಅವರ ಅಭಿಪ್ರಾಯವಿದೆ. ಎಂದರೆ ಮಾನಸಶಾಸ್ತ್ರದೊಳಗೆ ಪ್ರಗತಿಯಾಗುವುದಕ್ಕೆ ಏನಾದರೂ ವಿಘ್ನವಾಗಿದ್ದರೆ, ಅದು ಈ ಅಂತರ್ಮುಖತೆಯೇ ಸರಿಯೆಂದು ಅವರ

ಅಂಬೋಣದ ಅರ್ಥವು. ಆದುದರಿಂದ ಬಾಹ್ಯಸ್ವಭಾವದಿಂದಲೇ ಮನುಷ್ಯನ ಕೂಡ ಅಭ್ಯಾಸಿಸಬೇಕೆಂದು ಅವರ ಹೇಳಿಕೆಯು. ಆದರೆ ಅಂತರ್ಮುಖತೆಯನ್ನೇ ಸಂಪೂರ್ಣವಾಗಿ ಬಿಟ್ಟುಬಿಡಬೇಕೆಂದು ಯಾರೂ ಹೇಳುವುದು ಶಕ್ಯವಿಲ್ಲ. ಪಾಶ್ಚಾತ್ಯರಾದರೂ ಅದನ್ನು ಅಪೂಟವಾಗಿ ತ್ಯಜಿಸಬೇಕೆಂದು ಹೇಳುವುದಿಲ್ಲ. ಆದರೂ ತತ್ತ್ವಶೋಧನೆಯ ಕೆಲಸದಲ್ಲಿ ಅದಕ್ಕವರು ಗೌಣಸ್ಥಾನವನ್ನು ಕಲ್ಪಿಸಿರುವರು. ಒಟ್ಟಿನಮೇಲಿಂದ ಅಂತರ್ನಿರೀಕ್ಷಣೆಯು ತತ್ತ್ವಶೋಧನೆಗೆ ನಿಜವಾದ ದಾರಿಯಲ್ಲೆಂದು ಅವರ ವಿಶ್ವಾಸವಿದೆ.

ನಮ್ಮ ವೇದಾಂತದ ಮುಖ್ಯಸಾಧನವಾದರೊ ಪಾಶ್ಚಾತ್ಯರಿಂದ ತಿರಸ್ಕರಿಸಲ್ಪಟ್ಟ ಈ ಅಂತರ್ಮುಖತೆಯೇ ಅಹುದೆಂದು ಎಲ್ಲರಿಗೂ ಗೊತ್ತಿರಬಹುದು.

ಅಂತರ್ಮುಖತೆಯು ವೇದಾಂತದ ಮುಖ್ಯ ಸಾಧನವು

ಅದೇಕೆ? ಧಾರ್ಮಿಕಬಲವುಳ್ಳ ಯಾವ ತತ್ತ್ವಮಾರ್ಗವಾದರೂ ಈ ಕರಣದ ಪ್ರಾಬಲ್ಯವನ್ನು ಒಪ್ಪಬೇಕಾಗುವುದೆಂಬುದು ವಿಚಾರಾಂತ್ಯದಲ್ಲಿ ಕಂಡುಬರುವಂತಿದೆ. ನಾವು ಯಾವುದೇ ಅನುಭಾವಿಪದ್ಧತಿ(Mysticism)ಯನ್ನು ತೆಗೆದುಕೊಂಡರೂ ಈಮಾತು ಒಡೆದು ಕಾಣುವಂತಿದೆ. ಥಾಮಸ್ ಕೆಂಪಿಸ್‌ನೆಂಬ ಕ್ರಿಶ್ಚನ್ ಅನುಭಾವಿಯು ೧೫ನೇ ಶತಮಾನದಲ್ಲಿ ಬರೆದ "ಕ್ರಿಸ್ತನ ಅನುಕರಣವು" ("Of the Imitation of Christ") ಎಂಬ ಪುಸ್ತಕದಲ್ಲಿ ನಮ್ಮ ಪ್ರತಿಪಾದನೆಯ ಸತ್ಯತೆಯನ್ನು ಕಾಣಬಹುದು. ಅವನ ಪ್ರತಿಯೊಂದು ಪುಟದಲ್ಲಿಯೂ ತತ್ತ್ವಶೋಧನೆಗೆ ಅಂತರ್ಮುಖವೃತ್ತಿಯೇ ಸಾಧನವೆಂಬುದನ್ನು ಸ್ಪಷ್ಟವಾಗಿ ತೋರಿಸಿದೆ. ಏಕಾಂತವಾಸ, ಆತ್ಮವಿಚಾರ, ಐಹಿಕ ವಿಷಯಗಳ ತುಚ್ಛತೆ, ಇವೇ ಮೊದಲಾದವುಗಳನ್ನೇ ಕೆಂಪಿಸನಾದರೂ ಸಮರ್ಥನೆ ಮಾಡಿದ್ದಾನೆ. ಬೇಕಾದವರು ಆ ಪುಸ್ತಕವನ್ನೇ ಓದಿಕೊಳ್ಳಬೇಕು. ಇರಲಿ; ವೇದಾಂತದಲ್ಲಂತೂ ಅಂತರ್ಮುಖತೆಯ ಹೊರತು ಸದ್ಗತಿಗೆ ಬೇರೆ ಸಾಧನವೇ ಇಲ್ಲೆಂದು ಹೇಳಿದೆ. ಕಠೋಪನಿಷತ್ತಿನಲ್ಲಿ (೨. ೪. ೧) **पराञ्चि खानि व्यतृणत् स्वयंभूस्तस्मात्पराङ्पश्यति नान्तरात्मन्।** ಎಂದರೆ ಇಂದ್ರಿಯಗಳು ಸ್ವಾಭಾವಿಕವಾಗಿಯೇ ಬಹಿಃಪ್ರವೃತ್ತಿಯುಳ್ಳವುಗಳಾಗಿರುವವೆಂದೂ, ಎಂತೆಯೇ ನಾವು ಬಹುಶಃ ಬಹಿರ್ಮುಖರಾಗಿ ಅಂತರಾತ್ಮನನ್ನು ಕಾಣಲಾರೆವೆಂದೂ ಹೇಳಿದ್ದಾರೆ. ಆದರೆ ನಿಜವಾದ ಮೋಕ್ಷಾಪೇಕ್ಷೆಯುಳ್ಳವನು, ಒಳ್ಳೇ ಧೈರ್ಯ

ದಿಂದಲೂ ಸ್ಥೈರ್ಯದಿಂದಲೂ ಮನಸಿನ ದೃಷ್ಟಿಕೋನವನ್ನು ಬದಲಿಸಿಯೇ ಪ್ರಯತ್ನಮಾಡಬೇಕಾಗುವುದೆಂದು ಮುಂದೆ ಅಲ್ಲಿಯೇ ಹೇಳಿದೆ. (**कश्चिद्धीरः प्रत्यगात्मानमैक्षत् आवृत्तचक्षुरमृतत्वमिच्छन्** । ೪-೪-೧) ಗ್ರೀಕ ಪಂಡಿತನಾದ ಪ್ಲೇಟೋನು ಕೂಡ ಸಾಮಾನ್ಯ ಜನರ ಅಜ್ಞಾನಾವಸ್ಥೆಯನ್ನು ವರ್ಣಿಸುವಾಗ ಇಂತಹದೇ ಒಂದು ರೂಪಕವನ್ನು ಕಲ್ಪಿಸಿದ್ದಾನೆ. ಅದು "Parable of the Cave" ಎಂದರೆ "ಗುಹಾರೂಪಕ"ವೆಂದು ಪ್ರಸಿದ್ಧವಾಗಿದೆ. ಗುಹೆಯೆಂದರೆ ಅಜ್ಞಾನದ್ದು. ಹೊರಗೆಲ್ಲ ಜ್ಞಾನಸೂರ್ಯನು ಬೆಳಗುತ್ತಿರುತ್ತಾನೆ; ಒಳಕ್ಕೆ ಹೊಕ್ಕವೆಂದರೆ ( ಎಂದರೆ ಅಜ್ಞಾನವೆಂಬ ಗುಹೆಯನ್ನು ಹೊಕ್ಕರೆ ) ತುಸು ಅಂತರದ ಮೇಲೆ ಒಂದು ದಿನ್ನೆಯುಂಟು. ಆ ದಿನ್ನೆಯನ್ನಿಳಿದು ಹಾಗೆಯೇ ಮುಂದೆ ಸಾಗಿದೆವೆಂದರೆ, ಅಲ್ಲಿ ಶೃಂಖಲಾಬದ್ಧರಾದ ಕೆಲವು ಜನರಿರುವರು. ಅವರ ಮುಖಗಳು ಗವಿಯ ಒಳಭಾಗದ ತಳದ ಕಡೆಗೇ ತಿರುಗಿಸಲ್ಪಟ್ಟಿರುವವು. ಅವರು ತಮ್ಮ ಮುಖವನ್ನು ದಿನ್ನೆಯ ಕಡೆಗೆ ಹೊರಳಿಸುವುದು ಶಕ್ಯವೇ ಇಲ್ಲ. ಕೊರಳಲ್ಲಿ ಹದನವಾದ ಮೊಳೆಗಳುಳ್ಳ ಬೇಡಿಗಳುಂಟು. ಕುತ್ತಿಗೆಯನ್ನು ತಿರುಗಿಸಿದರೆ ಅವರಿಗೆ ಬಹಳೇ ವೇದನೆಯಾಗುತ್ತಿದೆ. ದಿನ್ನೆಯ ಮೇಲೆ ಕೆಲವು ಜನರು ಅಡ್ಡಾಡುತ್ತಿರುವರು. ಅವರ ಹಿಂದೆ ಒಂದು ದೀಪವು ಉರಿಯುತ್ತದೆ. ಅವರ ನೆರಳು ಆ ಶೃಂಖಲಾಬದ್ಧ ಜನರು ನೋಡುತ್ತಿರುವ ಗೋಡೆಯ ಮೇಲೆ ಬೀಳುವುದು ಸಹಜವಿದೆ. ಆ ಗೋಡೆಯ ಮೇಲೆ ನಿಗಡಿತರಾದವರ ನೆರಳುಗಳೂ ಬೀಳಬೇಕೆಂಬುದು ಸ್ಪಷ್ಟವಿದೆ. ಹೀಗೆ ಆಶೃಂಖಲಾಬದ್ಧ ಜನರು ಕೇವಲ ನೆರಳುಗಳನ್ನೇ ನೋಡಿ ಸಂತೋಷಪಡಬೇಕು. ಅವರ ಕಣ್ಣುಗಳು ನೆರಳುಗಳ ದರುಶನಕ್ಕೇ ರೂಢವಾಗಿಹೋಗಿವೆ. ಈ ಅವಸ್ಥೆಯಲ್ಲಿ ಗವಿಯ ಹೊರಗಿನ ಪ್ರಕಾಶವನ್ನು ಅನುಭವಿಸಿದ ಜ್ಞಾನಿಯೊಬ್ಬನು ಒಳಕ್ಕೆ ಬಂದು, ನೀವು ನೋಡುವುದೆಲ್ಲ ನೆರಳೆಂದೂ, ಪ್ರತಿಬಿಂಬವೆಂದೂ, ಛಾಯೆಯೆಂದೂ, ಸತ್ಯಾಭಾಸವಾಗಿರುವುದೆಂದೂ ಆ ಬಂಧಿತರಿಗೆ ಹೇಳಹತ್ತಿದರೆ, ಅವರು ಆರಂಭಕ್ಕೆ ಅವನ ಮೇಲೆ ವಿಶ್ವಾಸವನ್ನಿಡುವುದೇ ಶಕ್ಯವಿಲ್ಲ. ಮಲಿನವಾಗಿ ಹೋದ ಅವರ ಕಣ್ಣುಗಳು ಬೇರೊಂದು ದಿವ್ಯವಸ್ತುವನ್ನು ನೋಡಲಾರವು. ತಾವು ನೋಡುತ್ತಿರುವುದೇ ಸದ್ವಸ್ತುವಾಗಿರುವುದೆಂದೂ, ಅದರಿಂದ ಭಿನ್ನವಾದ ಬೇರೊಂದು ಸದ್ವಸ್ತುವಿರುವುದೇ ಶಕ್ಯವಿಲ್ಲೆಂದೂ ಅವರು ದೃಢವಾಗಿ ನಂಬಿರುವರು. ಆದರೂ

ಏನಾದರೊಂದು ರೀತಿಯಿಂದ ಯತ್ನಮಾಡಿ, ಅವರ ಮನಸ್ಸೊಪ್ಪುವಂತೆ ಬುದ್ಧಿ ಹೇಳಿ, ಅವರ ಕಣ್ಣುಗಳನ್ನು ಆ ಜ್ಞಾನಿಯು ದಿನ್ನೆಯ ಕಡೆಗೆ ಹೊರಳಿಸಿದನೆಂದು ತಿಳಿಯುವ! ಕೂಡಲೇ ಏನಾಗುವುದು? ಮತ್ತಮೊದಲು ಅವರು ಆ ದೀಪದ ಬೆಳಕನ್ನೂ ಕೂಡ ನೋಡಲಾರರು. ಅವರ ಕಣ್ಣುಗಳು ಆ ಜ್ಯೋತಿಯಿಂದ ಕುಕ್ಕುವವೆಂಬುದರಲ್ಲಿ ಸಂದೇಹವಿಲ್ಲ. ಆದರೂ ಕ್ರಮೇಣವಾಗಿ ಅವರ ಕಣ್ಣುಗಳು ಆ ಬೆಳಕಿಗೆ ರೂಢವಾದವೆಂದರೆ, ತಾವು ಮೊದಲು ನೋಡುತ್ತಿದ್ದುದು ಸತ್ಯಾಭಾಸವೆಂದೂ ಈಗ ನೋಡುತ್ತಿರುವುದೇ ಸತ್ಯವಿರಬೇಕೆಂದೂ ಅವರಿಗೆ ಎನಿಸದೆ ಹೋಗಲಿಕ್ಕಿಲ್ಲ. ಅವರನ್ನು ಹಾಗೆಯೇ ಮುಂದು ಮುಂದಕ್ಕೆ ಕರೆದುಕೊಂಡು ಬಂದು ಆ ಅಜ್ಞಾನಗವಿಯನ್ನು ದಾಟಿಸಿ ಪ್ರಕಾಶಮಾನವಾದ ಸೂರ್ಯನ ಬೆಳಕಿನಲ್ಲಿ ತಂದು ಬಿಡಬಹುದು. ಆದರೆ ಒಮ್ಮೆಲೇ ಅವರು ಸೂರ್ಯನ ದಿವ್ಯತೇಜಸ್ಸನ್ನು ಅನುಭವಿಸಿ ಸುಖಪಡಲಿಕ್ಕೆ ಅಸಮರ್ಥರಾಗುವರು. ಕಾಲಾಂತರದಿಂದ ಸೂರ್ಯಪ್ರಕಾಶವು ಅವರಿಗೆ ರೂಢವಾದರೂ, ಸೂರ್ಯನನ್ನೇ ನೋಡುವ ಸಾಮರ್ಥ್ಯವು ಬರಬೇಕಾದರೆ ಅವರು ಎಷ್ಟು ವರುಷಗಳನ್ನು ಕಳೆಯಬೇಕಾಗುವುದೋ ದೇವರಿಗೆ ಗೊತ್ತು! ಆದರೆ ಜ್ಞಾನಿಯಾದ ಗುರುವಿನ ಸಹಾಯದಿಂದ ಅದೂ ಕಡೆಗೆ ಸಾಧ್ಯವಾಗದಿರಲಾರದೆಂಬುದು ಸ್ಪಷ್ಟವಿದೆ. ಇರಲಿ. ಎಂತಹ ಸುಂದರವಾದ ರೂಪಕದಲ್ಲಿ ಪ್ಲೇಟೋನು ಎಷ್ಟು ಗಹನವಾದ ವಿಷಯಗಳನ್ನು ತಿಳಿಸಿಕೊಟ್ಟಿರುವನಲ್ಲ! ಎಂದು ವಾಚಕರಿಗೆ ಆಶ್ಚರ್ಯವಾಗಬಹುದು. ಶ್ರೀಶಂಕರಾಚಾರ್ಯರ ಪ್ರಾತಿಭಾಸಿಕ ಸತ್ಯ, ವ್ಯಾವಹಾರಿಕ ಸತ್ಯ, ಪಾರಮಾರ್ಥಿಕ ಸತ್ಯಗಳಾದರೂ ಇದೇ ತರದ ಜ್ಞಾನಸಾಧನೆಯ ಮೆಟ್ಟಿಲುಗಳನ್ನು ತೋರಿಸುವ ಕಲ್ಪನೆಗಳೆಂದರೆ ತಪ್ಪಾಗಲಾರದು. ಇರಲಿ. ಇದೆಲ್ಲದರ ಮೇಲಿಂದ ನಮ್ಮ ಇಂದ್ರಿಯಗಳು ಸ್ವಭಾವತಃ ಹೇಗೆ ಬಹಿರ್ಮುಖವಾಗಿರುವವೆಂಬುದೂ, ಸತ್ಯವು ಬೇಕಾಗಿದ್ದರೆ, ಅವುಗಳ ದೃಷ್ಟಿಯನ್ನು ಹೇಗೆ ಒಳಗಡೆಗೆ ತಿರುಗಿಸಬೇಕಾಗುವುದೆಂಬುದೂ ತಿಳಿಯುವಂತಿದೆ.

ನಮ್ಮ ವೈರಿಯಾದ ಕಾಮವೇ, ಕ್ರೋಧವೇ, ನಮ್ಮನ್ನು ನಾಶಪಡಿಸಲೆಸಗಿದ ಪಿಶಾಚಿಗಳೆಂದೂ, ಇಂದ್ರಿಯ, ಮನಸು, ಬುದ್ಧಿಗಳೇ ಅದು ವಾಸಿಸುವ

ವೇದಾಂತದ ನಿಜವಾದ ಶಿಕ್ಷಣವೇನು ?

ಸ್ಥಾನಗಳೆಂದೂ ಭಗವದ್ಗೀತೆಯಲ್ಲಿ ಹೇಳಿದೆ. (ಗೀ. ೩-೪೦) ಆದುದರಿಂದ ಇಂದ್ರಿಯಗಳನ್ನು ಜಯಿಸುವುದೇ ಮುಮುಕ್ಷುಗಳ ಆದ್ಯಕರ್ತವ್ಯವೆಂದು ಎಲ್ಲ ಗ್ರಂಥಕಾರರೂ ಹೇಳಿದ್ದಾರೆ. ಇಂದ್ರಿಯಗಳೆಂದರೆ ದುಷ್ಟಕುದುರೆಗಳೆಂದೂ, ಅವುಗಳ ಬೆನ್ನುಹತ್ತಿದವನಿಗೆ ದುರ್ಗತಿಯು ತಪ್ಪದೆಂದೂ ಕಠೋಪನಿಷತ್ತಿನಲ್ಲಿ ವರ್ಣನೆಯಿದೆ. ಪ್ರಯತ್ನಮಾಡುತ್ತಿರುವ ಪಂಡಿತನ ಇಂದ್ರಿಯಗಳೂ ಕೂಡ ಒಮ್ಮೊಮ್ಮೆ (ಗೀ. ೨-೬೦) ಬಲವಾಗಿ ಹರಿದಾಡುತ್ತ ಅಡ್ಡದಾರೀ ಹಿಡಿಯಬಹುದೆಂದೂ, ಅವುಗಳನ್ನನುಸರಿಸದವನ ಪ್ರಜ್ಞೆಯೇ ನಾಶವಾಗುವುದೆಂದೂ, ಅವನ ಗತಿಯು ಗಾಳಿಯು ಹೊಡೆತಕ್ಕೆ ಸಿಕ್ಕ ಹಡಗದಂತಾಗುವುದೆಂದೂ ಗೀತೆಯಲ್ಲಿ ವರ್ಣನೆ ಮಾಡಿದ್ದಾರೆ. ಆದುದರಿಂದ, ಎಲೈ ಭರತಶ್ರೇಷ್ಠನಾದ ಅರ್ಜುನನೇ, ನೀನು ಮೊದಲು ಇಂದ್ರಿಯಗಳನ್ನು ಜಯಿಸಲಿಕ್ಕೆ ಉದ್ಯುಕ್ತನಾಗಿ ಆ ಶತ್ರುವನ್ನು (ಕಾಮವನ್ನು) ಮುಂಚೆ ನಾಶಮಾಡೆಂದು ಗೀತೆಯಲ್ಲಿ (ಗೀ. ೩-೪೧) ಹೇಳಿದ್ದಾರೆ. ಮಹಾನುಭಾವರಾದ ಶ್ರೀಶಂಕರಾಚಾರ್ಯರೂ ಕೂಡ ಇದೇ ಮಾತನ್ನು ತಮ್ಮ ಭಾಷ್ಯದಲ್ಲಿ ಒಂದು ಕಡೆಗೆ ಸ್ಪಷ್ಟಮಾಡಿದ್ದಾರೆ. (ವೇದಾಂತಾದಿ) ಶಾಸ್ತ್ರಗಳ ನಿಜವಾದ ಕರ್ತವ್ಯವೆಂದರೆ: ಸ್ವಾಭಾವಿಕವಾದ ಇಂದ್ರಿಯಗಳ ಬಹಿಃಪ್ರವೃತ್ತಿಯನ್ನು ಹೊಡೆದುಹಾಕಿ, ನಮ್ಮೊಳಗಿನ ಅಂತರ್ಮುಖತೆಯ ಶಕ್ತಿಯನ್ನುದ್ದೀಪಿಸುವುದೇ. (ಬ್ರ. ಸೂ. ಭಾ. ೧. ೧. ೪. **तमात्यन्तिकपुरुषार्थवांछिनं स्वाभाविककार्यकरणसंघातगोचराद्विमुखीकृत्य प्रत्यगात्मस्रोतस्तया प्रवर्तयन्ति आत्मावा अरेद्रष्टव्यः—इत्यादीनि विधिच्छायानि शास्त्रवचनानि ।** )

ಅಂತರ್ಮುಖತೆಯ ಸ್ವರೂಪವು

ನಾನು ಯಾರು ? ನನ್ನ ನಿಜವಾದ ಸ್ವರೂಪವೇನು ? ನಾನು ನಿಜವಾಗಿಯೇ ಬದ್ಧನೇ ? ಹಾಗಿದ್ದರೆ ನನ್ನ ಮೋಕ್ಷವನ್ನೆಂತು ಸಾಧಿಸಬೇಕು ? ಇವೇ ಮೊದಲಾದ ಪ್ರಶ್ನೆಗಳನ್ನು ಸ್ವಾನುಭವಪೂರ್ವಕವಾಗಿ ವಿಚಾರಿಸುತ್ತಹೋಗುವುದೇ ಅಂತರ್ಮುಖತೆಯ ಲಕ್ಷಣವೆಂದು ಹೇಳಬಹುದು. ಹಬ್ಬಿದ ಅವಯುವಗಳನ್ನೆಲ್ಲ ಕೂರ್ಮವು ಹೇಗೆ ಸಂಹರಿಸಿಕೊಳ್ಳುವುದೋ ಹಾಗೆಯೇ ತಮ್ಮ ತಮ್ಮ ವಿಷಯಗಳಲ್ಲಿ ವ್ಯಾಪಿಸಿದ ಇಂದ್ರಿಯಗಳನ್ನು ಆ ಆ ವಿಷಯಗಳಿಂದ ತಿರುಗಿ ಜಗ್ಗಿಕೊಂಡು, ಮನಸಿನಲ್ಲಿ ಅವನ್ನು ಕೂಡಿಸಬೇಕೆಂದು ಗೀತೆಯಲ್ಲಿ

ಹೇಳಿದ್ದಾರೆ (ಗೀ. ೩-೪೨). ಇದೇ ಮಾತನ್ನು ಕಠೋಪನಿಷತ್ತಿನಲ್ಲಿ ಸ್ಪಷ್ಟ ಮಾಡಿ ತೋರಿಸಿದೆ. 'यच्छेद्वाङ्मनसी प्राज्ञः तद्यच्छेज्ज्ञान आत्मनि । ज्ञानमात्मनि महति नियच्छेच्छान्त आत्मनि ॥ ಕಠ ೧. ೩. ೧೩ ಪಂಚ ಕೋಶವಿವೇಕವೆಂದರೂ ಇದೇ ಮಾತೆಂದು ಬೇರೆ ಹೇಳಬೇಕಾಗಿಲ್ಲ. देहादभ्यन्तरः प्राणः प्राणादभ्यन्तरं मनः । ततः कर्ता ततो भोक्ता गुहासेयं परंपरा ॥ पंचदशी ೩-೨. ಅನ್ನ, ಪ್ರಾಣ, ಮನಸ್, ವಿಜ್ಞಾನ, ಆನಂದಮಯಕೋಶಗಳೆಲ್ಲ ಒಂದಕ್ಕಿಂತ ಒಂದು ಒಳಗಿನವೆಂದೂ, ನಾವು ಕ್ರಮದಿಂದ ಒಳಗಿಳಿಯುತ್ತ ಹೋದೆವೆಂದರೆ ಕಟ್ಟಕಡೆಗೆ ಇವೆಲ್ಲ ಕೋಶಗಳಿಗೆ ಆಧಾರನಾಗಿದ್ದ ಆತ್ಮನು ದೊರಕುತ್ತಾನೆಂದೂ ಪಂಚಕೋಶವಿವೇಕವು ಹೇಳುತ್ತದೆ. ಹೀಗೆ ಸೂಕ್ಷ್ಮ ವಿಚಾರಮಾಡಬೇಕಾದರೆ ವಿವಿಕ್ತದೇಶಸೇವಿತ್ವವೂ, ಜನಸಮುದಾಯಗಳಲ್ಲಿ ಕಾಲಕಳೆಯಬಾರದೆಂಬ ಬುದ್ಧಿಯೂ ಅವಶ್ಯವಾಗಿ ಬೇಕು (ಗೀ. ೧೩–೧೧). ಗುಪ್ತಸ್ಥಾನದಲ್ಲಿ ಏಕಾಂತವಾಸಮಾಡಿಕೊಂಡು, ಇಂದ್ರಿಯನಿಗ್ರಹಮಾಡಿ, ಆಶೆಗಳನ್ನೆಲ್ಲ ತೊರೆದು, ಐಹಿಕಲಂಪಟಗಳನ್ನು ಬಿಟ್ಟು, ಆತ್ಮಧ್ಯಾನನಿರತನಾದರೆ ಮಾತ್ರ (ಗೀ. ೬-೧೦) ಆತ್ಮಜ್ಞಾನವಾಗಿ ಆತ್ಮತೃಪ್ತಿಯೂ ಆತ್ಮಸುಖವೂ ಸ್ಫುರಿಸುವವೆಂದು ಹೇಳಬಹುದು (ಗೀ. ೫-೨೪). ಹೀಗೆ ಮಾಡುತ್ತಹೋದ ಸಾಧಕನಿಗೆ ಲಭಿಸತಕ್ಕ ವಸ್ತುವೇ ಲಭಿಸಿದಂತಾಗಿ, ಅವನು ಮಾಡತಕ್ಕ ಕಾರ್ಯವೇ ಈ ತ್ರಿಭುವನದಲ್ಲಿ ಉಳಿಯಲಾರದು (ಗೀ. ೩-೧೭). ಅಪರೋಕ್ಷಾನು ಭೂತಿಯೆಂಬ ಶಂಕರಾಚಾರ್ಯರ ಗ್ರಂಥದಲ್ಲಿ ಹೇಳಿದ ಸಾಧನೆಯ ಮೆಟ್ಟಲು ಗಳನ್ನು ನೋಡಿದರೂ ಇದೇ ಮಾತು ಲಕ್ಷಕ್ಕೆ ಬಾರದಿರದು. "ಅಹಂ ಬ್ರಹ್ಮಾಸ್ಮಿ" ಎಂಬ ಮಂತ್ರವನ್ನು ಅಂತರ್ಮುಖನಾಗಿ ವಿಚಾರಮಾಡಹತ್ತಿದನೆಂದರೆ ಅವನಿಗೆ ಆತ್ಮಸಾಕ್ಷಾತ್ಕಾರವಾಗುವುದೆಂದು ಅಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ.

---

## ೧೨
# ವೇದಾಂತವೂ ಉತ್ಕ್ರಾಂತಿವಾದವೂ

( ಮುಂದುವರಿದದ್ದು )

ವಿಕಾಸವಾದದಿಂದ ಎಲ್ಲ ಧರ್ಮಗಳೂ ಹಿಮ್ಮೆಟ್ಟಿರುವವೆಂದು ಈ ಮೊದಲೇ ಹೇಳಿದೆ. ಅದಕ್ಕೆ ವೇದಾಂತವಾದರೂ ಅಪವಾದವಾಗಿಲ್ಲ. ವೇದಾಂತದೊಳಗಿನ ಮುಖ್ಯವಾದ ಮಾತುಗಳೆಂದರೆ:–(೧) ದುಃಖರೂಪಿಯಾದ ಸಂಸಾರಸಾಗರವು, (೨) ಅದರಲ್ಲಿ ಜೀವನ ಗತಾಗತಗಳು (೩) ಕರ್ಮವಾದ ಅಥವಾ ಪಾಪಪುಣ್ಯಗಳಿಂದ ಪುನರ್ಜನ್ಮ, (೪) ಮೋಕ್ಷ, (೫) ಕ್ಷೇತ್ರಾಧೀಶ್ವರನಾದ ಆತ್ಮನು. ಈ ಎಲ್ಲ ಬಾಬುಗಳಲ್ಲಿ ವಿಕಾಸವಾದವು ವೇದಾಂತಕ್ಕೆ ಆಘಾತವನ್ನು ಕೊಡುತ್ತಿದೆಯೆಂಬುದು ಸ್ಪಷ್ಟವಿದೆ. ಬ್ರಹ್ಮಸೂತ್ರದಲ್ಲಿ **तदंतरप्रतिपत्तौ रंहति संपरिष्वक्तः प्रश्ननिरूपणाभ्याम्** । ೩. ೧. ೧. ಎಂಬ ಸೂತ್ರದಿಂದ ಮೊದಲುಮಾಡಿ ಆತ್ಮನ ಗತಾಗತಗಳನ್ನು ಚರ್ಚಿಸಿದ್ದಾರೆ. **बुद्धिकर्मेन्द्रियप्राणपंचकैर्मनसा धिया । शरीरं सप्तदशभिः सूक्ष्मं तल्लिङ्गमुच्यते॥ पंचदशी** ೧-೨೩. ಎಂದರೆ ೫ ಕರ್ಮೇಂದ್ರಿಯಗಳು, ೫ ಜ್ಞಾನೇಂದ್ರಿಯಗಳು, ೫ ಪ್ರಾಣಗಳು, ಮನಸ್ಸು, ಮತ್ತು ಬುದ್ಧಿ ಈ ೧೭ರಿಂದ ಲಿಂಗಶರೀರವಾಗುವುದೆಂದೂ, ಅವುಗಳಿಂದ ಯುಕ್ತನಾದ ಜೀವನು ಸ್ವರ್ಗನರಕಾದಿಗಳನ್ನು ಅನುಭವಿಸುತ್ತಾನೆಂದೂ ನಮ್ಮ ವೇದಾಂತದಲ್ಲಿ ಹೇಳಿದ್ದಾರೆ. "अनादित्वात् संसारस्य" ಎಂಬ ಸೂತ್ರದಲ್ಲಿ ಸಂಸಾರವು ಅನಾದಿಯೆಂದು ವರ್ಣನೆಯಿದೆ. ಸಂಸಾರವು ಅನಾದಿಯಾಗಿರುವುದರಿಂದ ನಮ್ಮ ಸಂಚಿತ ಕರ್ಮವಾದರೂ ಅಪರಿಮಿತವಾಗಿರುವುದು (ಪಂ೧-೩೯) ಆತ್ಮನು ವಸ್ತುತಃ ನಿಃಸಂಗನಾದರೂ ಪ್ರಕೃತಿಯ ಬಲೆಗೆ ಬಿದ್ದು ಅದರ ಗುಣಧರ್ಮಗಳನ್ನನುಭವಿಸುತ್ತ ಈ ಕರ್ಮಚಕ್ರದ ದವಡೆಯೊಳಗೆ ಒಮ್ಮೆ ಸಿಕ್ಕುಬಿದ್ದನೆಂದರೆ ಅವನ ದುಃಖಕ್ಕೆ ಪಾರವೇ ಇಲ್ಲ. ಈ ಕರ್ಮಬಲದಿಂದಲೇ ಜೀವನು ನಾನಾಯೋನಿಗಳಲ್ಲಿ ಜನಿಸಿ (ಗೀ. ೧೩-೨೧) ದುಃಖರೂಪವಾದ ಸಂಸಾರಸಾಗರದಲ್ಲಿ ಈಸಾಡಬೇಕಾಗುವುದು. ಎಂದರೆ ಒಬ್ಬನೇ ಜೀವನು ತನ್ನ ಪುಣ್ಯಾಪುಣ್ಯರೂಪವಾದ ಕರ್ಮಗಳಿಗನುಸರಿಸಿ, ಒಮ್ಮೆ ಪಶುವಾಗಿ ಹುಟ್ಟುವನು, ಒಮ್ಮೆ ಪಕ್ಷಿಯಾಗುವನು, ಒಮ್ಮೆ ಮನುಷ್ಯ

ವೇದಾಂತದೊಳಗಿನ ಮುಖ್ಯ ಕಲ್ಪನೆಗಳು

ನಾಗುವನು. ಉಳಿದ ಜನ್ಮಗಳೆಲ್ಲ ಭೋಗಜನ್ಮಗಳು. ಮನುಷ್ಯಜನ್ಮವೇ ಸಾಧಕ ಜನ್ಮವು. ಆದುದರಿಂದ ಎಷ್ಟೋ ಜನ್ಮಗಳಲ್ಲಿ ಸಂಚಯಮಾಡಿದ ಪುಣ್ಯವಶದಿಂದ ನರದೇಹವು ಪ್ರಾಪ್ತವಾಗುವುದು. ಇಲ್ಲಿ ಪ್ರಯತ್ನಪೂರ್ವಕವಾಗಿ ಪ್ರತಿಯೊಬ್ಬನು ತನ್ನ ಉದ್ಧಾರಮಾಡಿಕೊಳ್ಳುವುದು ಆವಶ್ಯಕವು. ಅಪರಿಮಿತವಾದ ಸಂಚಿತ ಕರ್ಮದಲ್ಲಿ ಯಾವುದು ಫಲೋನ್ಮುಖವಾಗಿರುವುದೋ ಅದು ಮರಣಕಾಲಕ್ಕೆ ಅವನ ಸ್ಮರಣೆಗೆ ಬರುವುದು. ಅದರಿಂದಲೇ ಅವನು ಮುಂದಿನ ಜನ್ಮವನ್ನು ಪಡೆಯುವನು. ಮರಣ ಹೊಂದಿದವರಿಗೆ ದೇವಯಾನ, ಪಿತೃಯಾಣಗಳೆಂದು ಎರಡು ಗತಿಗಳು; ದೇವಯಾನದಿಂದ ಹೋದವರಿಗೆ ಸದ್ಗತಿಯಾಗುವುದು ಪಿತೃಯಾಣದಿಂದ ಹೋದವರು ತಮ್ಮ ಪುಣ್ಯಫಲವನ್ನನುಭವಿಸಿ, ಪುಣ್ಯಸಂಚಯವು ತೀರಿದೊಡನೆ ಮರಳಿ ಕರ್ಮಭೂಮಿಯಮೇಲೆ ಹುಟ್ಟಿಬರುವರು(ಗೀ. ೯-೨೦,೨೧). ಉಳಿದವರು ರೌರವಾದಿಗಳಲ್ಲಿ ಹೊರಳಾಡಿ, ಪಿಶಾಚಮೊದಲಾದ ಯೋನಿಗಳನ್ನನುಭವಿಸಿ ಮತ್ತೆ ಈ ಭೂಮಿಗೇ ಬರಬೇಕಾಗುವುದು. ಉಳಿದ ಪ್ರಾಣಿಗಳೆಲ್ಲ "ಹುಟ್ಟು, ಸಾಯಿ," (**जायस्व म्रियस्व**) ಎಂಬ ಮೂರನೇ ಮಾರ್ಗವನ್ನು ಹಿಡಿಯುವವು. ಹೀಗೆ ಸುಖದುಃಖಗಳ ಅನುಭವಪಡೆಯುವುದಕ್ಕಾಗಿ, ಆ ಆ ಯೋನಿಗಳಿಗನುಸರಿಸಿ ಪ್ರಾಣಿಗಳು ಕರ್ಮಮಾಡುವವು. ಕರ್ಮಮಾಡದವೇಕೆಂದು ಸುಖದುಃಖಗಳನ್ನು ಅನುಭವಿಸುವವು. ಹೀಗೆ ಒಂದು ಆವರ್ತದಿಂದ ಮತ್ತೊಂದು ಆವರ್ತಕ್ಕೆ ನದಿಯೊಳಗಿನ ಕೀಟಗಳು ಹೇಗೆ ಅಲೆದಾಡುತ್ತಿರುವವೋ ಹಾಗೆ ಪ್ರಾಣಿಗಳು ಒಂದು ಜನ್ಮದಿಂದ ಮತ್ತೊಂದು ಜನ್ಮಕ್ಕೆ ಪ್ರವಾಸಮಾಡುತ್ತ, ಸುಖವನ್ನು ಕಾಣದೇ ದುಃಖಬಡುತ್ತಿರುವವು. ಆದರೆ ಆ ಪ್ರಾಣಿಗಳ ಪೂರ್ವಸುಕೃತವಶದಿಂದ ಯಾವನಾದರೊಬ್ಬ ಗುರುವು ಗಂಟುಬಿದ್ದನೆಂದರೆ, ಪಂಚಕೋಶವಿವೇಕವನ್ನು ಬೋಧಿಸಿ, ಅವರನ್ನು ಮುಕ್ತಿಭಾಜರನ್ನಾಗಿ ಮಾಡುವನು."
ಪಂ. ೧. ೩೦-೩೨. ಒಟ್ಟಿನಮೇಲೆ ಅಜ್ಞಾನವೇ ಸಂಸಾರವು, ಜ್ಞಾನವೇ ಮೋಕ್ಷವೆಂದು ವೇದಾಂತದ ಖಂಡಿತವಾದ ಅಭಿಪ್ರಾಯವಿದೆ. ಚಿತ್ತವೇ ಸಂಸಾರವೆಂದು (**चित्तमेव हि संसारः**) ಹೇಳುವ ಮಾತಿನ ಅರ್ಥವಾದರೂ ಇದೇ. ಈ ಜ್ಞಾನವಾಗಬೇಕಾದರೆ ತಮ್ಮ ತಮ್ಮ ವರ್ಣಾಶ್ರಮಧರ್ಮಗಳನ್ನು ಪರಿಪಾಲಿಸಿ, ಸಗುಣೋಪಾಸನೆಯನ್ನು ಮಾಡುವುದು ಅವಶ್ಯವು. ಅದರಿಂದಲೇ ಮುಂದೆ ಜ್ಞಾನಾಧಿಕಾರವು ಬಂದು, ಮನುಷ್ಯನು ಗುರುವಿನ ಕೃಪೆಯಿಂದ ಮೋಕ್ಷವನ್ನು ಪಡೆಯುವನು.

ಆದರೆ ವಿಕಾಸವಾದವು ಸತ್ಯವಿದ್ದರೆ ಈ ಕಲ್ಪನೆಗಳೆಲ್ಲ ಸುಳ್ಳೆಂದು ತಾನಾಗಿಯೇ ಸಿದ್ಧವಾಗುತ್ತದೆ. ಈ ಕಲ್ಪನೆಗಳ ಸತ್ಯಾಸತ್ಯತೆಯನ್ನು ಸಂಪೂರ್ಣವಾಗಿ ಚರ್ಚಿಸುತ್ತ ಕೂಡ್ರುವುದು ನಮ್ಮ ಪ್ರಸ್ತುತ ಉದ್ದೇಶವಲ್ಲ. ಉತ್ಕ್ರಾಂತಿವಾದದ ಸಂಗತಿಗಳು ( facts ) ಸುಳ್ಳೆಂದು ಸಿದ್ಧಮಾಡುವುದು ಸದ್ಯಕ್ಕೆ ಯಾರಿಗೂ ಶಕ್ಯವಿಲ್ಲ. ಆದರೆ ಆ ಸಂಗತಿಗಳಮೇಲೆ ನಿಲ್ಲಿಸಿದ ತತ್ತ್ವಜ್ಞಾನ ಮಂದಿರವು ಮಾತ್ರ ಅಷ್ಟು ಭದ್ರವಾಗಿಲ್ಲೆಂದು ಹೇಳಬಹುದು. ಆದೇಕೆ ? ವಿಕಾಸವಾದವೂ ಕೂಡ ಇನ್ನೂ ಸರ್ವಸಮ್ಮತವಾಗುವಂತೆ ಸಿದ್ಧವಾಗಿಲ್ಲೆಂದು ಹಲವು ಪಂಡಿತರ ಅಭಿಪ್ರಾಯವಿದೆ. ವಿಕಾಸವಾದವು ಮುಖ್ಯವಾಗಿ ಭೂಗರ್ಭಶಾಸ್ತ್ರ, ತುಲನಾತ್ಮಕ ಶಾರೀರಶಾಸ್ತ್ರ, ಮತ್ತು ಒಂದು ಜಾತಿಯಿಂದ ಬೇರೊಂದು ಜಾತಿಯ ಪ್ರಾಣಿಗಳು ಹುಟ್ಟುತ್ತವೆಂದು ಪ್ರತ್ಯಕ್ಷವಾಗಿ ಸಿದ್ಧಮಾಡಿ ತೋರಿಸಿರುವ ಡಾರ್ವಿನ್ನನ ಪ್ರಯೋಗಗಳು, ಇವುಗಳ ಮೇಲೆಯೇ ನಿಂತಿರುವುದೆಂಬುದು ವಾಚಕರಿಗೆ ಈಗ ಮನದಟ್ಟಾಗಿ ಹೋಗಿರಬಹುದು. ಆದರೆ ಇವೆಲ್ಲ ಉಪಪತ್ತಿಗಳಲ್ಲಿ ಒಂದಿಲ್ಲೊಂದು ದೋಷವು ಸಿಕ್ಕುವಂತಿರುವುದರಿಂದ, ಅವು ಎಲ್ಲರ ಚಿಕಿತ್ಸಕಬುದ್ಧಿಯನ್ನೂ ಸಮಾಧಾನಪಡಿಸಲಾರವೆಂದು ಪ್ರಾಯಿಸ್ (Price) ಮೊದಲಾದ ಪಂಡಿತರು ಅಭಿಪ್ರಾಯಪಟ್ಟಿದ್ದಾರೆ. ಭೂಗರ್ಭಶಾಸ್ತ್ರದ ಸಾಕ್ಷಿಯಂತೂ ತೀರ ಅವಿಶ್ವಸನೀಯವಾಗಿದೆಯೆಂದು ಈಗೀಗ ಕೆಲವರು ನಿರ್ಣಯಿಸಹತ್ತಿದ್ದಾರೆ. ಮತ್ತು ಅದರಲ್ಲಿ ತುಸು ತಥ್ಯಾಂಶವಾದರೂ ಇರದೆ ಇಲ್ಲವೆಂದು ಹೇಳಬಹುದು. ಶಿಲೆಗಳೂ ಶಿಲೆಗಳೊಳಗೆ ಪ್ರಾಣಿಗಳ ಅವಶೇಷಗಳೂ ಭೂಗರ್ಭದಲ್ಲಿ ಸಿಕ್ಕುವುದೇನೋ ನಿಜವೇ! ಆದರೆ ಅವು ವಸ್ತುತಃ ಇದೇ ಕ್ರಮದಿಂದಲೇ (ವಿಕಾಸವಾದಿಗಳ ಕ್ರಮಕ್ಕನುಸರಿಸಿಯೇ) ಆಗಿರುವವೆಂಬ ಮಾತು ಮಾತ್ರ ಉತ್ಕ್ರಾಂತಿವಾದಿಗಳ ತಲೆಯೊಳಗಿನದು. ಇದೇ ಮಾತನ್ನು ಬೇರೊಂದು ಉದಾಹರಣೆಯಿಂದ ಸ್ಪಷ್ಟೀಕರಿಸಬಹುದು. ಒಬ್ಬ ಬಡಿಗನು ಕಟ್ಟಿಗೆಯ ನೂರಾರು ಬೇರೆ ಬೇರೆ ತರದ ಗೊಂಬೆಗಳನ್ನು ಮಾಡುವನೆಂದು ತಿಳಿಯುವ. ಅವುಗಳನ್ನೆಲ್ಲ ಅವನು ಒಂದೇ ದಿವಸ ಮಾಡಿರುವುದು ಶಕ್ಯವಿದೆ. ಆದರೆ ಅವುಗಳನ್ನು ಒಂದು ಕ್ರಮಕ್ಕನುಸರಿಸಿ ವ್ಯವಸ್ಥೆಮಾಡಿಟ್ಟು ಒಂದರ ಮೇಲೆ ಮತ್ತೊಂದು ಸುಧಾರಣೆಯಾಗುತ್ತ ಹೋಗಿರುವ ಹಾಗೆ ಕಾಣುವಂತೆ ಮಾಡಬಹುದು. ಮೊದಲು ಸಣ್ಣವು; ಅದರಲ್ಲಿಯೂ ಅಷ್ಟತಿಷ್ಟಾದ ಗೊಂಬೆ

**ವಿಕಾಸವಾದದ ಜೊಳ್ಳುತನವು**

ಗಳು ಮತ್ತುಮೊದಲು. ಆ ಮೇಲೆ ಅದಕ್ಕಿಂತಲೂ ತುಸು ದೊಡ್ಡವಾದವು. ಮುಂದೆ ಅದಕ್ಕೂ ಸುಂದರವಾದವು ಮತ್ತು ದೊಡ್ಡವು. ಹೀಗೆ ನಾವು ನಮ್ಮ ಮನಸಿನಲ್ಲಿದ್ದ ಹಂಚಿಕೆಗೆ ಸರಿಯಾಗುವಂತೆ ಆ ಗೊಂಬೆಗಳನ್ನು ಹೊಂದಿಸಿಡಬಹುದು. ಮತ್ತು ಅಲ್ಲಿಂದ ಮುಂದೆ ಆ ವ್ಯವಸ್ಥೆಯ ಬಲದಿಂದಲೇ ಆ ಬಡಿಗನ ಕಲಾಕೌಶಲ್ಯದಲ್ಲಿ ಕ್ರಮವಾದ ವಿಕಾಸವಾಗುತ್ತ ಹೋಗಿದೆಯೆಂದು ಬೇಕಾದರೆ ಸಿದ್ಧಾಂತವನ್ನೂ ತೆಗೆಯಬಹುದು. ಆದರೆ ಅದು ಸರಿಯಾಗಲಾರದೆಂಬುದಂತೂ ಸ್ಪಷ್ಟವಿದೆ. ಹಾಗೆಯೇ ಈಗಿರುವ ಪ್ರಾಣಿಗಳ ಶರೀರಾಭ್ಯಾಸವನ್ನುಮಾಡಿ. ಅವುಗಳನ್ನು ಒಂದು ಕ್ರಮಕ್ಕನುಸರಿಸಿ ವಿಕಾಸವಾದದ ಉದಾಹರಣೆಯಾಗುವಂತೆ ವ್ಯವಸ್ಥೆಪಡಿಸಿಡುವುದು ಶಕ್ಯವಿದೆಯೆಂದು ಈ ವಿಚಾರದವರ ಅಭಿಪ್ರಾಯವು. ಎಂದರೆ ಈ ಉಪಪತ್ತಿಯೆಲ್ಲ, ನ್ಯಾಯಶಾಸ್ತ್ರದೊಳಗಿನ ಚಕ್ರಕವೆಂಬ ದೋಷಕ್ಕೆ ಗುರಿಯಾಗುತ್ತದೆಂದು ಹೇಳಬಹುದು. ಸಿದ್ಧಮಾಡಬೇಕಾಗಿರುವುದನ್ನೇ ಗೃಹೀತವಾಗಿಟ್ಟುಕೊಳ್ಳುವದಕ್ಕೆ ಚಕ್ರಕದೋಷವೆಂದು ಹೆಸರು. ಬೇರೆ ಬೇರೆ ದೇಶಗಳ ಭೂಗರ್ಭದಲ್ಲಿ ಬೇರೆ ಬೇರೆ ತರದ ಶಿಲೆಗಳ ತರಗಳೂ, ಪ್ರಾಣಿಗಳ ಅವಶೇಷಗಳೂ ಸಿಕ್ಕುವವು, ಅವನ್ನು ನಾವು ಮನಸಿಗೆ ಬಂದಂತೆ ಜೋಡಿಸಿಕೊಂಡು, ಈ ದೇಶದೊಳಗಿನ ಶಿಲೆಗಳು ಮೊದಲಿನವು. ಇಲ್ಲಿಯವು ಅದರ ಮುಂದಿನವು, ಇಲ್ಲಿಯವು ಅದಕ್ಕೂ ಮುಂದಿನವು ಎಂದು ಮೊದಲಾಗಿ ವಿಕಾಸವಾದದ ರೂಪರೇಷೆಗಳನ್ನು ತೋರಿಸಿಕೊಡಬಹುದು. ಆದರೆ ನಿಜವಾಗಿಯೂ ಹಾಗೆ ಉತ್ಕ್ರಾಂತಿಯಾಗುತ್ತ ಹೋಗಿರುವುದೆಂಬುದಕ್ಕೆ ಪ್ರಮಾಣವೇನು ? ಎಂದು ವಿರುದ್ಧಪಕ್ಷದವರು ಕೇಳಿದರೆ ತಪ್ಪೇನು ? ಸೃಷ್ಟಿಯಲ್ಲೇನೂ ಹಾಗೆ ಸರಲವಾಗಿ ವಿಕಾಸವಾದದ ಚಿತ್ರವಂತೂ ಸಿಗುವಂತಿಲ್ಲ. ಎಂದಮೇಲೆ ಈ ವಿಕಾಸವಾದದಲ್ಲಿ ಹುರುಳೇ ಇಲ್ಲೆಂದು ಹೇಳಬಹುದೆಂದು ಅವರ ಅಂಬೋಣ. ಇನ್ನೊಂದು ಉದಾಹರಣೆಯಿಂದ ಇದೇ ಮಾತನ್ನು ಸ್ಪಷ್ಟಗೊಳಿಸುವ. ನಮ್ಮಲ್ಲಿ ಎಷ್ಟೋ ವಸ್ತುಗಳ ಚಿತ್ರಗಳು ಅಸ್ತವ್ಯಸ್ತವಾಗಿ ಬಿದ್ದಿರುವವೆಂದು ಕಲ್ಪಿಸೋಣ. ಆ ಚಿತ್ರಗಳಾದರೂ ಸಂಪೂರ್ಣವಾಗಿ ಇರದೆ ಅವಯವಶಃ ಭಿನ್ನಭಿನ್ನವಾಗಿ ಬಿದ್ದಿರುವವು. ಕೊಡದ ಚಿತ್ರದಲ್ಲಿ ಕೆಲವು ವಕ್ರರೇಖೆಗಳೂ ಕೆಲವು ಸರಳರೇಖೆಗಳೂ ಇರುವವಲ್ಲ. ಅವು ಬೇರೆ ಬೇರೆಯಾಗಿ ಬಿದ್ದಿರಬಹುದು. ಹೀಗೆ ಮನುಷ್ಯನವಲ್ಲದ ಹಲವು ಚಿತ್ರಾವಯವಗಳ ಸಮೂಹದೊಳಗಿಂದ ನಮಗೆ ಬೇಕಾದವನ್ನು ಆರಿಸಿಕೊಂಡು ಮನುಷ್ಯಚಿತ್ರವನ್ನು ಸಿದ್ಧಗೊಳಿಸಬಹುದು. ಅಲ್ಲಿಂದ ಆ ಮೊದಲಿನ ಚಿತ್ರಗಳಲ್ಲಿ ಮನುಷ್ಯನದೂ

ಒಂದಾಗಿರಬೇಕೆಂದು ಹೇಳಿದರೆ ಹೇಗೆ ತಪ್ಪಾಗುವುದು ಶಕ್ಯವಿದೆಯೋ ಹಾಗೆಯೇ ವಿಕಾಸವಾದಿಗಳ ಉಪಪತ್ತಿಯಾದರೂ ತಪ್ಪಾಗಿರುವುದೆಂದು ಕೆಲವು ಪಂಡಿತರು ಪ್ರತಿಪಾದನೆ ಮಾಡಹತ್ತಿದ್ದಾರೆ. ಹೀಗೆ ಭೂಗರ್ಭಶಾಸ್ತ್ರವೊಮ್ಮೆ ಅವಿಶ್ವಸನೀಯುವೆಂದು ಸಿದ್ಧವಾದಮೇಲೆ ತುಲನಾತ್ಮಕ ಶಾರೀರಶಾಸ್ತ್ರವೂ ಕುಂಟಾಗುವ್ರದೆಂದು ಹೇಳಬಹುದು. ದೈಹಿಕಸಾದೃಶ್ಯದಿಂದ ರಕ್ತಸಂಬಂಧವು ಸಿದ್ಧವಾಗಲೇಬೇಕೆಂಬ ಅಬಾಧಿತವಾದ ನಿಯುಮವೇನೂ ಇಲ್ಲೆಂದು ಈಗಿನ ಜೀವಶಾಸ್ತ್ರಗಳ ಸಿದ್ಧಾಂತವಿದೆ. ( Structural similarity does not always indicate blood-relationship ) ಸಾವಿರಾರು ಪ್ರಾಣಿಗಳ ದೇಹಗಳು ಸದೃಶ ಅಥವಾ ಸಮಾನವಾಗಿದ್ದರೂ ಪ್ರಾಣಿವರ್ಗ ವ್ಯವಸ್ಥೆಯಲ್ಲಿ (classification of animals) ಅವು ತೀರ ಭಿನ್ನವಾಗಿರುವವೆಂದು ಕಂಡುಬಂದಿದೆ. ಅದರಂತೆಯೇ ಒಂದು ಜಾತಿಯ ಪ್ರಾಣಿಗಳಿಂದ ಮತ್ತೊಂದು ಜಾತಿಯ ಪ್ರಾಣಿಗಳು– ಪರಿಸ್ಥಿತಿ, ತನ್ನ ದೈಹಿಕಸ್ಥಿತಿ, ಮತ್ತು ಉಪಯೋಗ-ನಿರುಪಯೋಗಗಳಿಂದ– ಹುಟ್ಟುತ್ತವೆಂದು ಡಾರ್ವಿನ್ನನು ತೋರಿಸಿದ್ದು ಅಷ್ಟು ಸಮರ್ಪಕವಾಗಿಲ್ಲೆಂದು ಎಲ್ಲ ಶಾಸ್ತ್ರಜ್ಞರು ಒಪ್ಪಿಕೊಂಡಿದ್ದಾರೆ. ತಾನು ಹುಡುಕಿರುವೆನೆಂದು ತಿಳಿದುಕೊಂಡ ಡಾರ್ವಿನ್ನನ ಕಾರಣಗಳು ಇನ್ನೂವರೆಗೆ ಅಜ್ಞಾತವಾಗಿಯೇ ಉಳಿದಿವೆಯೆಂದು ಇವರ ಅಂಬೋಣವಿದೆ. ಎಂದಮೇಲೆ ಆ ಆ ಪ್ರಾಣಿಗಳು ಆ ಆ ದೇಶಗಳಲ್ಲಿ ಸಿಗುವುವೆಂಬ ಕಾರಣದಿಂದ ವಿಕಾಸವಾದವನ್ನು ಸಿದ್ಧಮಾಡುವುದೂ ಅಶಕ್ಯವೇ. ಅದರಂತೆಯೇ ಜೀವದ ಉತ್ಪತ್ತಿಯಾದರೂ ಸರಿಯಾಗಿ ವಿವರಿಸಲ್ಪಟ್ಟಿಲ್ಲವೆಂಬುದೂ ನೆನಪಿನಲ್ಲಿಡತಕ್ಕ ಮಾತು. ಇವೆಲ್ಲ ಕಾರಣಗಳಿಂದ ವಿಕಾಸವಾದವು ಎಷ್ಟರಮಟ್ಟಿಗೆ ಸರ್ವಸಮ್ಮತವಾಗಬಹುದೆಂಬ ಮಾತನ್ನು ವಾಚಕರು ತಾವೇ ನಿರ್ಧರಿಸಬೇಕು. ಎರಡನೆಯ ಪ್ರಕರಣದ ಕಡೆಗೆ ವಚನವನ್ನಿತ್ತಂತೆ, ವಿಕಾಸವಾದವಿರೋಧಿಗಳ ಅಭಿಪ್ರಾಯವನ್ನಿಲ್ಲಿ ಸ್ವಲ್ಪದರಲ್ಲಿ ಸಂಗ್ರಹಿಸಿದ್ದೇವೆ.

**ಶಾಸ್ತ್ರೀಯಶೋಧ ಮತ್ತು ಧರ್ಮ**

ಒಂದು ದೃಷ್ಟಿಯಿಂದ ನೋಡಿದರೆ ವಿಕಾಸವಾದವು ಕೂಡ ನಾಸ್ತಿಕವಾಗುವ ಕಾರಣವಿಲ್ಲೆಂದು ತಿಳಿದುಬರುವಂತಿದೆ. ಶಾಸ್ತ್ರೀಯಶೋಧಗಳಿಂದ ಹೊಸ ಸಂಗತಿಗಳು ಉದಯುಕ್ಕೆ ಬಂದವೆಂದರೆ ಅಲ್ಲಿಯುವರೆಗೆ ರೂಢವಾದ ಧಾರ್ಮಿಕಕಲ್ಪನೆಗಳೆಲ್ಲ ತತ್‌ಕ್ಷಣಕ್ಕೆ ಹಿಂದೆ ಬೀಳುವುದು ಸಹಜವಿದೆ. ಆದರೆ ಮುಂದೆ

ಆ ಧರ್ಮವು ಆ ಶೋಧಗಳಿಗನುರೂಪವಾದ ಅರ್ಥಾಂತರವನ್ನೂ ರೂಪಾಂತರವನ್ನೂ ಪಡೆದು ಜನರ ಚಿತ್ತದಲ್ಲಿ ಮತ್ತೆ ತನ್ನ ಸಾಮ್ರಾಜ್ಯವನ್ನು ಸ್ಥಾಪಿಸುವುದು. ಎಂದರೆ ಶಾಸ್ತ್ರೀಯಶೋಧಗಳ ತಾತ್ಕಾಲಿಕ ಪರಿಣಾಮವು ನಾಸ್ತಿಕವಾದವಾಗುವು ದೆಂದು ಕಂಡುಬಂದರೂ, ವಸ್ತುತಃ ಅವುಗಳಿಂದ ಧರ್ಮಕ್ಕೆ ಹಿತವೇ ಆಗುತ್ತ ದೆಂದು ಹೇಳಬಹುದು. ಧರ್ಮಸ್ಥಾಪನೆಯಾಗಿ ಎಷ್ಟೋ ವರುಷಗಳು ಕಳೆದು ಹೋದವೆಂದರೆ ಅದರ ಸುತ್ತು ಅನಾವಶ್ಯಕವಾದ ಕಸಕಡ್ಡಿಗಳು ಬೆಳೆದು ಅದರ ನಿಜವಾದ ಅರ್ಥವು ಜನರಿಗೆ ತಿಳಿಯುವುದು ಕಠಿಣವಾಗಹತ್ತುತ್ತದೆ. ಆದರೆ ಇಂತಹ ಅನಾವಶ್ಯಕವಾದ ಕಸಕಡ್ಡಿಗಳನ್ನು ತೆಗೆದುಹಾಕಿ, ಸಾಣಿ ಹಿಡಿದು, ಅದಕ್ಕೆ ಪೂರ್ವದ ಹೊಳಪು ಕೊಟ್ಟು, ಅದರ ಉನ್ನತಿಯನ್ನು ಸಾಧಿಸುವ ಮುಖ್ಯವಾದ ಕರ್ತೃವೇ ಈ ಶೋಧಗಳೆಂದು ಹೇಳಬಹುದು. ನಾಸ್ತಿಕತೆಯ ಹೊಸ ಹೊಸ ಆಘಾತಗಳು ಬಿದ್ದಂತೆ ಧರ್ಮವು ಹೆಚ್ಚೆಚ್ಚು ಬಲಿಷ್ಠವಾಗಬೇಕಾ ಗುವುದು. ಇಲ್ಲವಾದರೆ ಅದು ವಿಚಾರಗಳ ಜೀವನಕಲಹದಲ್ಲಿ ಬದುಕಿರುವುದೇ ಶಕ್ಯವಿಲ್ಲ. ಕಿಂಬಹುನಾ, ಧರ್ಮದ ಪ್ರಗತಿಯಾಗಬೇಕಾದರೆ ನಾಸ್ತಿಕರ ಇಂತಹ ಕ್ಷಣಿಕಜಯವು ಅವಶ್ಯವಾಗಿ ಸಂಭವಿಸಲೇಬೇಕು. ಹೊಸ ಹೊಸ ಕಾಲಕ್ಕೆ ಹೊಸಪರಿಯ ಸಿಂಗರವಂತೂ ಅತ್ಯವಶ್ಯವಾಗಿದೆಯೆಂಬುದನ್ನು ನಾವು ಒತ್ತಿಹೇಳಬೇಕಾಗಿಲ್ಲ. ಇನ್ನು ಈ ಹೊಸ ಕಾಲವೇ ಶಾಸ್ತ್ರೀಯಶೋಧಗಳ ಕ್ಷಣಿಕಜಯದಿಂದುಂಟಾಗುವುದೆಂದರೆ ತಪ್ಪಾಗಲಿಕ್ಕಿಲ್ಲ. ಯಾವನಾದರೊಬ್ಬ ಪಂಡಿತನು ತನ್ನ ಶೋಧಗಳಿಂದ ಜಗತ್ತಿನ ಕಣ್ಣುಗಳನ್ನೆಲ್ಲ ಕುಕ್ಕಿಸಿಬಿಡುವನು. ಅದರಿಂದ ರೂಢವಾಗಿದ್ದ ಧಾರ್ಮಿಕ ಕಲ್ಪನೆಗಳೊಳಗಿನ ಹುಳುಕುಗಳು ಎಲ್ಲರ ಕಣ್ಣಿಗೂ ಕಾಣಹತ್ತುವವು. ಸ್ವಾಭಾವಿಕವಾಗಿಯೇ ಜನರು ಇದರಿಂದ ಅಸಂ ತುಷ್ಟರಾಗುವರು. ಮತ್ತು ಅಸಂತುಷ್ಟತೆಯೇ ಪ್ರಗತಿಯ ಮೂಲವಾಗಿರುವುದ ರಿಂದ ಅಸಂತುಷ್ಟಜನರು ತಮ್ಮ ಅಸಂತೋಷತೆಯ ನಾಶಕ್ಕಾಗಿ ವಿಚಾರಮಾಡ ಹತ್ತುವರು. ಅಲ್ಲಿಯವರೆಗೆ ಅಂಧವಿಶ್ವಾಸದಿಂದ ನಂಬುತ್ತ ಬಂದಿದ್ದ ಕಲ್ಪನೆ ಗಳಲ್ಲಿ ಜನರ ಅವಿಶ್ವಾಸವು ಬೆಳೆಯುವುದರಿಂದ, ಅವುಗಳ ನಿಜವಾದ ಮರ್ಮವೇ ನೆಂಬುದನ್ನು ಜನರು ತಾವಾಗಿಯೇ ಸ್ವತಂತ್ರರೀತಿಯಿಂದ ವಿಚಾರಮಾಡಹತ್ತು ವರು. ಆ ವಿಚಾರದಿಂದಲೇ ಧರ್ಮಜಾಗೃತಿಯಾಗಿ ಆ ಕಾಲಕ್ಕೆ ಬೇಕಾದ ಸಿಂಗರವನ್ನು ಹೊಂದಿದ ಧರ್ಮವು ಉದಯಕ್ಕೆ ಬರುವುದು. ಇದೇ ರೀತಿ

ಯಿಂದ ಡಾರ್ವಿನ್ನನ ಶೋಧಗಳ ತಾತ್ಕಾಲಿಕ ಪರಿಣಾಮವೂ ನಾಸ್ತಿಕವಾಯಿತೆಂಬುದನ್ನು ಮೇಲೆ ತೋರಿಸಿದ್ದೇವೆ. ಅದರಿಂದ ಕ್ರಿಸ್ತ ಜನರ ಧಾರ್ಮಿಕ ಕಲ್ಪನೆಗಳಿಗೆ ಬಲವಾದ ಆಘಾತವು ಸಿಕ್ಕು, ಅವರು ಧರ್ಮದ ನಿಜವಾದ ಬೀಜಗಳೇನೆಂದು ವಿಚಾರಮಾಡಹತ್ತಿದರು. ಬೈಬಲ್ಲಿಗೆ ಬೇರೆ ಅರ್ಥವನ್ನು ಹಚ್ಚುವ ಹಲವು ಪ್ರಯತ್ನಗಳು ಮಾಡಲ್ಪಟ್ಟವು. ವಸ್ತುತಃ ಬೈಬಲ್ಲು ವಿಕಾಸವಾದಕ್ಕೆ ವಿರುದ್ಧವಾಗಿಲ್ಲೆಂದು ಹಲವರು ಪ್ರತಿಪಾದನೆ ಮಾಡಹತ್ತಿದರು. ಕ್ರಿಸ್ತಧರ್ಮ ಮತ್ತು ವಿಕಾಸವಾದಗಳ ನಿಜವಾದ ಸಂಬಂಧವನ್ನು ಚರ್ಚಿಸುವ ನೂರಾರು ಗ್ರಂಥಗಳು ಪ್ರಸಿದ್ಧವಾಗಹತ್ತಿದವು. ವಿಸ್ಖಲಿತವಾದ ಧರ್ಮವು ಮತ್ತೆ ಶಕ್ತಿಸಂಪನ್ನವಾಗುತ್ತ ನಡೆಯಿತು. ಉತ್ಕ್ರಾಂತಿವಾದಕ್ಕನುಗುಣವಾದ ಕ್ರಿಸ್ತಧರ್ಮದ ರೂಪಾಂತರವು ಉದಯಕ್ಕೆ ಬಂತು. ಮತ್ತು ಇಂತಹ ಧರ್ಮದ ಅನುಯಾಯಿಗಳು ದೇಶದೊಳಗೆ ಅಲ್ಲಲ್ಲಿ ಕಾಣಹತ್ತಿದರು.

ಇದು ಕ್ರಿಸ್ತ ಧರ್ಮಕ್ಕಷ್ಟೇ ಸಂಬಂಧಿಸಿದ ಮಾತಲ್ಲ. ಸದ್ಯಕ್ಕಿನ ನಮ್ಮ ಹಿಂದೂ ಧರ್ಮವಾದರೂ ಇಂತಹ ರೂಪಾಂತರವನ್ನು ಹೊಂದಬೇಕಾಗಿದೆ. ಉಪನಿಷತ್ಕಾಲದ ಪವಿತ್ರವಾದ ಧರ್ಮವು ಕಾಲಾಂತರದಿಂದ ಹಸಗೆಟ್ಟು ಹೋಗಿರುವುದರಿಂದ ಭೌತಿಕಶಾಸ್ತ್ರಗಳ ಈ ಯುಗದಲ್ಲಿ ಅದರ ನವೀನರೂಪಾಂತರವು ಆಗಲೇಬೇಕಾಗಿರುವುದು. ಪಾಶ್ಚಾತ್ಯ ಸಂಸ್ಕೃತಿಯ ತಿರುಗಣಿಮಡದಲ್ಲಿ ಸಿಕ್ಕ ನಮ್ಮ ಸನಾತನಧರ್ಮವು ಇಷ್ಟು ದಿನಗಳವರೆಗೆ ಮರಣಪಥವನ್ನೇ ಹಿಡಿದಂತೆ ಕಾಣುತ್ತಿತ್ತು. ಭೌತಿಕ ಶಾಸ್ತ್ರಗಳ ಶೋಧಗಳಿಂದ ಉಪನಿಷತ್ ಸಿದ್ಧಾಂತಗಳೆಲ್ಲ ಸುಳ್ಳೆಂದು ಜನರು ಸ್ವಾಭಾವಿಕವಾಗಿಯೇ ತಿಳಿಯಹತ್ತಿದರು. “ಮೂಗು ಹಿಡಿದುಕೊಂಡು ಕೂಡುವ ಜನರಿಂದೇನಾಗಬೇಕಾಗಿದೆ ?” ಎಂದೆನ್ನುವ ಕುಹಕರ ಸುಳಿದಾಟವು ಹೆಚ್ಚಾಯಿತು. ಅದೇಕೆ ? ಉಪನಿಷದ್ಧರ್ಮವೇ ಭಾರತೀಯರ ಅವನತಿಗೆ ಮೂಲಕಾರಣವೆಂದು ಹಲವು ತಿಳಿಗೇಡಿಗಳು ಪ್ರತಿಪಾದಿಸಹತ್ತಿದರು. ನಮ್ಮಲ್ಲಿ ಶ್ರೇಷ್ಠರಾದ ಜನರೆಲ್ಲ ಧರ್ಮಭ್ರಾಂತಿಗೆ ಮರುಳಾಗಿ, ಪರಲೋಕದ ಮೇಲೆಯೇ ತಮ್ಮ ದೃಷ್ಟಿಯನ್ನಿಟ್ಟದ್ದರಿಂದ, ಭಾರತೀಯರು ಲೌಕಿಕದಲ್ಲಿ ಬಲು ಹೀನದೆಸೆಗೆ ಈಡಾಗಿರುವರೆಂಬ ಕಲ್ಪನೆಯು ರೂಢವಾಗಹತ್ತಿತು. ಈ ಜಗತ್ತೇ ಸುಳ್ಳೆನ್ನುವ ಜನರಿಗೆ ಐಹಿಕೈಶ್ವರ್ಯವು ಪ್ರಾಪ್ತವೆಂತಾಗಬೇಕೆಂದು ಕೆಲವರು

ಹಿಂದೂ ಧರ್ಮದ ಪುನರುದ್ಧಾರ

ಪ್ರಶ್ನಿಸಮಾಡಹತ್ತಿದರು. ಆದರೆ ನಾಸ್ತಿಕಪುರುಷನ ಇಂತಹ ಕ್ಷಣಿಕ ಚಲ್ಲಾಟವು ಬಹುಕಾಲ ನಡೆಯಲಾರದೆಂಬುದು ಸ್ಪಷ್ಟವಿದೆ. ಸುಶಿಕ್ಷಿತರು ಇದರ ಬಗ್ಗೆ ಸ್ವತಂತ್ರವಾಗಿ ವಿಚಾರಮಾಡಹತ್ತಿದರು. ಸನಾತನ ಧರ್ಮದ ವಸ್ತ್ರಗಳು ಜೀರ್ಣವಾಗಿರುವವೆಂದೂ ಅವನ್ನು ನಾವು ಬದಲಿಸಲೇಬೇಕೆಂದೂ ಅವರಿಗೆ ತೋಚಹತ್ತಿತು. ನಮ್ಮ ಧರ್ಮಪುರುಷನ ಆತ್ಮವು ಅಮರವೂ ಶಾಶ್ವತವೂ ಇರುವುದೆಂಬ ನಿಶ್ಚಯವು ಮತ್ತೆ ನಮ್ಮೆಲ್ಲರಲ್ಲಿ ಒಡಮೂಡಹತ್ತಿತು. ಭೌತಿಕ ಶಾಸ್ತ್ರಗಳನ್ನು ಎದುರಿಸುವ ನಿಜವಾದ ಹಂಚಿಕೆಯು ಅವುಗಳ ತಿರಸ್ಕಾರವಲ್ಲ. ಉಪೇಕ್ಷೆಯೂ ಅಲ್ಲ. ಸಾವಧಾನದಿಂದ ಅವುಗಳನ್ನು ಅಭ್ಯಾಸಮಾಡಿ, ಅವುಗಳಲ್ಲಿ ತಥ್ಯಾಂಶವೇನಿರುವುದೆಂಬುದನ್ನು ನಿರಾಗ್ರಹದಿಂದ ವಿಚಾರಿಸುವುದೇ ನಮ್ಮ ಸದ್ಯಕ್ಕಿನ ಕರ್ತವ್ಯವೆಂದು ಎಲ್ಲರಿಗೂ ಮನದಟ್ಟಾಗಬೇಕಾಗಿದೆ. ಈ ರೀತಿಯಿಂದ ವಿಚಾರಿಸಿದರೆ ಭೌತಿಕಶಾಸ್ತ್ರಗಳ ಸಿದ್ಧಾಂತಗಳಿಂದ ನಾವು ಬೆದರುವ ಕಾರಣವಿಲ್ಲೆಂದೂ, ಅವುಗಳನ್ನೂ ಕೂಡ ನಾವು ಅಭ್ಯಾಸಮಾಡಿ, ನಮ್ಮ ಐಹಿಕೈಶ್ವರ್ಯವನ್ನು ಅನುಭೋಗಿಸಿಯೂ ಕೂಡ ಉಪನಿಷತ್ತುಗಳಲ್ಲಿ ವರ್ಣಿಸಿದ ಅಮೃತತ್ವವನ್ನು ಪಡೆಯಬಹುದೆಂದೂ ಈಗಿನವರು ವಿಶ್ವಾಸವಿಡಬೇಕಾಗಿದೆ. "ಕುರ್ವನ್ನೇವೇಹ ಕರ್ಮಾಣಿ" ಎಂದು ಇದೇ ಜಗತ್ತಿನಲ್ಲಿದ್ದುಕೊಂಡು, ಕುಟುಂಬಹಿತ, ಗ್ರಾಮಹಿತ, ಸಮಾಜಹಿತ, ದೇಶಹಿತ, ಜಗದ್ಧಿತಗಳನ್ನು ಸಾಧಿಸಿ ಆತ್ಮಹಿತವನ್ನು ಗಳಿಸುವುದು ಶಕ್ಯವಿದೆ, ಹಾಗೆ ಮಾಡುವುದೇ ಎಲ್ಲರ ಕರ್ತವ್ಯವು, ಎಂದು ಮೊದಲಾಗಿ ಈಗಿನವರು ಜಪಿಸಹತ್ತಿದ್ದಾರೆ. ಆ ಆ ದೇಶದ ಕಾಲಸ್ಥಿತಿಗಳಿಗನುಸರಿಸಿ ನಾವು ಮಾಡತಕ್ಕದ್ದನ್ನು ಮಾಡಬೇಕು, ಇಲ್ಲವಾದರೆ ನಾವು ಬದುಕಿ ಉಳಿಯುವ ಆಸೆಯಿಲ್ಲೆಂದು ಈಗಿನ ಋಷಿಗಳು ಕಂಡು ಹಿಡಿದಿದ್ದಾರೆ. ಬಹಳೇನು? ಉಪನಿಷದ್ಧರ್ಮವು ಭೌತಿಕಶಾಸ್ತ್ರಗಳಿಗನುಗುಣವಾಗಿಯೂ, ಈಗಿನ ಸುಧಾರಣೆಗೆ ಅನುರೂಪವಾಗಿಯೂ ರೂಪಾಂತರವನ್ನು ಪಡೆದು ಚಿರಕಾಲ ಬೆಳಗಬೇಕೆಂದು ಎಲ್ಲರ ಹಂಬಲವಿರುವದೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಆದುದರಿಂದಲೇ ಭೌತಿಕಶಾಸ್ತ್ರಜ್ಞರು ಭೌತಿಕಶಾಸ್ತ್ರ ಮತ್ತು ಧರ್ಮಗಳ ನಡುವಿನ ಯುದ್ಧವನ್ನು ನಿರೀಕ್ಷಿಸಿ ಈ ರೀತಿಯಾಗಿ ನಿರ್ಣಯಿಸಿದ್ದಾರೆ; "ನಾವು

ಸೇಶ್ವರ ವಿಕಾಸವಾದವು

ಸಾಕಷ್ಟು ಆಳವಾಗಿ ವಿಚಾರಮಾಡಿದೆವೆಂದರೆ, ಎಲ್ಲ ಧರ್ಮಕ್ಕೆ ತಳಹದಿಯಾದ ದೇವರ ಅಸ್ತಿತ್ವದಲ್ಲಿ ವಿಶ್ವಾಸವನ್ನಿಡಲೇಬೇಕಾಗುವುದು. ಕಿಂಬಹುನಾ, ಭೌತಿಕಶಾಸ್ತ್ರವು ಧರ್ಮಕ್ಕೆ ಸಹಾಯಕರವಾಗಿರುವುದಲ್ಲದೆ ವಿರುದ್ಧವಾಗಿಲ್ಲ"ೆಂದು ಲಾರ್ಡ ಕೆಲ್‌ವಿನರು ಹೇಳಿದ್ದಾರೆ. ಭೌತಿಕಶಾಸ್ತ್ರಗಳಲ್ಲಿ ಪ್ರಗತಿಯಾದಂತೆ ದೇವರ ವಿಷಯಕ್ಕಿದ್ದ ನಮ್ಮ ವಿಶ್ವಾಸವೂ ಭಕ್ತಿಯೂ ಬೆಳೆಯುತಕ್ಕದ್ದೆಂದು ಇವರ ಅಭಿಪ್ರಾಯ. ನಾವು ಮಾಡಿದ ಶೋಧಗಳೆಲ್ಲ, ಅವುಗಳ ಜನಕನಾದ ಆದೇವದೇವೇಶನ ಮಹತಿಯನ್ನೇ ಸೂಚಿಸುವವೆಂದು ಹೇಳಬಹುದು. ಎಂತೆಯೇ ಡಾರ್ವಿನ್ನನೂ ಕೂಡ "ಜಾತಿಗಳ ಉತ್ಪತ್ತಿ"ಯೆಂಬ ಪುಸ್ತಕದಲ್ಲಿ ಪ್ರಾಣಿಗಳ ಉತ್ಕ್ರಾಂತಿಯನ್ನು ಚರ್ಚಿಸಿ ಕೊನೆಗೆ " ಜೀವನದ ಬಗ್ಗೆ ತೆಗೆದ ಈ ನಮ್ಮ ಸಿದ್ಧಾಂತದಲ್ಲಿ ಒಂದು ತರದ ಸೌಂದರ್ಯವೇ ಇರುವುದು ; ಜೀವನದ ಈ ಶಕ್ತಿಗಳನ್ನೆಲ್ಲ ಸೃಷ್ಟಿಕರ್ತನು ಮೊತ್ತಮೊದಲು ಒಂದರಲ್ಲಾಗಲಿ, (ಎಂದರೆ ಜೀವರಸವಲ್ಲಿ) ಅಥವಾ ಹಲವು ಭಿನ್ನರೂಪಗಳಲ್ಲಾಗಲಿ ಇರಿಸಿರಲಿಕ್ಕೆ ಬೇಕು" ಎಂದು ದೇವರ ಮಹತಿಯನ್ನೇ ಒಪ್ಪಿಕೊಂಡಿರುವನು. ಆದುದರಿಂದ ಉತ್ಕ್ರಾಂತಿಯೂ ಕೂಡ ಸೃಷ್ಟಿಕರ್ತನು ತನ್ನ ಕಾರ್ಯಸಾಧನೆಗಾಗಿ ಅನುಸರಿಸುತ್ತಿರುವ ಹಂಚಿಕೆಯದೊಂದು ಭಾಗ ಮಾತ್ರವೇ ಇರಬಹುದೆಂದು ಹೇಳಿದರೆ ತಪ್ಪೇನು ? ಸರ್ವಶಕ್ತನಾದ ಸೃಷ್ಟಿಕರ್ತನು ತನ್ನ ಹೇತುಸಾಧನೆಗಾಗಿ ಅನಂತಉಪಾಯಗಳನ್ನು ಯೋಚಿಸಬಹುದು. ಅವುಗಳಲ್ಲಿ ಉತ್ಕ್ರಾಂತಿವಾದವೇ ಅವನು ಆರಿಸಿ ತೆಗೆದ ಹಂಚಿಕೆಯೆಂದು ಕಲ್ಪಿಸಿದರೆ ನಾಸ್ತಿಕವಾದದ ತಲೆಯನ್ನೇ ಮೆಟ್ಟಿ ಹಾರಿದಂತಾಗುತ್ತದೆಂದು ಹಲವು ಜನರು ಹೇಳುತ್ತಿದ್ದಾರೆ. ತಮ್ಮ "ಉತ್ಕ್ರಾಂತಿವಾದವೂ ಕ್ರಿಸ್ತಧರ್ಮವೂ" ಎಂಬ ಪುಸ್ತಕವಲ್ಲಿ ಡಾ. ಗೋಲ್ಡಸ್ಮಿಥರು (Goldsmith) ಈ ದೃಷ್ಟಿಯನ್ನು ಮುಂದೆ ಮಾಡಿರುವರು.

ಮಾಯಾಪಿಶಿಷ್ಟನಾದ ಈಶ್ವರನು

ನಮ್ಮ ವೇದಾಂತದ್ದೊಂದು ಭಾಗದಲ್ಲಿ ಇದೇ ತರದ ವರ್ಣನೆಯನ್ನು ಕಾಣಬಹುದು. ತಮೋಗುಣಮುಖ್ಯವಾದ ಪ್ರಕೃತಿಯೇ ಈ ಜಗತ್ತಿನ ಉಪಾದಾನ ಕಾರಣವೆಂದೂ, ಆ ಪ್ರಕೃತಿಯಿಂದಲೇ ನಿಮಿತ್ತ ಕಾರಣನಾದ ಈಶ್ವರನು ಜೀವನಭೋಗಕ್ಕಾಗಿ ಆಕಾಶಾದಿ ಪಂಚಮಹಾಭೂತಗಳನ್ನು ಹುಟ್ಟಿಸಿದನೆಂದೂ

ಪಂಚದಶಿಯಲ್ಲಿ (೧·೧೮) ಹೇಳಿದ್ದಾರೆ. ಸರ್ವಜ್ಞೇಶ್ವರನ ಆತ್ಮಭೂತಗಳಾದ, ಅವಿದ್ಯಾಕಲ್ಪಿತವಾದ ನಾಮರೂಪಗಳೇ ಸಂಸಾರಪ್ರಪಂಚಕ್ಕೆ ಬೀಜಗಳಾಗಿ, ಈಶ್ವರನ ಮಾಯಾಶಕ್ತಿಯೆಂದೂ ಪ್ರಕೃತಿಯೆಂದೂ ಕರೆಯಲ್ಪಡುತ್ತವೆಂದೂ, ಅವುಗಳಿಂದಲೇ ಈಶ್ವರನು ಈ ಜಗತ್ತನ್ನು ನಿರ್ಮಾಣಮಾಡುವನೆಂದೂ ಬ್ರಹ್ಮಸೂತ್ರದಲ್ಲಿ (೨·೧·೧೪) ಹೇಳಿದೆ. "ನಾಮರೂಪಗಳನ್ನು ವಿಸ್ತರಿಸುವೆನು" (नामरूपे व्याकरवाणि । छा. ६·३·२.) "ಧೀರನು ಎಲ್ಲ ರೂಪಗಳನ್ನು ಚಿಂತನೆಮಾಡಿ, ಹೆಸರಿಟ್ಟು ಅವುಗಳನ್ನು (ಆ ಆ ಹೆಸರಿನಿಂದ) ಕರೆಯಲಾರಂಭಿಸಿದನು." (सर्वाणि रूपाणि विचित्य धीरो नामानि कृत्वाऽभिवदन्यदास्ते । तै. आ. ३·१२·७) ಎಂದು ಮೊದಲಾಗಿ ನಮ್ಮ ಉಪನಿಷತ್ತುಗಳಲ್ಲಿ ಈಶ್ವರಸೃಷ್ಟಿಯ ವರ್ಣನೆಯನ್ನು ಮಾಡಿದ್ದಾರೆ. ಇವುಗಳ ಮೇಲಿಂದ ಛಾಂದೋಗ್ಯದಲ್ಲಿ (೬·೧·೪-೭) ವಿಕಾರಜಾತವೆಲ್ಲ ಅನೃತವಾದುದೆಂದೂ, ನಾಮಮಾತ್ರವಾದುದೆಂದೂ, ನಾಮಭಿನ್ನವಾದ ವಿಕಾರವೆಂಬೊಂದು ಪರಮಾರ್ಥವಸ್ತುವು ಇಲ್ಲವೆಂದೂ ಹೇಳಿದ್ದರ ರಹಸ್ಯವು ಒಡೆದು ಕಾಣುವಂತಿದೆ. ಕಾರ್ಯಕಾರಣಗಳ ಅನನ್ಯತ್ವವೇ ಇದಕ್ಕೆ ಕಾರಣವೆಂದು ಶ್ರೀಶಂಕರಾಚಾರ್ಯರು ಅರ್ಥಮಾಡಿದ್ದಾರೆ. ಅದೇನೇ ಇರಲಿ; ಈ ಸೃಷ್ಟಿಯೆಲ್ಲ ಮಾಯಿಕವೆಂಬುದು ಶ್ವೇತಾಶ್ವತರದಲ್ಲಿ ಸ್ಪಷ್ಟವಾಗುವಂತಿದೆ. "ಮಹೇಶ್ವರನೇ ಮಾಯಾವಿಯು; ಪ್ರಕೃತಿಯೇ ಮಾಯೆಯೆಂದು ತಿಳಿಯಬೇಕು;" "ಅದರಿಂದಲೇ ಮಾಯಾವಿಯು ಈ ಸೃಷ್ಟಿಯನ್ನು ಹುಟ್ಟಿಸುತ್ತಾನೆ." (ಶ್ವೇ. ೪.೯·೧೦) ಸೂಕ್ಷ್ಮವಾದ ಪಂಚಮಹಾಭೂತಗಳಿಂದಲೇ ಪಂಚೀಕರಣಕ್ರಿಯೆಯ ಪರಿಣಾಮವೆಂದು ಈ ಸ್ಥೂಲಜಗತ್ತು ಗೋಚರವಾಯಿತೆಂದು ಪಂಚದಶಿಯಲ್ಲಿ (೧·೨೬-೨೭) ಹೇಳಿದೆ. ಈ ಸೃಷ್ಟಿಯು ಈಶ್ವರನ ಸಂಕಲ್ಪದಿಂದಾಯಿತೆಂದು ತೈತ್ತಿರೀಯೋಪನಿಷತ್ತಿನಲ್ಲಿ ಬರೆದಿದೆ. (सोऽकामयत बहुस्यां प्रजायेयेति । तै. ब्रह्मानंदवल्ली अनुवाक ६) ಈಕ್ಷಣೆಯಿಂದಾಯಿತೆಂದು ಐತರೇಯ ಮತ್ತು ಛಾಂದೋಗ್ಯಗಳಲ್ಲಿ ವರ್ಣನೆಯುದೆ. (स ऐक्षत लोकान्नु सृजा इति । ऐ. प्रथमखण्ड १, तदैक्षत बहुस्यां प्रजायेयेति । छा. ६.२.३.) ಲೋಕಗಳನ್ನೂ ಲೋಕಪಾಲರನ್ನೂ ಈಕ್ಷಣಾಪೂರ್ವಕವಾಗಿಯೇ ಈಶ್ವರನು ಹುಟ್ಟಿಸಿದನೆಂದು ಅಲ್ಲಿಯೇ ಮುಂದೆ ವಿವರಿಸಿದೆ. ಆನಂದಮಯ ಈಶ್ವರನೇ ಬಹುತ್ವವನ್ನು ಹೊಂದಬೇಕೆಂದು

ಅತ್ತಿತ್ತ ನೋಡಿದನೆಂದು ಪಂಚದಶಿಯಲ್ಲಿ (೬.೧೯೮) ಉಲ್ಲೇಖವಿದೆ. ಈ ಸಕಲಸೃಷ್ಟಿಯೊಳಗಿನ ಕೆಲವು ಭಾಗವು ಈಶ್ವರನಿಂದ ಕಲ್ಪಿತವಾಯಿತೆಂದೂ, ಜಾಗ್ರದಾದಿ ವಿಮೋಕ್ಷಾಂತ ಸಂಸಾರವು ಜೀವಕಲ್ಪಿತವೆಂದೂ ಐತರೇಯದ ಆಧಾರ ದಿಂದ ಪಂಚದಶಿಯಲ್ಲಿ ಬರೆದಿದೆ. (೬.೨೧೩) ಇದನ್ನೇ ವಿದ್ಯಾರಣ್ಯರು ಈಶ ದ್ವೈತವೆಂದೂ ಜೀವದ್ವೈತವೆಂದೂ ಮೂರನೆಯ ನಾಲ್ಕನೆಯ ಅಧ್ಯಾಯಗಳಲ್ಲಿ ಚರ್ಚಿಸಿದ್ದಾರೆ. ಇದೇ ಮಾತನ್ನು ಶ್ರೀಗೌಡಪಾದರ ಮಾಂಡೂಕ್ಯಕಾರಿಕೆಯ ಲ್ಲಿಯೂ ಕಾಣಬಹುದು. (**जीवं कल्पयते पूर्वं ततो भावान् पृथग्विधान् । बाह्यानाध्यात्मिकांश्चैव यथाविद्यस्तथास्मृतिः ॥ ೨.೧೬**).

ಪಂಚಮಹಾಭೂತಗಳು, ಮತ್ತು ಪ್ರಾಣಿಗಳ ಉತ್ಪತ್ತಿಯು ಹೇಗಾಗಿರ ಬಹುದು? ಎಂಬ ಪ್ರಶ್ನೆಯು ಬೇರೆ ಬೇರೆ ಉಪನಿಷತ್ತುಗಳಲ್ಲಿ ಬೇರೆ ಬೇರೆ ತರ ದಿಂದ ಬಿಡಿಸಲ್ಪಟ್ಟಿದೆ. ಈ ಮಾತನ್ನು ಬ್ರಹ್ಮಸೂತ್ರ ಕಾರರೂ ಒಪ್ಪಿಕೊಂಡಿರುವರೆಂಬ ಕಾರಣದಿಂದಲೇ

ಶ್ರುತಿ ವಿರೋಧವು

ದ್ವಿತೀಯಾಧ್ಯಾಯದ ತೃತೀಯ ಚತುರ್ಥ ಪಾದಗಳು ಅವರಿಂದ ಬರೆಯಲ್ಪಟ್ಟಿವೆ ಯೆಂದು ಹೇಳಬಹುದೆಂದು ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ಒಪ್ಪಿಕೊಂಡಿ ದ್ದಾರೆ. (ಬ್ರ. ಸೂ. ಭಾ. ೨. ೩. ೧.) ಎಂದರೆ ಸಕೃದ್ದರ್ಶನಕ್ಕೆ ವಿಪರೀತ ವಾಗಿ ತೋರುವ ಈ ಉಪನಿಷತ್ಕಾರರ ಭಿನ್ನಾಭಿಪ್ರಾಯಗಳಲ್ಲಿ ಏಕವಾಕ್ಯತೆ ಯನ್ನು ತೋರಿಸಬೇಕೆಂದೇ ಆ ಪಾದಗಳು ಬರೆಯಲ್ಪಟ್ಟಿವೆ. ಆದರೆ ಅವನ್ನೆಲ್ಲ ಇಲ್ಲಿ ಚರ್ಚಿಸುವುದು ನಮ್ಮ ಉದ್ದೇಶವಲ್ಲ. ಸೃಷ್ಟ್ಯುತ್ಪತ್ತಿ ಕ್ರಮವನ್ನು ಮಾತ್ರ ಕುರಿತು ಕೆಲವು ಶಬ್ದಗಳನ್ನು ಬರೆಯಬೇಕಾಗಿದೆ. ಈ ಕ್ರಮವು ತೈತ್ತಿರೀಯೋ ಪನಿಷತ್ತಿನಲ್ಲಿ ಚೆನ್ನಾಗಿ ವರ್ಣಿಸಲ್ಪಟ್ಟಿದೆ. ಅದ್ವಿತೀಯನಾದ ಆತ್ಮನಿಂದ ಆಕಾ ಶವೂ, ಆಕಾಶದಿಂದ ವಾಯುವೂ, ಹೀಗೆ ಒಂದರಿಂದೊಂದು ಕ್ರಮವಾಗಿ ಮುಂದೆ ಅಗ್ನಿ, ಜಲ, ಪೃಥ್ವಿ, ವನಸ್ಪತಿಗಳು, ಅನ್ನ, ಮತ್ತು ಅದರಿಂದ ಭೂತ ಜಾತವೆಲ್ಲ ಹುಟ್ಟಿದವೆಂದೂ ಅಲ್ಲಿ ಹೇಳಿದೆ (**तै. ब्रह्मानंदवल्ली. अनुवाक. ೧.**) ಆದರೆ ಐತರೇಯೋಪನಿಷತ್ತಿನಲ್ಲಿಯೂ ಉಳಿದ ಉಪನಿಷತ್ತುಗಳಲ್ಲಿಯೂ ಇದರ ಬಗ್ಗೆ ಭಿನ್ನಾಭಿಪ್ರಾಯಗಳಿದ್ದಂತೆ ಕಂಡುಬರುತ್ತದೆ. ಮೊದಲು ಲೋಕಗಳನ್ನೂ, ಆ ಮೇಲೆ ಲೋಕಪಾಲಕರನ್ನೂ ಕಡೆಗೆ ಅವರಿಗಾಗಿ ಅನ್ನವನ್ನೂ ದೇವರು ಹುಟ್ಟಿಸಿದನೆಂದು ಐತರೇಯದಲ್ಲಿ ವರ್ಣನೆಯಿದೆ.

ಹಾಗೆಯೇ ಅನ್ನದಿಂದ ಪ್ರಾಣಿಗಳು ಹುಟ್ಟಿರುವವೆಂದು ತೈತ್ತಿರೀಯವು ಹೇಳುತ್ತಿದ್ದರೆ, ಪ್ರಾಣಿಗಳ ಸಲುವಾಗಿ ಅನ್ನವು ಹುಟ್ಟಿರಬೇಕೆಂದು ಐತರೇಯದ ಅಂಬೋಣವಿದೆ. ಆದರೆ ಇದೆಲ್ಲದರ ಸಮಾರೋಪವನ್ನು ಸೂತ್ರಕಾರರು ಮಾಡಿಯೇ ಇಟ್ಟಿರುವರೆಂಬುದನ್ನು ಮೇಲೆ ಹೇಳಿಯೇ ಇದ್ದೇವೆ. ಆಕಾಶಾದಿ ಭೂತಗಳು ತಮ್ಮ ವಿಕಾರಗಳನ್ನು ತಾವಾಗಿಯೇ ಹುಟ್ಟಿಸಲಾರವೆಂದೂ, ಪರಮೇಶ್ವರನೇ ಆ ಆ ರೂಪಾಂತರಗಳನ್ನು ಹೊಂದಿ ಧ್ಯಾನಮಾತ್ರದಿಂದ ಮುಂದುಮುಂದಿನ ವಿಕಾರಗಳನ್ನು ಹುಟ್ಟಿಸುತ್ತ ಹೋದನೆಂದೂ ಭಾವಿಸಬೇಕೆಂದು **तदभिध्याना-देव तु तल्लिङ्गात्सः । ब. सू.** ೨. ೩. ೧೩ ಎಂಬ ಸೂತ್ರದಲ್ಲಿ ಹೇಳಿದ್ದಾರೆ. ಇನ್ನು ಕ್ರಮಾದಿದ್ವಾರಕ ವಿಪ್ರತಿಷೇಧವನ್ನೂ ಒಪ್ಪಿಕೊಂಡು, ಅದನ್ನು ಸೃಷ್ಟ್ಯುತ್ಪತ್ತಿಕ್ರಮದ ಸ್ವೀಕಾರದಿಂದ ಪರಿಹಾರಮಾಡಬೇಕೆಂದು **तेजोऽतस्तथा ह्याह । ब. सू.** ೨. ೩. ೧೦ ಎಂಬ ಸೂತ್ರಭಾಷ್ಯದಲ್ಲಿ ವಿವರಿಸಲ್ಪಟ್ಟಿದೆ. ಪ್ರತ್ಯಕ್ಷವಾಗಲಿ ಅಥವಾ ಅಪ್ರತ್ಯಕ್ಷವಾಗಿಯಾಗಲಿ ಈ ಸಮಸ್ತವಿಶ್ವಜಾಲವೆಲ್ಲ ಈಶ್ವರನಿಂದಲೇ ನಿರ್ಮಿತವಾಗಿರುವುದರಿಂದ ಅಕ್ರಮಸೃಷ್ಟಿಯನ್ನು ಪ್ರತಿಪಾದಿಸುವ ಸೂತ್ರಗಳು ಪಾರಂಪರ್ಯದಿಂದ ಈಶ್ವರನ ಜನಕತ್ವವನ್ನು ಒಪ್ಪುತ್ತವೆಂದು ಹೇಳಬಹುದು. ಆದರೆ ಅಕ್ರಮವಾದವೇ ಮುಖ್ಯವೆಂದು ಒಪ್ಪಿದರೆ ಕ್ರಮಸೃಷ್ಟಿಯ ಉಪಪತ್ತಿಯೇ ಹತ್ತಲಾರದೆಂದು ಆಚಾರ್ಯರ ಅಭಿಪ್ರಾಯವಿದೆ. ಒಟ್ಟಿನ ಮೇಲಿಂದ ತೈತ್ತಿರೀಯದಲ್ಲಿ ಹೇಳಿದ ಸೃಷ್ಟ್ಯುತ್ಪತ್ತಿಕ್ರಮವನ್ನು ಆಚಾರ್ಯರು ಒಪ್ಪಿಕೊಂಡಿರುವರೆಂದು ಹೇಳಬಹುದು. ( ಆದರೂ ಶ್ರೀವಿದ್ಯಾರಣ್ಯರ ಮನದಲ್ಲಿ ಇದರ ಬಗ್ಗೆ ನಿಶ್ಚಯವಾದಂತೆ ಕಾಣುವುದಿಲ್ಲ. ಎರಡೂ ತರದ ಶ್ರುತಿಗಳಿರುವುದರಿಂದ ಬೇಕಾದದ್ದನ್ನು ಸ್ವೀಕರಿಸಬಹುದೆಂದು ಅವರ ಅಂಬೋಣವಿದೆ. **क्रमेण युगपद्वैषा सृष्टिर्ज्ञेया यथाश्रुति । द्विविधश्रुतिसद्भावाद्द्विविधस्वप्न दर्शनात् ॥ पं ६, १९९**)

ಆದರೆ ಈ ಸೃಷ್ಟಿಯು ಮಾಯಿಕವಾಗಿರುವುದೆಂಬುದನ್ನು ಲಕ್ಷ್ಯದಲ್ಲಿಡತಕ್ಕದ್ದು. ಈ ಸೃಷ್ಟಿಯು ಈಶ್ವರನ ವಿಭೂತಿಯಾಗಿರಬಹುದೇ ? ಅಥವಾ ಸ್ವಪ್ನಮಾಯಾಸ್ವರೂಪವೆಂದು ತಿಳಿಯಬಹುದೇ ? ಪ್ರಭುವಿನ ಇಚ್ಛಾಮಾತ್ರವೆಂದು ತಿಳಿಯಬೇಕೇ ? ಅಥವಾ ಕಾಲನಿಂದ ಈ ಸೃಷ್ಟಿಯು ಆವಿರ್ಭವಿಸಿತೆಂದು ಕಲ್ಪಿಸ

ಆದರೆ ಸೃಷ್ಟಿವಾದವೂ ಅಭ್ಯಾಸವೇ.

ಬೇಕೇ ? ಅಥವಾ ದೇವರು ತನ್ನ ಭೋಗಕ್ಕಾಗಿಯೂ ಕ್ರೀಡೆಗಾಗಿಯೂ ಈ ಸೃಷ್ಟಿಗೆ ರೂಪುಗೊಟ್ಟಿರಬೇಕೆಂದು ಭಾವಿಸಬಹುದೇ ? ಎಂದು ಮೊದಲಾಗಿ ರೂಢವಾದ ಎಲ್ಲ ಕಲ್ಪನೆಗಳ ಉಲ್ಲೇಖಮಾಡಿ ಕಡೆಗೆ, ಛೇ, ಛೇ, ಹಾಗಾಗುವುದು ಶಕ್ಯವಿಲ್ಲ. ಆಪ್ತಕಾಮನಾದ ಸರ್ವೇಶ್ವರನು ಈ ಸೃಷ್ಟಿಯನ್ನು ಏತಕ್ಕೆ ಹುಟ್ಟಿಸಿಯಾನು ? ಅವನಿಗೆ ಬೇಕಾಗಿರುವ ವಸ್ತುವೇ ಅಸ್ತಿತ್ವದಲ್ಲಿರಲಾರದಾದುದರಿಂದ, ಅವನು ಈ ಸೃಷ್ಟಿವ್ಯಾಪಾರವೆಂಬ ಒಣ ಉಪದ್ವ್ಯಾಪವನ್ನು ಏಕೆ ತಲೆಯ ಮೇಲೆ ಹೊದ್ದುಕೊಳ್ಳಬೇಕು ? ಎಂದು ಗೌಡಪಾದಾಚಾರ್ಯರು ನಿಶ್ಚಯಿಸಿ ಅದೆಲ್ಲ " ದೇವಸ್ಯೈಷ ಸ್ವಭಾವೋಽಯಂ " ಎಂದರೆ ಸರ್ವೇಶ್ವರನ ಸ್ವಭಾವವಾದ ಅವಿದ್ಯಾ ಅಥವಾ ಮಾಯೆಯೇ ಎಲ್ಲಕ್ಕೂ ಮೂಲಕಾರಣವೆಂದು ಸಿದ್ಧಮಾಡಿ ತೋರಿಸಿದ್ದಾರೆ. ( मांडूक्य कारिका ೧. ೭–೯. ) ದ್ವೈತವೆಲ್ಲ ಮಾಯೆಯೆಂದೂ, ಆದುದರಿಂದಲೇ ಸ್ವಪ್ನವೆಂದೂ, ಗಂಧರ್ವನಗರದಂತೆ ಕಲ್ಪಿತವೆಂದೂ ತಿಳಿಯಬೇಕು. ( ೨. ೩೧ ) ಅಜಾತವಾದ, ಅಮೃತವಾದ, ಆತ್ಮತತ್ತ್ವವು ಕ್ಷಣಭಂಗುರವಾದ ಈ ಸೃಷ್ಟಿಯ ರೂಪವನ್ನು ಧಾರಣಮಾಡುವುದು ಹೇಗೆ ಶಕ್ಯವಿದೆ ? ಯಾವ ವಸ್ತುವೂ ತಾನಾಗಿಯೇ ವಿರುದ್ಧ ಗುಣಧರ್ಮಗಳನ್ನು ಹೊಂದಲಾರದೆಂಬುದು ಸ್ಪಷ್ಟವಿದೆ. ( ಉದಾ:– ಅಗ್ನಿಯು ತಾನಾಗಿಯೇ ಶೀತವೆಂದಿಗೂ ಆಗಲಾರದು. ಅದರಂತೆಯೇ ಅಮೃತವಾದ, ಅಜರವಾದ, ಅಜವಾದ ಆತ್ಮವು ಜನನವನ್ನೂ, ಮುಪ್ಪನ್ನೂ, ಮೃತಿಯನ್ನೂ ಹೇಗೆ ತಾನಾಗಿಯೇ ಹೊಂದುವುದು ಶಕ್ಯವಿದೆ ? ) ಹೀಗಾಗುವುದೆಂದರೆ ಪ್ರಕೃತಿವೈಪರೀತ್ಯವಾಗುವುದೆಂತಲೇ ಒಪ್ಪಬೇಕಾದೀತು. ( Absence of uniformity of law) (ಮಾ ಕಾ. ೩. ೨೨–೨೩) ಆದುದರಿಂದ ಸೃಷ್ಟಿಯು ಉತ್ಪತ್ತಿಯನ್ನು ಹೇಳುವ ಶ್ರುತಿವಾಕ್ಯಗಳ ಉದ್ದೇಶವೇ ಬೇರೆಯಾಗಿರುವುದೆಂದು ತಿಳಿಯಬೇಕು. ಅದು " ಉಪಾಯಃ ಸೋಽವತಾರಾಯ " ( ಮಾ. ಕಾ. ೩. ೧೫ ) ಎಂದರೆ ಅಜ್ಞ ಜನರಿಗೆ ಬ್ರಹ್ಮಜ್ಞಾನವನ್ನು ಮಾಡಿಕೊಡುವ ಸುಲಭವಾದ ಹಂಚಿಕೆಯಲ್ಲದೆ ಇನ್ನೊಂದಿಲ್ಲ. ಎಂದರೆ ಮೊದಲು ದೃಷ್ಟಿಗೋಚರವಾದ ಸ್ಥೂಲ ಗುಣಧರ್ಮಗಳನ್ನು ಬ್ರಹ್ಮನ ಬಗ್ಗೆ ಕಲ್ಪಿಸಿಕೊಂಡು, ಆ ಮೇಲೆ ಅವು ಬ್ರಹ್ಮನ ನಿಜವಾದ ಧರ್ಮಗಳಲ್ಲವೆಂದು ಹೇಳುವುದೇ ಈ ಪದ್ಧತಿಯ ವೈಶಿಷ್ಟ್ಯ. ಯಾವುದಾದರೊಂದು ವಿಷಯವನ್ನು ತಿಳಿಸಿಕೊಡುವುದಾದರೆ ನಾವು ಜ್ಞಾತವಸ್ತುವಿ

ನಿಂದಲೇ ಹೊರಟು, ಅಜ್ಞಾತವಸ್ತುವಿನ ಕಲ್ಪನೆಯನ್ನು ತಂದುಕೊಡಬೇಕಾಗುವುದು. ಸೃಷ್ಟಿ ಮೊದಲಾದವುಗಳು ನಮ್ಮೆಲ್ಲರ ಕಣ್ಣಿಗೂ ಕಂಡುಬರುವ ಮಾತುಗಳು. ಆದುದರಿಂದಲೇ ಶ್ರುತಿಯು ಇವುಗಳಿಂದ ಹೊರಟು, ಅಪ್ಪಾ, ಹೀಗಾಗುವುದಕ್ಕೆ ಸೃಷ್ಟಿಯೆನ್ನುತ್ತಾರೆ. ಆದರೆ ಇದು ನಿಜವಾದ ಬ್ರಹ್ಮಧರ್ಮವಲ್ಲ. ನಿನಗೆ ಗೊತ್ತಿದ್ದ ಯಾವ ಧರ್ಮಗಳಿಂದಲೂ ಅದರ ಯಥಾರ್ಥ ವರ್ಣನೆಯನ್ನು ಮಾಡಲಿಕ್ಕೆ ಬರುವಂತಿಲ್ಲ. “ನೇತಿ ನೇತಿ” ಎಂದು ಮಾತ್ರ ಅದರ ಯೋಗ್ಯವರ್ಣನೆಯನ್ನು ಮಾಡಬಹುದು. ಅದು ಅಸ್ಥೂಲವು, ಅನಣುವು, ಅಹ್ರಸ್ವವು, ಅದೀರ್ಘವು (ಬೃ ೩. ೮. ೮) ಅಶಬ್ದವು, ಅಸ್ಪರ್ಶವು, ಅರೂಪವು, ಅವ್ಯಯವು, ಅರಸವು, ನಿತ್ಯವು, ಅಗಂಧಯುಕ್ತವು ( ಕಠ ೩. ೧೫ ), ಅಶರೀರವು ( ಛಾ. ೮. ೧೨. ೧ ), ಅಸಂಗವು ( ಬೃ. ೪. ೩. ೧೫ ), ಅವ್ಯಕ್ತವು, ಅಚಿಂತ್ಯವು, ಅವಿಕಾರ್ಯವು ( ಗೀ. ೨. ೨೫ ), ಅನಂತವು, ಅಪಾರವು ( ಬೃ. ೨. ೪. ೧೨ ), ಅದೃಷ್ಟವು, ಅಶ್ರುತವು, ಅಮೃತವು, ಅವಿನಾಶವು, ಅಪೂರ್ವವು, ಅನಪರವು, ಅನಂತರವು, ಅಬಾಹ್ಯವು, ಅಜರವು, ಅಮರವು, ಅಭಯವು, ಅದ್ವಯವು, ಸರ್ವಮೂಲವು ಎಂದು ನಿನಗೆ ಗೊತ್ತಿದ್ದ ಒಂದು ಧರ್ಮವೂ ಬ್ರಹ್ಮನಿಗೆ ಹತ್ತಲಾರದೆಂದು ಶ್ರುತಿಯು ಹೇಳುತ್ತಿದೆ; ಎಂತೆಯೇ **अध्यारोपापवादाभ्यां निष्प्रपंचं प्रपञ्च्यते ।** ಎಂದು ಗೌಡಪಾದಾಚಾರ್ಯರು ಇದೆಲ್ಲದರ ಸಾರಾಂಶವನ್ನು ತೆಗೆದಿದ್ದಾರೆ. ಆದುದರಿಂದ ನಿಜವಾಗಿ ನೋಡಿದರೆ ಈ ಜಗತ್ತು ಹುಟ್ಟಿಲ್ಲ, ಹುಟ್ಟಿಸಲ್ಪಟ್ಟಿಲ್ಲ, ಅದನ್ನು ಹುಟ್ಟಿಸುವ ಕರ್ತೃವಾದರೂ ಆವನೂ ಇಲ್ಲ. ನಾವು ನೋಡುವುದೆಲ್ಲ ಕಲ್ಪನಾಮಯವು (**यतः कल्पना मूलमेतत् । शतश्लोकी ३६** ). “ಚಿತ್ತಮೇವ ಹಿ ಸಂಸಾರಃ” ಎಂದು ಹೇಳುವ ಉಪನಿಷದ್ವಾಕ್ಯದ ಸಾರವಾದರೂ ಇದೇ. ಈಶ್ವರನು ತನ್ನ ಮಾಯೆಯಿಂದಲೇ ತಾನು ಈ ಜಗತ್ತನ್ನು ಕಲ್ಪಿಸಿಕೊಂಡು, ಈ ಭೇದಜಾಲವನ್ನೆಲ್ಲ ತಿಳಿದುಕೊಳ್ಳುತ್ತಾನೆಂದು ಹೇಳಬಹುದು. ( ಮಾ. ಕಾ. ೨. ೧೨ ) ತನ್ನ ಮನಸ್ಸಿನಲ್ಲಿದ್ದ ಕಲ್ಪನೆಗಳಿಗೇ ಅವನು ಮೂರ್ತರೂಪವನ್ನು ಕೊಟ್ಟನೆಂದರೆ ಸೃಷ್ಟಿಯಾಗುವುದೆಂದು ಹೇಳಬಹುದು. ( ಮಾ. ಕಾ. ೨. ೧೩ ). ಪರಮಾರ್ಥದೃಷ್ಟಿಯಿಂದ ನೋಡಿದರೆ ಉತ್ಪತ್ತಿನಾಶಗಳಿಲ್ಲ; ಸಂಸಾರಬದ್ಧನಾದ ಜೀವನಿಲ್ಲ; ಸಾಧಕ

ನಿಲ್ಲ; ಮುಮುಕ್ಷುವಿಲ್ಲ; ಮತ್ತು ಮುಕ್ತನಾದರೂ ಇಲ್ಲವೆಂದು ನಿಶ್ಚಯಿಸ ಬೇಕೆಂದು ಗೌಡಪಾದರು ಹೇಳಿದ್ದಾರೆ. (न निरोधो न चोत्पत्तिर्न बद्धो न च साधकः। न मुमुक्षुर्न वै मुक्त इत्येषा परमार्थता॥ ಮಾ. ಕಾ ೨-೩೨). ಮಂದ ವಾದ ಬೆಳಕಿನಲ್ಲಿ ಮುಂದೆ ಕಾಣುವುದು ಹಗ್ಗವೇ ಇರಬೇಕೆಂಬ ನಿಶ್ಚಯವಾಗ ದಿರಲು, ಅದು ಸರ್ಪವೆಂದೂ, ಉದಕಧಾರೆಯೆಂದೂ, ಬಡಿಗೆಯೆಂದೂ ಹೇಗೆ ಅನೇಕರೀತಿಯಿಂದ ವಿಕಲ್ಪಿಸಲ್ಪಡುವುದೋ ಹಾಗೆಯೇ ಬ್ರಹ್ಮನ ನಿಜ ವಾದ ರೂಪವು ನಮಗೆ ಗೊತ್ತಾಗದ್ದರಿಂದ ಇದು ನಿಜವಾದ ಸೃಷ್ಟಿಯೇ ಇರ ಬೇಕೆಂದು ನಾವು ಭ್ರಮಿಸುತ್ತೇವೆ (ಮಾ. ಕಾ. ೨. ೧೭). ಆದುದರಿಂದಲೇ ಒಂದೇ ಒಂದಾದ ಈ ಆತ್ಮತತ್ತ್ವವು ಪ್ರಾಣಾದ್ಯನಂತರೂಪಗಳೆಂದು ಕಲ್ಪಿಸಲ್ಪಡು ತ್ತದೆ; ಇದೆಲ್ಲ ಆ ದೇವನ ಮಾಯೆಯು. ಅದರಿಂದಲೇ ಅವನು ತನ್ನಿಷ್ಟಕ್ಕೆ ತಾನೇ ಮೋಹಿತನಾಗಿರುತ್ತಾನೆ (ಮಾ. ಕಾ. ೨.೧೯.) ಎಂತೆಯೇ ಅದ್ವಿತೀಯ ವಾದ ಆತ್ಮತತ್ತ್ವವು ಕೆಲವರಿಗೆ ಪ್ರಾಣರೂಪವಾಗಿಯೂ, ಕೆಲವರಿಗೆ ಪಂಚಮಹಾ ಭೂತರೂಪವಾಗಿಯೂ, ಬೇರೆ ಕೆಲವರಿಗೆ ತ್ರಿಗುಣರೂಪವಾಗಿಯೂ, ಇನ್ನೂ ಬೇರೆಯುವರಿಗೆ ಸೂಕ್ಷ್ಮರೂಪವಾಗಿಯೂ ಕಾಣುತ್ತದೆ. ಇದನ್ನೇ ಬೇರೆ ಬೇರೆ ಜನರು ಶೂನ್ಯವೆಂದೂ, ವಿಜ್ಞಾನವೆಂದೂ, ಕಾಲನೆಂದೂ, ದಿಕ್ಕೆಂದೂ, ಮನ ಸ್ಸೆಂದೂ, ಬುದ್ಧಿಯೆಂದೂ, ಚಿತ್ತನೆಂದೂ, ಧರ್ಮಾಧರ್ಮಗಳೆಂದೂ, ಈಶ್ವರ ನೆಂದೂ, ಶಿವನೆಂದೂ, ವಿಷ್ಣುವೆಂದೂ, ಶಕ್ತಿಯೆಂದೂ, ಗಣಪತಿಯೆಂದೂ, ಸೂರ್ಯನೆಂದೂ ಹಲವು ತೆರನಾಗಿ ಸಂಬೋಧಿಸುವರು (ಮಾ. ಕಾ. ೨.೨೦-೨೮). ಕಿಂಬಹುನಾ ಗುರುಗಳು ಅಥವಾ ಅನ್ಯ ಆಪ್ತಪುರುಷರು ಯಾವುದು ತತ್ತ್ವ ವೆಂದು ಶಿಷ್ಯನಿಗೆ ಬೋಧಿಸುತ್ತಾರೋ ಅದೇ ನಿಜವಾದ ತತ್ತ್ವವೆಂದು ಶಿಷ್ಯನು ತಿಳಿದುಕೊಳ್ಳುತ್ತಾನೆ. यं भावं दर्शयेद्यस्य तं भावं स तु पश्यति । तं चावति सभूत्वासौ तद्ग्रहः समुपैति तम् ॥ ಮಾ. ಕಾ. ೨. ೨೯ (ಆ ಆಚಾರ್ಯನು ಸ್ಪೆನ್ಸರ ಸಾಹೇಬನಾದರೆ ಶಿಷ್ಯನು ಈ ಆತ್ಮತತ್ತ್ವವನ್ನೇ ಅವಿದ್ಯೆಯಿಂದ ಜಡ ವೆಂದು ತಿಳಿದುಕೊಂಡು ಕಷ್ಟಬಡುತ್ತಾನೆ.) ಆದರೆ ಈ ಆತ್ಮತತ್ತ್ವವು ಸಾಧಕನ ಉಪಾಸ್ಯತತ್ತ್ವದ ರೂಪಾಂತರಗಳನ್ನು ಸಾಧಕನಿಗಾಗಿ ಸ್ವೀಕರಿಸಿ ಅವನನ್ನು ಅವನ ಜ್ಞಾನದ ಒಲವಿನಂತೆ ಸಂರಕ್ಷಿಸುತ್ತಿರುತ್ತದೆಯೆಂಬುದು ಗೌಡಪಾದರು ಹೇಳಿದ ಮಹತ್ತ್ವದ ಮಾತು. ಹೀಗೆ ನಿಜವಾದ ಆತ್ಮಜ್ಞಾನವು ಏಕರೂಪವಾಗಿ

ದ್ದರೂ, ಅದರ ಮೇಲೆ ಸಾವಿರಾರು ವಿಪರೀತವಾದ ತತ್ತ್ವಜ್ಞಾನದರ್ಶನಗಳು ಹೇಗೆ ಹುಟ್ಟಬಹುದೆಂಬುದನ್ನು ಅದ್ವೈತಶಾಸ್ತ್ರವು ಅಧ್ಯಾಸವಾದದಿಂದ ಸುಲಭವಾಗಿ ತಿಳಿಸಿಹೇಳುವಂತೆ ಬೇರೆ ಯಾವ ದರ್ಶನವೂ ತಿಳಿಸಿಕೊಡಲಾರದೆಂಬುದು ಬಲು ವಿಚಾರಾರ್ಹವಾದ ಪ್ರಶ್ನೆಯಾಗಿದೆ. ಇವೆಲ್ಲ ಭಿನ್ನಾಭಿಪ್ರಾಯಗಳು, ಆತ್ಮಜ್ಞಾನ ನಿಶ್ಚಯಸ್ವರೂಪವು ಗೊತ್ತಿರದ್ದರಿಂದ ಅವಿದ್ಯಾಕಲ್ಪಿತವಾಗಿ ಅನಂತ ಸಂಖ್ಯಾಕವಾಗುವುದು ಶಕ್ಯವಿದೆ. ಆದರೆ ಕಲ್ಪಿತವಸ್ತುಗಳಿಗೆ ಅಧಿಷ್ಠಾನದಿಂದ ಭಿನ್ನವಾದ ವಸ್ತುತ್ವವಿರಲಾರದು. ಮತ್ತು ಆ ಕಲ್ಪಿತವಸ್ತುವಿನೊಳಗಿನ ದೋಷಗಳಿಂದ ಅಧಿಷ್ಠಾನವು ದೂಷಿತವೂ ಆಗಲಾರದು. ಆದುದರಿಂದ ಇವೆಲ್ಲ ದರ್ಶನಗಳಿಂದ ಆತ್ಮತತ್ತ್ವಕ್ಕೆ ಏನೂ ಬಾಧೆಬರಲಾರದೆಂಬುದು ಸ್ಪಷ್ಟವಿದೆ. ನಿಶ್ಚಿತಜ್ಞಾನವಾದೊಡನೆ ಸರ್ಪ ಮೊದಲಾದ ವಿಕಲ್ಪಗಳೆಲ್ಲ ನಾಶವಾಗುವಂತೆ, ಆತ್ಮತತ್ತ್ವದ ನಿಜವಾದ ಜ್ಞಾನದಿಂದಲೇ ಸದ್ಗತಿಯು ಪ್ರಾಪ್ತವಾಗುತ್ತದೆಂದು ವೇದಾಂತವು ಹೇಳುತ್ತದೆ. ಎಂದರೆ ಸಾಂಖ್ಯ, ಯೋಗ, ಬೌದ್ಧ, ಜೈನ ಮೊದಲಾದ ಮತಗಳೆಲ್ಲ ಅದ್ವೈತಬ್ರಹ್ಮತತ್ತ್ವದ ಮೇಲಿನ ಭ್ರಮಾತ್ಮಕ ಅಧ್ಯಾಸಗಳಾಗಿರುವಂತೆ, ಈ ಸೃಷ್ಟಿವಾದವೂ ಇರುವುದೆಂದು ಹೇಳಬಹುದು. ಆದರೆ ಮಾಯೆಯೆಂಬ ಕಾಮಧೆನುವಿಗೆ ಜೀವೇಶ್ವರರೆಂಬ ಎರಡು ಕರುಗಳಿರುತ್ತಿರಲಿಕ್ಕೆ (ಪಂ. ೬. ೨೩೬) ಬೇಕಾದಂತಹ ದ್ವೈತವನ್ನು ಕಲ್ಪಿಸಿಕೊಂಡು ಸುಖಪಡಬಹುದೆಂದು ವಿದ್ಯಾರಣ್ಯರ ಶಬ್ದಗಳಲ್ಲಿ ಹೇಳಬಹುದು. ಸವಿಶೇಷಬ್ರಹ್ಮನ ಸೃಷ್ಟಿಯಲ್ಲಿ ಏನಾಗುವುದು ಅಶಕ್ಯವಿದೆ? ದುರ್ಘಟವಾದುದನ್ನು ಘಟಿಸುವುದೇ ಮಾಯೆಯ ಲಕ್ಷಣವೆಂದು ವೇದಾಂತಿಗಳು ಹೇಳುತ್ತಿರುವರಲ್ಲವೇ?

ಸ್ಪೆನ್ಸರನ ಅಜ್ಞೇಯವೇ ನಮ್ಮ ಬ್ರಹ್ಮವು

ಶಕ್ತಿಯುಕ್ತವಾದ ಜಡವೇ ಈ ವಿವಿಧಸೃಷ್ಟಿಯ ಜನನಿಯೆಂದೂ, ಉತ್ಕ್ರಾಂತ್ಯವಕ್ರಾಂತಿಗಳ ನಿಯಾಮಕಳೆಂದೂ ಹಿಂದೆ ವಿಸ್ತಾರವಾಗಿ ಹೇಳಿಕೊಟ್ಟಿದ್ದೇವೆ. ಎಂದರೆ ಕೇವಲ ಜಡದಿಂದಲೇ ನಮ್ಮ ಜಗತ್ತಿನ ಉಪಪತ್ತಿಯು ಹತ್ತಲಾರದು. ಆವುದೋ ಒಂದು ಅಜಡವಾದ ಶಕ್ತಿಯು (ಮಾಯೆಯು?) ಈ ಕೆಲಸವನ್ನು ಮಾಡುತ್ತದೆಂಬುದು ಸ್ಪಷ್ಟವಿದೆ. ಒಮ್ಮೆ ನಾವು ಈ ಕಾಮಧೇನುವಿನಿಂದ ಹೊರಟವೆಂದರೆ ದೃಶ್ಯಸೃಷ್ಟಿಯ ಗೂಢವೆಲ್ಲ ಸ್ಪಷ್ಟವಾಗುವುದು ತಡವಿಲ್ಲ. ಆದರೆ ಈ ಜಡಶಕ್ತಿಗಳ ಹಿಂದೆ ಇರುವ ಮೂಲವಸ್ತುವಾದರೂ

ಅವುದು ? ಎಂದು ಕೇಳಿದೊಡನೆ ನಾವು ಅಜ್ಞೇಯರಾಜ್ಯದಲ್ಲಿ ಕಾಲಿಡುವೆವೆಂದು ಸ್ಪೆನ್ಸರ ಸಾಹೇಬರು ಹೇಳುತ್ತಾರೆ. ಆದರೆ ಜ್ಞೇಯಶಾಸ್ತ್ರವೇ ನಮ್ಮ ವಿಷಯವಾಗಿರುವುದರಿಂದ ನಾವೀ ಅಜ್ಞೇಯದ ಗೊಡವೆಗೆ ಹೋಗಲಾರೆವೆಂದೂ, ಹೋಗುವ ಸಾಮರ್ಥ್ಯವು ನಮ್ಮಲ್ಲಿಲ್ಲೆಂದೂ ಅವರು ಹೇಳಿದ್ದು ಯಥಾರ್ಥವೇ ! ಅಂತಃಕರಣವೃತ್ತಿಯನ್ನು ಸಾಕಷ್ಟು ಹದನಮಾಡುವ ಹೊರತು ಈ ತತ್ತ್ವವು ಯಾರಿಗೂ ತಿಳಿಯಲಾರದು. ಆ ಗೂಢಾದ್ಗೂಢತರವಾದ ಸತ್ಯವನ್ನು ತಿಳಿದುಕೊಳ್ಳಲಿಕ್ಕೆ ನಮ್ಮ ಋಷಿಗಳೇ ಬರಬೇಕಾಗುವುದು. ಅವರು ಹಾಕಿಕೊಟ್ಟ ಪಾಠಗಳನ್ನು ತೀಡಿದರೆ ಮಾತ್ರ ಈಗಿನವರಿಗೆ ಅದರ ದರುಶನವಾಗುವುದು ಶಕ್ಯವಿದೆ. ಬಾಹ್ಯಮುಖವಾದ ಇಂದ್ರಿಯಗಳನ್ನು ತಿದ್ದಿಕೊಳ್ಳಲಾರದ ಸ್ಪೆನ್ಸರ ಸಾಹೇಬರಿಗೆ ಈ ಮೂಲಭೂತವಸ್ತುವು ಅಜ್ಞೇಯವೆಂದು ಕಂಡುಬಂದಿದ್ದರೆ ಆಶ್ಚರ್ಯವೇನು ? ಆದರೆ ತಮ್ಮ ಆಯುಷ್ಯವನ್ನೇ ಅದಕ್ಕೆ ಧಾರೆಯಾಗಿ ಎರೆದ, ನಿರಿಚ್ಛರಾದ ನಮ್ಮ ಪೂರ್ವಜರಿಗೆ ಅದು "ಪ್ರತ್ಯಕ್ಷ"ವಾಗಿ ಗೋಚರಿಸಿತೆಂದೂ, ಆ ಮಾರ್ಗವನ್ನನುಸರಿಸಿ ನಡೆದವರಿಗೆ ಇಂದಿಗೂ ಹಾಗೆ "ಸಾಕ್ಷಾತ್ಕಾರ"ವಾಗುವುದೆಂದೂ, ಅಭಿವಚನವನ್ನಿತ್ತರೆ ಧಾರ್ಷ್ಟ್ಯದೋಷವು ನಮ್ಮ ಪಾಲಿಗೆ ಬರಲಾರದೆಂದು ವಿಶ್ವಾಸವಿದೆ. ಆದರೆ ಅದು ನಮ್ಮ ವಿಷಯವಲ್ಲೆಂದು ಹೇಳುವ ಸ್ಪೆನ್ಸರನ ಸರಳತನವಾದರೂ ಅಭಿನಂದನೀಯವೇ ಸರಿ ! ಸದ್ಯಕ್ಕಿನ ಭೌತಿಕಶಾಸ್ತ್ರಗಳು ಈ ಅಜ್ಞೇಯಶಕ್ತಿಯ ಮೇಲೆಯೇ ಅವಲಂಬಿಸಿರುವವೆಂದೂ ಸ್ಪೆನ್ಸರನು ಒಪ್ಪಿಕೊಳ್ಳುತ್ತಾನೆ. ಇವೆಲ್ಲವುಗಳ ಹಿಂದೆ ಏನಿರುವುದೆಂದು ತಿಳಿಯುವುದು ಶಕ್ಯವಿಲ್ಲ; ಈ ಜಡವು ಎಲ್ಲಿಂದ ಬಂತು ? ಶಕ್ತಿಯು ಎಲ್ಲಿಂದ ಬಂತು ? ಅವನ್ನಾರು ಹುಟ್ಟಿಸಿದರು ? ಅವುಗಳ ನಿಯಮಗಳನ್ನಾರು ವಿಧಿಸಿದರು ? ಇತ್ಯಾದಿ ಪ್ರಶ್ನೆಗಳು ನಿರುತ್ತರವಾಗಿರುವವು. ಏನೋ ಒಂದು ವಸ್ತುವು ಇರುವುದೆಂಬುದನ್ನು ಮಾತ್ರ ನಾವು ಬಲ್ಲೆವು; ಆದರೆ ಅದು ಏನಿರುವುದೆಂಬುದರ ಗಂಧವೂ ಕೂಡ ನಮಗೆ ಗೊತ್ತಿಲ್ಲ. ಅದು ಇರಲಿಕ್ಕೇಬೇಕೆಂಬ ಜ್ಞಾನವು ನಮಗಿದೆ; ಅದು ಹೀಗೆಯೇ ಇರಬೇಕೆಂಬುದು ಅಜ್ಞೇಯವಾಗಿದೆ. ಅದರ ಅಸ್ತಿತ್ವದ ಬಗ್ಗೆ ನಮಗೆ ಸಂದೇಹವಿಲ್ಲ; ಅದರ ಸ್ವಭಾವದ ಬಗ್ಗೆ ಮಾತ್ರ ಸಂಪೂರ್ಣ ಕತ್ತಲೆಯು ಮುಸುಕಿಕೊಂಡಿದೆ. ಅದರ ಜ್ಞಾತಭಾಗವೆಲ್ಲ ಭೌತಿಕಶಾಸ್ತ್ರದೊಳಗೆ ಬರುತ್ತದೆ; ಅಜ್ಞಾತಭಾಗವೇ ಧಾರ್ಮಿಕರ ದೇವ

ರಾಗಿರಬಹುದು. ಈ ವಿಶ್ವವು ಎಲ್ಲಿಂದ, ಮತ್ತು ಯಾಕೆ ಬಂತು? ಮತ್ತು ಅದು ಎಲ್ಲಿಗೆ ಹೊರಟಿರುವುದೆಂಬುದನ್ನು ನಾವು ಚರ್ಚಿಸುವುದೇ ಇಲ್ಲವೆಂದು ಸ್ಪೆನ್ಸರನು ಒಪ್ಪಿಕೊಳ್ಳುತ್ತಾನೆ. ಆ ಮೂಲವಸ್ತುವು ತ್ರಿಕಾಲಾಬಾಧಿತವು; ಅಮೃತವು; ಅನಾದಿಯು; ಅವಿನಾಶಿಯು; ಪೂರ್ಣವು. ಅದರ ಅಸ್ತಿತ್ವವು ಸ್ವತಃಸಿದ್ಧವು. ಉಳಿದ ಎಲ್ಲ ಶಾಸ್ತ್ರೀಯನಿಯಮಗಳಿಗೂ ಬೇಕಾದ ತಳಹದಿಯು ಇದೇ. ಮಾನಸಶಾಸ್ತ್ರದಿಂದ ಸಿದ್ಧವಾಗುವ ಶಾಶ್ವತವಾದ ತತ್ತ್ವವೂ ಇದೇ. ಅದನ್ನು (ಆ ತತ್ತ್ವವನ್ನು) ಸಂಪೂರ್ಣವಾಗಿ ತಿಳಿಸಿಕೊಡುವುದು ಶಕ್ಯವಲ್ಲದಿದ್ದರೂ, ಈ ತತ್ತ್ವವಿರಲೇಬೇಕೆಂಬುದು ಸ್ವಪ್ರಜ್ಞೆತೆಯ ಪ್ರಮುಖಮೂಲವೇ ಆಗಿರುವುದೆಂದು ಹೇಳಬಹುದು. ಎಂದರೆ ಅದನ್ನೊಪ್ಪದಿದ್ದರೆ ಸ್ವಪ್ರಜ್ಞತೆಯ ಅರ್ಥವನ್ನೇ ನಾವು ಹಚ್ಚಲಾರೆವೆಂದು ಇದರ ಅರ್ಥವು. ಎಲ್ಲ ಅನುಭವಕ್ಕೂ ಮೂಲವಾಗಿರುವ ಈ ವಸ್ತುವು (**अनुभवति विश्वमात्मा विश्वेनासौ न चानुभूयेत** ।) ನಮ್ಮ ಅನುಭವಕ್ಕೆ ಅಗೋಚರವಾಗಿಯೇ ಇದೆ. ಶಾಸ್ತ್ರೀಯವಿಭಜನೆಯಿಂದ ಹೊರಡುವ ಅಂತಿಮವಾದ ಏಕತತ್ತ್ವವೆಂದರೆ ಈ ವಸ್ತುವಿನ ಅಸ್ತಿತ್ವವೇ. ಇದರಮೇಲೆಯೇ ಭೌತಿಕಶಾಸ್ತ್ರಮಂದಿರವೆಲ್ಲ ರಚಿಸಲ್ಪಟ್ಟಿದೆ. ಆದರೆ ಇಂತಹ ತ್ರಿಕಾಲಾಬಾಧಿತವಾದ ಮೂಲಶಕ್ತಿಯೆಂದರೇನು? ಎಂದು ಪ್ರಶ್ನೆಮಾಡಿದರೆ "ನಮ್ಮ ಜ್ಞಾನದ ಕೊನೆಯನ್ನು ಮೀರಿದ, ಭಾವನಾತೀತವಾದ ಯಾವುದೋ ಒಂದು ಮೂಲಕಾರಣದ ಅಸ್ತಿತ್ವವೇ ಸರಿ"ಯೆಂದು ಸ್ಪೆನ್ಸರನು ನಿಃಶಂಕೆಯಿಂದ ಉತ್ತರಕೊಡುವನು. ನಮ್ಮ ವೇದಾಂತಿಗಳ ನಿರ್ಗುಣಬ್ರಹ್ಮವಾದರೂ ಇದರಿಂದ ಭಿನ್ನವಾಗಿಲ್ಲೆಂದು ಹೇಳಿದರೆ ವಿಶೇಷ ತಪ್ಪಾಗಲಾರದು. ಅವರೂ ಕೂಡ ಅದನ್ನು ವರ್ಣನೆಮಾಡಹೋಗಿ "ನೇತಿ, ನೇತಿ" ಎಂದು ಉಶ್ಶೆಂದು ಕೈಯೂರಿ ಕುಳಿತಿರುವರೆಂದು ವಾಚಕರಿಗೆ ಬೇರೆ ಹೇಳಬೇಕಾಗಿಲ್ಲ. ಎಂದಮೇಲೆ ಅಂತಹ ವಸ್ತುವು ಶಾಸ್ತ್ರಿಕಾಗ್ರೇಸರನಿಗೆ ಅಜ್ಞೇಯವಾಗಿ ತೋರಿದ್ದರೆ ಆಶ್ಚರ್ಯವಿಲ್ಲ. ನಮ್ಮ ಋಷಿಗಳಾದರೋ ಅದನ್ನೇ ಧೀರತನದಿಂದ ಸಾಕ್ಷಾತ್ಕರಿಸಿಕೊಂಡಿರುವರು. ಅದರ ಅನುಭವದ ಮುಂದೆ ಉಳಿದ ಶಾಸ್ತ್ರಗಳೆಲ್ಲ ನಿಸ್ತೇಜವಾಗುವವೆಂದು ಅವರು ಸ್ವಾಭಾವಿಕವಾಗಿಯೇ ಕಂಡುಹಿಡಿದರು. ಅದೊಮ್ಮೆ ನಮ್ಮ ಕೈವಶವಾಯಿತೆಂದರೆ ಮನುಷ್ಯನು ಕೃತಕೃತ್ಯನಾಗುವನೆಂದು ಅವರು ಸಾರಿಸಾರಿ ಹೇಳಿದರು. ಇದರ ಸುಖವನ್ನಾದರೂ ಉಂಡು ನೋಡಿರೆಂದು ಅವರು ಕರುಣೆಯಿಂದ ಅಜ್ಞಜನರಿಗೆ

ಶೋಧಿಸಹತ್ತಿದರು. ಆದರೆ ಇದರ ಬಗ್ಗೆ ಮಾತನಾಡುವಾಗ ಮಾತ್ರ ಅವರೂ ಸ್ಪೆನ್ಸರಸಾಹೇಬರ ಮಾರ್ಗವನ್ನೇ ಅನುಸರಿಸಿದರೆಂಬುದು ಸ್ಪಷ್ಟವಿದೆ. ಅದು ಎಲ್ಲಕ್ಕೂ ಮೂಲವಾಗಿರುವುದರಿಂದ ಅದನ್ನು ಏತರಿಂದ ಅಳೆಯಬೇಕು? ಹೇಗೆ ಸಿದ್ಧಮಾಡಿ ತೋರಿಸಬೇಕು? ಮಾನವವ್ಯವಹಾರವೆಲ್ಲ ಇದರಿಂದಲೇ ಸಿದ್ಧವಾಗುವುದರಿಂದ ಅದಕ್ಕೂ ನಾವು ಹಿಂದೆ ಹೋಗುವುದು ಶಕ್ಯವಿಲ್ಲೆಂದು ನಮ್ಮ ಋಷಿಗಳು ಸ್ಪಷ್ಟವಾಗಿ, ಸರಳವಾಗಿ, ಆದರೂ ನಿರ್ಭಿಡೆಯಿಂದ, ಹೇಳಿರುವರೆಂಬುದು ಎಷ್ಟು ಸಂತೋಷದ ಮಾತು! ( रत्नप्रभा while Commenting on ब्रह्मसूत्रभाष्य of श्रीशंकर ೨.೩.೭:— प्रमाता च प्रमाणं च प्रमेयं प्रमितिस्तथा । यस्य प्रसादात् सिध्यन्ति तत्सिद्धौ किमपेक्ष्यते॥; cf. the famous "cogito ergo Sum" of Descartes; अस्ति स्वयमित्यस्मिन्नर्थे कस्यास्ति संशयः पुंसः । अत्रापि संशयश्चेत् यः संशयिता स एव भवसि त्वम् ॥ स्वात्मनिरूपण ४; अनुभवति विश्वमात्मा विश्वेनासौ न चानुभूयेत । न खलु प्रकाश्यतेऽसौ विश्वमशेषं प्रकाशयन् भानुः ॥ स्वात्मनिरूपणम् ೧೭. )

ಇಷ್ಟೇ ಅಲ್ಲ; ಮೇಲೆ ಜಡವಾಗಿ ತೋರುವ ನಿಶ್ಚೈತನ್ಯವೂ ಕೂಡ ವಸ್ತುತಃ ಚೈತನ್ಯಮಯವಾಗಿರುವುದೆಂದು ಈಗಿನ ಶಾಸ್ತ್ರಜ್ಞರು ಕಂಡುಹಿಡಿದದ್ದನ್ನೇ ನಮ್ಮ ಪ್ರಾಚೀನ ಋಷಿಗಳು ಪ್ರತ್ಯಕ್ಷವಾಗಿ ಅನುಭವಿಸುತ್ತಿದ್ದರು. ಜಡದ ವಿಭಜನೆಯನ್ನು ಮಾಡುತ್ತ ಹೋದರೆ ವೆಂದರೆ ಸುಮಾರು ೯೮ ಮೂಲಧಾತುಗಳು ಸಿಕ್ಕುತ್ತವೆಂದೂ, ಅವು ಒಂದರಿಂದೊಂದು ಹುಟ್ಟಿರುವುದು ಶಕ್ಯವಿಲ್ಲೆಂದೂ ಇಲ್ಲಿಯ ವರೆಗಿನ ಭೌತಿಕಶಾಸ್ತ್ರಜ್ಞರ ಸಿದ್ಧಾಂತವಾಗಿತ್ತು. ಅವುಗಳಲ್ಲಿ ಕೂಡ ಅಣುಗಳೂ, ಆ ಅಣುಗಳಲ್ಲಿ ಪರಮಾಣುಗಳೂ ಇರುವವೆಂದು ಅವರು ಬಗೆಯುತ್ತಿದ್ದರು. ಆದರೆ ಆ ಪರಮಾಣುಗಳ ನಿಜವಾದ ರಹಸ್ಯವೇನಿರಬೇಕೆಂದು ಶಾಸ್ತ್ರಜ್ಞರು ಮತ್ತೆ ವಿಚಾರಮಾಡಹತ್ತಿದರು. ಮತ್ತೂ ಆ ಪರಮಾಣುಗಳ ಮೂಲ ಘಟಕಗಳಾವವೆಂಬುದನ್ನೂ ಬಹುಸೂಕ್ಷ್ಮವಾಗಿ ಶೋಧಿಸಹತ್ತಿದರು. ಪ್ರತಿಯೊಂದು ಪರಮಾಣುವಿನಲ್ಲಿ ಮಧ್ಯದಲ್ಲಿರುವುದೊಂದು ಧನ ವಿದ್ಯುತ್ಕಣವಿರುವುದೆಂದೂ, ಸೂರ್ಯನ ಸುತ್ತು ಗ್ರಹಗಳು ತಿರುಗುತ್ತಿರುವಂತೆ ಅದರ ಸುತ್ತು ಋಣವಿದ್ಯುತ್ಕಣಗಳು ಅಗಮ್ಯವಾದ

ವಿದ್ಯುಚ್ಛಕ್ತಿವಾದವು

ವೇಗದಿಂದ ತಿರುಗುತ್ತಿರುವವೆಂದೂ ಈಗಿನವರು ಕಂಡು ಹಿಡಿದಿದ್ದಾರೆ. (the A. B. C. of Atoms. —by Bertrand Russell). ವಸ್ತುತಃ ಪದಾರ್ಥಗಳಿಗೆ ಆಕಾರ, ಬಣ್ಣ ಮೊದಲಾದ ಸ್ಥೂಲಗುಣಧರ್ಮಗಳು ಇರುವುದೇ ಇಲ್ಲ. ಅವು (ಆಕಾರ, ಬಣ್ಣ ಮೊದಲಾದವು) ಸುತ್ತಲೂ ತಿರುಗುವ ಋಣ ವಿದ್ಯುತ್ಕಣಗಳ ಸಂಖ್ಯೆಯಮೇಲೂ, ಅವು ಯಾವ ವೇಗದಿಂದ ತಿರುಗುವವೆಂಬು ದರ ಮೇಲೂ ಅವಲಂಬಿಸಿವೆ. ಎಂದರೆ ನಿಜವಾಗಿ ನೋಡಿದರೆ ಜಡವಾಗಿ ಕಾಣು ವುದು ಜಡವಲ್ಲ; ವಿದ್ಯುಚ್ಛಕ್ತಿಯೇ ರೂಪಾಂತರವನ್ನು ಹೊಂದಿತೆಂದರೆ ಅದು ಜಡವಾಗಿ ಕಾಣಹತ್ತುವುದೆಂದು ತೀರ ಮೊನ್ನೆಮೊನ್ನೆ ಪ್ರಮಾಣಿಸಿ ನೋಡಿದ ಪ್ರಯೋಗಗಳಿಂದ ಗೊತ್ತಾಗಿದೆ. ಎಂತೆಯೇ “ ಪದಾರ್ಥಗಳ ಗುಣಧರ್ಮಗಳು ಅವುಗಳಲ್ಲಿರುವ ವಿದ್ಯುಚ್ಛಕ್ತಿಯ ಪರಿಮಾಣದಮೇಲೆ ಅವಲಂಬಿಸಿರುವ”ವೆಂದೂ (ಪು. ೧೧), “ಕನಿಷ್ಠಪಕ್ಷಕ್ಕೆ ಒಂದಾದರೂ ಋಣವಿದ್ಯುತ್ಕಣವು ಬೇರೊಂದು ಧನ ವಿದ್ಯುತ್ಕಣದ ಸುತ್ತು ತಿರುಗಲಾರಂಭಿಸಿದ ಹೊರತು ಜಡವು ಅಸ್ತಿತ್ವದಲ್ಲಿ ಬರ ಲಾರದು.…… ಹೀಗೆ ಮೂಲತಃ ಅಜಡವಾದ ಎರಡು ಭಿನ್ನಭಿನ್ನ ವಿದ್ಯುತ್ಕಣ ಗಳು ಒಂದರ ಸುತ್ತು ಒಂದು ತಿರುಗಹತ್ತಿದವೆಂದರೆ ಜಡವು ಗೋಚರವಾಗ ಹತ್ತುವುದು” ಎಂದೂ (ಪು. ೧೭) ಮೇನರ್ಡ ಶಿಪ್ಲೇ (Maynard Shipley) ಎಂಬವರು ತಮ್ಮ “The A. B. C. of the Electron theory of Matter” ಎಂಬ ಪುಸ್ತಕದಲ್ಲಿ ಹೇಳಿದ್ದಾರೆ. ಇದರಿಂದ ಮೇಲೆ ಹೇಳಿದ ೯೮ ಮೂಲಧಾತುಗಳೂ ಕೂಡ ವಿದ್ಯುಚ್ಛಕ್ತಿಯ ಭಿನ್ನಭಿನ್ನವಾದ ರೂಪಾಂತರಗಳೇ ಮಾತ್ರವೆಂಬುದು ಗೊತ್ತಾಗುವುದು. ಎಂದರೆ ಒಟ್ಟಿನಮೇಲೆ ಪ್ರತ್ಯಕ್ಷವಾದ ಶಾಸ್ತ್ರೀಯ ವಿಭಜನೆಯಿಂದ ಹೊರಡುವ ಕಟ್ಟಕಡೆಯ ನಿರ್ಣಯ ವೇನೆಂದರೆ: ಅಜಡವಾದ ವಿದ್ಯುಚ್ಛಕ್ತಿಯು ಹೊರತು ಈ ವಿಶ್ವದಲ್ಲಿ ಬೇರೆ ಯಾವ ವಸ್ತುವೂ ಇಲ್ಲ. ನಮ್ಮ ಗೋಚರವಾಗುವ ವಸ್ತುಗಳೆಲ್ಲ ಈ ಒಂದೇ ಅಜಡ ವಾದ ಶಕ್ತಿಯ ರೂಪಾಂತರಗಳೇ ( ನಾಮರೂಪಗಳೇ ! ). ಈ ಒಂದೇ ಶಕ್ತಿಯು ಒತ್ತಟ್ಟಿಗೆ ಕಲ್ಲಾಗಿ, ಒತ್ತಟ್ಟಿಗೆ ಗಿಡವಾಗಿ, ಒತ್ತಟ್ಟಿಗೆ ನೀರಾಗಿ, ಒತ್ತಟ್ಟಿಗೆ ಅದ್ಭುತವಾದ ಖಗೋಳಗಳಾಗಿ, ಬೆಂಕಿಯಾಗಿ, ತೇಜವಾಗಿ, ಕಬ್ಬಿಣವಾಗಿ, ಬಂಗಾರ ಬೆಳ್ಳಿಯಾಗಿ, ಪುಸ್ತಕವಾಗಿ, ಮನುಷ್ಯನಾಗಿ, ಮನುಷ್ಯನ ಬುದ್ಧಿಯಾಗಿ– ಕಿಂಬಹುನಾ, ಈ ಸಕಲವಿಶ್ವವೇ ಆಗಿ ಪರಿಣಮಿಸುವುದು. ಎಂದರೆ ಜ್ಞಾನ, ಜ್ಞೇಯ,

ಜ್ಞಾತಾ ಎಂಬ ತ್ರಿಪುಟಿಗೂ ಕೂಡ ಈ ಶಕ್ತಿಯೇ ಆಧಾರವು. ಇಷ್ಟೋತ್ತಿನ ವರೆಗೆ "ಶಕ್ತಿಯುಕ್ತವಾದ ಜಡ"ವೆಂದು ಚರ್ಚಿಸಿರುವುದೂ ಕೂಡ ಪರಮಾರ್ಥತಃ "ಅಜಡವಾದ ಶಕ್ತಿಯೇ" ಇರುವುದೆಂದು ಈ ಶೋಧಗಳ ಅಭಿಪ್ರಾಯವಿದೆ. ಈ ಮಾತು ಗತಿಸಿಹೋದ ಹತ್ತಿಪ್ಪತ್ತು ವರುಷಗಳೊಳಗಿನ ಶೋಧವಾಗಿರುವುದರಿಂದ ಇದು ಸ್ಪೆನ್ಸರ ಸಾಹೇಬರಿಗೆ ಗೊತ್ತಿರಲಿಲ್ಲ. ಆದುದರಿಂದ ವಿಕಾಸವಾದದೊಳಗಿನ ಮೂಲಬಿಂದುವಾದ "ಶಕ್ತಿಯುತವಾದ ಜಡವು" ಇದರಿಂದ "ಅಜಡವಾದ ಶಕ್ತಿ" ಯಾಗಿರುವುದೆಂದು ಬೇರೆ ಹೇಳಬೇಕಾಗಿಲ್ಲ. ಇರಲಿ. ಪಾರಜದಿಂದ ಬಂಗಾರ ಮಾಡುವ ಜರ್ಮನ ಪಂಡಿತನ ಶಾಸ್ತ್ರೀಯ ಹಂಚಿಕೆಯೂ ಕೂಡ ಈ ಶೋಧದ ಮೇಲೆಯೇ ಅವಲಂಬಿಸಿತ್ತು. ಪಾರಜದ ಒಂದು ಪರಮಾಣುವಿನಲ್ಲಿ ಧನ ವಿದ್ಯುತ್ಕಣದ ಸುತ್ತ ತಿರುಗುವ ಋಣವಿದ್ಯುತ್ಕಣಗಳ ಸಂಖ್ಯೆಯು ಬಂಗಾರದ ಪರಮಾಣುವಿನ ಅದೇ ಸಂಖ್ಯೆಗಿಂತ ಒಂದೆರಡರಿಂದ ಮಾತ್ರ ಹೆಚ್ಚಿರುವುದಂತೆ ! (ಪಾರಜದಲ್ಲಿ ೮೦, ಬಂಗಾರದಲ್ಲಿ ೭೯ ಇರಬಹುದೆಂದು ಎಲ್ಲಿಯೋ ಓದಿದಂತೆ ನೆನಪಿದೆ.) ಹೀಗೆ ಹೆಚ್ಚಾದ ಋಣವಿದ್ಯುತ್ಕಣಗಳನ್ನು ತೆಗೆದುಹಾಕುವುದು ಶಕ್ಯವಿದ್ದರೆ ಪಾರಜವನ್ನೆಲ್ಲ ಬಂಗಾರವಾಗಿ ಮಾಡಬಹುದು. ಸಾವಿರಾರು ವರುಷಗಳಿಂದ ಕಿಮಿಯಾದ ಶೋಧಕ್ಕೆ ಬಿದ್ದ ಜನರ ಪ್ರಯತ್ನಗಳಿಗೆ ಈ ರೀತಿಯಿಂದ ಜಯವು ಸಿಕ್ಕಿತೆಂಬುದನ್ನು ನೋಡಿದರೆ ಯಾರಿಗೆ ಆಶ್ಚರ್ಯವಾಗಲಿಕ್ಕಿಲ್ಲ ! ಇರಲಿ. ನಮಗೆ ಸದ್ಯಕ್ಕೆ ಬೇಕಾದ ಮಾತೆಂದರೆ: ಈ ವಿಶ್ವದೊಳಗೆ ಸಕೃದ್ದರ್ಶನಕ್ಕೆ ಜಡವೆಂದು ತೋರಿಬರುವ ವಸ್ತುವೆಲ್ಲ ನಿಜವಾಗಿ ಅಜಡವಾದ ವಿದ್ಯುಚ್ಛಕ್ತಿಯಾಗಿರುವುದು; ಆದರೆ ಈ ವಿದ್ಯುಚ್ಛಕ್ತಿಯ ವಾಸ್ತವವಾದ ಸ್ವರೂಪವು ಇನ್ನೂವರೆಗೆ ಸಂಪೂರ್ಣವಾಗಿ ಗೊತ್ತಾಗಿರುವುದಿಲ್ಲ; ಎಂಬ ಮೊದಲಾದ ಸಿದ್ಧಾಂತಗಳೇ ಸರಿ. ಈ ರೀತಿಯಿಂದ ಭೌತಿಕಶಾಸ್ತ್ರವು ತನ್ನ ಸಮಾಧಿಯನ್ನು ತಾನಾಗಿಯೇ ಕಟ್ಟಿಕೊಂಡಿರುವುದೆಂಬುದು ಎಷ್ಟು ವಿಚಾರಾರ್ಹವಾದ ಮಾತು! ಶಾಸ್ತ್ರಜ್ಞರು ಇನ್ನೂ ಮುಂದೆ ಹೋದರೆಂದರೆ ನಮ್ಮ ನಿರ್ಗುಣಬ್ರಹ್ಮನ ಸ್ಪಷ್ಟವಾದ ಕಲ್ಪನೆಗೇ ಬಂದು ಮುಟ್ಟುವರೆಂದು ಕಲ್ಪಿಸಿದರೆ ತಪ್ಪೇನು ? ವಸ್ತುತಃ ಈ ಜಗತ್ತು ಅಜಡವಾಗಿರುವುದೆಂದು ಶಾಸ್ತ್ರಜ್ಞನೂ ಒಪ್ಪುತ್ತಾನೆ. ವೇದಾಂತಿಯೂ ಒಪ್ಪುತ್ತಾನೆ. ಆದರೆ ಅದು ಅಜ್ಞಾತವಾದ ವಿದ್ಯುಚ್ಛಕ್ತಿಯೆಂದು ಶಾಸ್ತ್ರಜ್ಞನು ಹೇಳಿದರೆ, ಚೈತನ್ಯಾತ್ಮಕವಾದ ಬ್ರಹ್ಮವೆಂದು ವೇದಾಂತಿಯು ಹೇಳುತ್ತಾನೆ. ನಿಮ್ಮ ಆ ಅಜ್ಞಾತಶಕ್ತಿಯೇ ನಮ್ಮ

ಬ್ರಹ್ಮನೇಕಾಗಿರಬಾರದೆಂದು ವೇದಾಂತಿಯು ಪ್ರಶ್ನಿಸಿದರೆ ಅದರಲ್ಲಿ ತಪ್ಪೇನು? ಮತ್ತು ಈ ಜಗತ್ತು ಜಡವಾಗಿರುವುದೆಂಬ ಕಲ್ಪನೆಯು ಶುದ್ಧನಾದ ಚೇತನ ಬ್ರಹ್ಮನ ಮೇಲೆ ಅಧ್ಯಾಸಕಲ್ಪಿತವಾಗಿರುವುದೆಂದು ಅಭಿಪ್ರಾಯಬಟ್ಟರೆ ಅದರಲ್ಲಿ ದೋಷವೇನು ?

ಆಧುನಿಕ ಭೌತಿಕಶಾಸ್ತ್ರಗಳೂ ಒಂದು ದೃಷ್ಟಿಯಿಂದ ಶ್ರೀಶಂಕರಾಚಾರ್ಯರ ಅಧ್ಯಾಸವಾದವನ್ನೇ ಸಮೀಪಿಸಹತ್ತಿರುವವೆಂದು ಸೂಕ್ಷ್ಮವಾಗಿ ವಿಚಾರ ಮಾಡಿದವರಿಗೆ ತೋರಿಬಾರದೆ ಇರದು. ಆದರೆ ಇದೆಲ್ಲ ವಿಷಯವನ್ನು ಚರ್ಚಿಸುವ ಬೇರೊಂದು ಪುಸ್ತಕವನ್ನೇ ಬರೆಯುವ ವಿಚಾರಮಾಡಿರುವೆವಾದುದರಿಂದ ಅದನ್ನಿಲ್ಲಿ ವಿಶೇಷವಾಗಿ ಬೆಳಿಸುತ್ತ ಕೂಡಲಾರೆವು. ಮತ್ತು ಅದನ್ನು ಚರ್ಚಿಸುವುದೂ ನಮ್ಮ ಪ್ರಸ್ತುತ ಉದ್ದೇಶವಲ್ಲ. ವಾಚಕರ ಅವಗಾಹನೆಗಾಗಿ ಏನೋ ಒಂದೆರಡು ಶಬ್ದಗಳನ್ನು ಮಾತ್ರ ಇಲ್ಲಿ ಬರೆಯುವೆವು.

ಈ ಆದಿಭೌತಿಕ ಅಧ್ಯಾಸವಾದವು ಜರ್ಮನಿಯ ಪಂಡಿತ ಶ್ರೇಷ್ಠನಾದ ಕಾಂಟನಿಂದ ಜನಿಸಿತೆಂದು ಈ ಮೊದಲೇ ಹೇಳಿರುವೆವು. ನಮ್ಮ ಜ್ಞಾನವೆಲ್ಲ ನೌಮೆನನ್ (Noumenon or Thing-in-itself) ಎಂದರೆ ಅತೀಂದ್ರಿಯವಾದ ಶಾಶ್ವತವಸ್ತುವಿನ ಮೇಲೆ ಕಲ್ಪಿಸಿದ ಅಧ್ಯಾಸವೇ ಎಂದು ಹೇಳಬಹುದು. ಇದೆಲ್ಲ ವಿಷಯವನ್ನು ಅವನು ತನ್ನ ಪ್ರಸಿದ್ಧವಾದ ಒಂದೇ ವಾಕ್ಯದಲ್ಲಿ ತಿಳಿಸಿಬಿಟ್ಟಿದ್ದಾನೆ. "(ಮಾನವ) ಬುದ್ಧಿಯು (ಬಾಹ್ಯ) ಸೃಷ್ಟಿಯನ್ನು ಹುಟ್ಟಿಸದಿದ್ದರೂ, ಅದನ್ನು ಮಾಡುವ ಕರ್ತೃವೆಂದರೆ ಅದೇ (ಬುದ್ಧಿಯು)." (The understanding makes Nature, though it does not create it) ಎಂದರೆ ಹೊರಗಣ ವಸ್ತುವು ಮಾನವಬುದ್ಧಿಯ ರಾಜ್ಯದಲ್ಲಿ ಸೇರಬೇಕಾದರೆ, ಅದು ಕೆಲವು ಕ್ರಮಸಿದ್ಧ ದ್ವಾರಗಳನ್ನು ದಾಟಬೇಕಾಗುತ್ತದೆ. ಆ ಮೇಲೆ ಮಾತ್ರ ಆ ಆ ವಸ್ತುವು ಆ ಆ ಮನುಷ್ಯನಿಗೆ ಜ್ಞಾತವಾದಂತಾಯಿತೆಂದು ನಾವು ಹೇಳುತ್ತೇವೆ. ಉದಾ: ಹೊರಗಿನದೊಂದು ಪುಸ್ತಕವನ್ನು ನಾನು ನೋಡಿದೆನೆಂದು ತಿಳಿಯುವ. ಅದರ ಜ್ಞಾನವು ನನಗಾಯಿತು, ಎಂದು ಕೆಲವು ಹೊತ್ತಿನ ಮೇಲೆ ನಾನು ಹೇಳುವೆನಷ್ಟೇ ? ಆದರೆ ಈ ನನ್ನ ವಾಕ್ಯದ ನಿಜವಾದ

ಆದಿಭೌತಿಕ ಅಧ್ಯಾಸವಾದವು

ಅರ್ಥವೇನು ? ಎಂದು ವಿಚಾರಮಾಡಹತ್ತಿದರೆ ನಮಗೇನು ಕಂಡುಬರುವುದು ? ನನ್ನ ಕಣ್ಣುಗಳಿಗೆ ಪ್ರಕೃತಿಸಿದ್ಧವಾದ ಹೊರಗಿನ ಪುಸ್ತಕವು ಕಾಣಿಸುವುದು; ನೇತ್ರೇಂದ್ರಿಯವೂ ಆ ಪುಸ್ತಕವೂ ಒಂದಕ್ಕೊಂದು ಸಮೀಪವಲ್ಲಿ ಬರುವವು. ಎಂದರೆ ನೇತ್ರೇಂದ್ರಿಯಗಳಿಂದ ಏನೋ ಒಂದು ಕಲ್ಪನೆಯು ಮಿದುಳಿಗೆ ಹೋಗಿ ಮುಟ್ಟುವುದು. ಅಲ್ಲಿಂದ ಬುದ್ಧಿಯ ಕೆಲವು ಕ್ರಮಗಳಿರುವವು. ಆ ಕ್ರಮಕ್ಕನು ಸರಿಸಿ ಆ ಪುಸ್ತಕದ ಏಕೀಕೃತಜ್ಞಾನವಾಗುವುದು. ಇದನ್ನೇ ನಾವು ಮುಂದೆ ಜ್ಞಾನ ವೆಂದು ಕರೆಯುತ್ತೇವೆ. ಸ್ವಭಾವತಃ ಬುದ್ಧಿಯ ಸ್ವತಸ್ತ್ವಾದ ಈ ಮೂಲಬುದ್ಧಿಯ ಕ್ರಮಗಳೇ ಅಥವಾ ಜ್ಞಾನದ್ವಾರಗಳೇ ಕಾಂಟನಿಂದ "ಕೆಟಾಗರೀಜ"ಎಂದು ಕರೆ ಯಲ್ಪಟ್ಟಿವೆ. ಎಂದರೆ ವಸ್ತುತಃ ನಾವು ಮಾನವಜ್ಞಾನವೆಂದು ಕರೆಯುವ ವಸ್ತು ವಿಗೆ ಎರಡು ಭಾಗಗಳುಂಟು. ನಮ್ಮ ಇಂದ್ರಿಯಸಂಯೋಗದಲ್ಲಿ ಬಂದ ಬಾಹ್ಯ ಸೃಷ್ಟಿಯು ವಸ್ತುವು ಮೊದಲನೆಯದು. ಅದನ್ನು ತಿಳಿದುಕೊಳ್ಳುವ ನಮ್ಮ ಬುದ್ಧಿ ಶಕ್ತಿಯು ಎರಡನೆಯದು. ಹೊರಗಿನ ವಸ್ತುವು ಪೆಟ್ಟಿಗೆಯೊಳಗಿನ ಪೊಳ್ಳೆಂದು ತಿಳಿ ದರೆ ಆ ಪೆಟ್ಟಿಗೆಯೇ ಬುದ್ಧಿಯ ಹೊದಿಕೆಯೆಂದು ಹೇಳಬಹುದು. ಇರಲಿ. ಇದು ಮಾನಸಶಾಸ್ತ್ರದ ಮೂಲಸಿದ್ಧಾಂತವಾದರೂ, ಅದರ ನಿಜವಾದ ಮರ್ಮಾಂಶವಾ ದರೂ ತಿಳಿಯಬೇಕಾದರೆ ಅದಕ್ಕಾಗಿ ಬೇರೊಂದು ಪ್ರಕರಣವನ್ನಾದರೂ, ಬರೆಯು ಬೇಕಾಗುವಂತಿರುವುದರಿಂದ ಇಷ್ಟಕ್ಕೇ ಅದರ ಚರ್ಚೆಯನ್ನು ಸಾಕುಮಾಡುವುದು ಪ್ರಶಸ್ತವೆನಿಸುತ್ತಿದೆ. ಈ ಸಿದ್ಧಾಂತವು ಸಾಂಖ್ಯಶಾಸ್ತ್ರದ ಜನಕನಾದ ಕಪಿಲ ಮಹರ್ಷಿಗೂ ಗೊತ್ತಿತ್ತೆಂದು ಸ್ವಾಮೀ ವಿವೇಕಾನಂದರು ಒಂದೆಡೆಗೆ ಹೇಳಿದ್ದಾರೆ. ಇದೇ ಮಾರ್ಗವನ್ನು ಹಿಡಿದು ಇನ್ನೂ ಮುಂದು ಮುಂದಕ್ಕೆ ಹೋದೆವೆಂದರೆ ನಾವು ಕ್ರಮಶಃ ಅಧ್ಯಾಸವಾದಕ್ಕೆ ಹೋಗಿ ಮುಟ್ಟಬಹುದು. ಕಿಂಬಹುನಾ, ಪ್ರೊ. ಎಡಿಂಗ್ಟನ್ ಮೊದಲಾದ ಕೆಲವು ಆಧುನಿಕಪಂಡಿತರು (ಸದ್ಯಕ್ಕೆ ಇಂಗ್ಲಂಡ ದಲ್ಲಿ ಇವರು ನಾಮಾಂಕಿತ ಪ್ರೊಫೇಸರರಾಗಿದ್ದಾರೆ ) ನಮ್ಮ ಶಾಸ್ತ್ರೀಯ ನಿಸರ್ಗ ನಿಯಮಗಳೆಂದರೆ (Natural Laws )ಮಾನವಬುದ್ಧಿಯು ಬಾಹ್ಯಸೃಷ್ಟಿಯ ಮೇಲೆ ಕಲ್ಪಿಸಿದ ಅಧ್ಯಾಸಮಾತ್ರಗಳೆಂದು ಸ್ಪಷ್ಟವಾಗಿ ತಮ್ಮ " New Cosmology " ಎಂಬ ಪುಸ್ತಕದಲ್ಲಿ ಒಪ್ಪಿಕೊಂಡಿದ್ದಾರೆ. ಎಂದರೆ ನಾವು ಶೋಧಿ ಸಿದ ನಿಯಮಗಳೆಲ್ಲ ಸೃಷ್ಟಿಯಲ್ಲಿ ನಿಜವಾಗಿಯೇ ಇರುವವೋ ಇಲ್ಲವೋ ಯಾರು ಬಲ್ಲರು ? ನಾವು ನಮಗೆ ಉಪಯೋಗವಾಗುವಂತೆ ಕೆಲವು ನಿಯಮಗಳನ್ನು

ಬಾಹ್ಯಸೃಷ್ಟಿಯಮೇಲೆ ಕಲ್ಪಿಸಿಕೊಂಡು, ನಮ್ಮ ವ್ಯವಹಾರವನ್ನು ಸಾಗಿಸುತ್ತೇವೆ. ಇದರಮೇಲಿಂದ ನಮ್ಮ ವ್ಯಾವಹಾರಿಕ ಸತ್ಯವೆಲ್ಲ ಅಧ್ಯಾಸವೆಂದೇ ಅರ್ಥಮಾಡಬಹುದೇ ಹೇಗೆಂಬುದನ್ನು ವಾಚಕರೇ ತರ್ಕಿಸಲಿ. ಇದರ ಬಗ್ಗೆ ಹೆಚ್ಚಾಗಿ ಬರೆಯುವ ಮೊದಲು ಏಕಪಕ್ಷೀಯವಾದ ಆವ ಸಿದ್ಧಾಂತವನ್ನೂ ನಾವು ವಾಚಕರಿಗೆ ಸಮರ್ಪಿಸಬೇಕೆಂದು ಇಚ್ಛಿಸುವುದಿಲ್ಲ. ಆದುದರಿಂದ ಇಷ್ಟಕ್ಕೇ ಈ ವಿಷಯವನ್ನು ಮುಗಿಸಿ ನಾವು ವಾಚಕರ ರಜೆಯನ್ನು ತೆಗೆದುಕೊಳ್ಳುವೆವು.

ವಿಕಾಸವಾದವೂ ವೇದಾಂತವೂ. ಉಪಸಂಹಾರ

ಒಟ್ಟಿನ ಮೇಲಿಂದ ನೋಡಿದರೆ ವಿಕಾಸವಾದ ಮತ್ತು ವೇದಾಂತಗಳೆರಡೂ ವಿಶ್ವಕೂಟವನ್ನು ಬಿಡಿಸಬೇಕೆಂದೇ ಪ್ರವೃತ್ತವಾಗಿರುವವೆಂದು ಹೇಳಬಹುದು. ಎಂದರೆ ಪರಮಾರ್ಥಜ್ಞಾನವೇ ಎರಡೂ ಪಕ್ಷದವರ ಸಾಮಾನ್ಯವಾದ ಹೇತುವು. ಯಥಾರ್ಥ ಜ್ಞಾನವನ್ನು ಪಡೆಯಬೇಕೆಂದೇ ವೇದಾಂತಿಗಳೂ ವಿಕಾಸವಾದಿಗಳೂ ಸುವ್ಯವಸ್ಥಿತವಾದರೂ ಭಿನ್ನವಾದ ಮಾರ್ಗಗಳನ್ನನುಸರಿಸುತ್ತಾರೆ. ಉತ್ಕಟವಾದ ಜ್ಞಾನಲಾಲಸೆಯು ಇಬ್ಬರಿಗೂ ಸರಿಯಾಗಿದೆ. ಆದರೆ ವಿಕಾಸವಾದಿಗಳ ವಿಶೇಷ ದೃಷ್ಟಿಯು ಭೌತಿಕವಾದ ಜಡಸೃಷ್ಟಿಯ ಮೇಲೆಯೇ ಹೆಚ್ಚಾಗಿ ನೆಟ್ಟಿರುವುದು. ಅವರ ಮುಖ್ಯಪದ್ಧತಿಯು ಬಾಹ್ಯವಸ್ತುಗಳ ವಿಭಜನೆಯು. ಜಡಕ್ಕೆ ಆಧಾರವಾದ ಅಮೃತವಸ್ತುವು ನಮಗೆ ಅಜ್ಞೇಯವಾಗಿದೆಯೆಂದು ವಿಕಾಸವಾದಿಗಳು ಸರಳತನದಿಂದ ಒಪ್ಪಿಕೊಂಡಿದ್ದಾರೆ. ಆದುದರಿಂದ ನಾವದನ್ನು ಚರ್ಚೆಮಾಡುವುದು ಶಕ್ಯವಿಲ್ಲೆಂದೂ, ಅದು ಬಹುಶಃ ಧರ್ಮಶಾಸ್ತ್ರಗಳು ವರ್ಣಿಸುತ್ತಿರುವ ದೇವರಾಗಿರಬೇಕೆಂದೂ ಸ್ಪೆನ್ಸರ ಸಾಹೇಬರ ನಿರಾಗ್ರಹದ ಒಪ್ಪಿಗೆಯಿದೆ. ಮತ್ತು ಹೀಗಾಗುವುದಾದರೂ ಸಹಜವೇ ಇದೆ. ಪ್ರಮಾಣವೆಂದು ಹಿಡಿದ ಅವರ ಮಾರ್ಗದರ್ಶಕಗಳೇ ಆ ಕೆಲಸಕ್ಕೆ ಅಸಮರ್ಥವಾಗಿದ್ದರೆ, ಪಾಪ, ಅವರೇನು ಮಾಡಿಯಾರು? ಇಂದ್ರಿಯಜನ್ಯಜ್ಞಾನ ಮತ್ತು ಅನುಮಾನವೇ ಅವರಿಗೆ ಸತ್ಯಶೋಧನೆಯ ಮಾರ್ಗಗಳಾಗಿರುವುದರಿಂದ ಅವರಿಗೆ ಪೂರ್ಣವಸ್ತುವು ಅಜ್ಞೇಯವಾಗಿ ತೋರಿದುದು ಆಶ್ಚರ್ಯವಲ್ಲ. ನಮ್ಮ ವೇದಾಂತಿಗಳಾದರೋ ಇವುಗಳನ್ನು ಒಪ್ಪುವುದಿಲ್ಲೆಂದಲ್ಲ. ಆದರೆ ಅವಕ್ಕೆ ಸಂಕುಚಿತಾರ್ಥವನ್ನುಕೊಡದೆ, ಅಂತರ್ಮುಖತೆಯನ್ನು ಅವರು ಬಲಿಷ್ಟಪ್ರಮಾಣವೆಂದು ಒಪ್ಪಿಕೊಂಡು ಅದರ ಸಹಾಯದಿಂದಲೇ ಪರಮಜ್ಞಾನವನ್ನು ಪಡೆಯಬಹುದೆಂದು ಹೇಳುತ್ತಾರೆ. ವೇದಪ್ರಮಾಣದ ನಿಜವಾದ

ಅರ್ಥವೇನೆಂಬುದನ್ನಂತೂ ಮೇಲೆ ತೋರಿಸಿಯೇ ಇದ್ದೇವೆ. ಹೀಗೆ ಸಂಸ್ಕೃತ ವಾದ ಇಂದ್ರಿಯಗಳ ಸಹಾಯವನ್ನು ಹೊಂದಿದ ನಮ್ಮ ವೇದಾಂತಿಗಳಿಗೆ ವಿಕಾಸ ವಾದಿಗಳ ಅಜ್ಞೇಯವಸ್ತುವೇ ಅನುಭೂತವಾಯಿತೆಂದು ಹೇಳಬಹುದು. ಆವ ಒಂದು ವಸ್ತುವಿನ ಜ್ಞಾನಮಾತ್ರದಿಂದ ಉಳಿದ ಎಲ್ಲವುಗಳ ಜ್ಞಾನವಾಗುವುದೋ ಅಂತಹ ಒಂದೇ ಮೂಲವಸ್ತುವಿನ ಜ್ಞಾನವೇ ಗಮ್ಯವಾಗಿರುವುದೆಂದು ಛಾಂದೋಗ್ಯದಲ್ಲಿ ಹೇಳಿದ್ದಾರೆ. ಆವುದೊಂದು ಮಣ್ಣಿನ ಪಾತ್ರೆಯ ರಚನೆಯು ಚೆನ್ನಾಗಿ ತಿಳಿದಮೇಲೆ ಉಳಿದ ಮೃನ್ಮಯವಿಕಾರವೆಲ್ಲ ಹೇಗೆ ಜ್ಞಾತವಾದಂತಾಗುವುದೋ ಅಂತಹ ಒಂದೇ ವಸ್ತುವನ್ನು ತಿಳಿದುಕೊಳ್ಳುವುದು ನಮ್ಮೆಲ್ಲರ ಮುಖ್ಯವಾದ ಕರ್ತವ್ಯವು. ಏಕವಿಜ್ಞಾನದಿಂದ ಸರ್ವವಿಜ್ಞಾನವಾಗಬೇಕು; ಅಂತಹ ವಸ್ತುವೇ ವಸ್ತುವು. ಉಳಿದೆಲ್ಲ ವಸ್ತುಗಳನ್ನು ತೆಗೆದುಕೊಂಡು ಏನು ಮಾಡಬೇಕೆಂದು ನಮ್ಮ ಋಷಿಗಳು ಕೇಳುತ್ತಾರೆ. ಎಂತೆಯೇ **नानुध्यायेद् बहूञ्शब्दान्वाचो विग्लापनं हि यत् । अन्या वाचो विमुंचथ ।** ಎಂದು ಮೊದಲಾಗಿ ಮುಂಜಾಗ್ರತೆಯನ್ನು ಕೊಟ್ಟಿದ್ದಾರೆ. ಬ್ರಹ್ಮವೇ, ಆತ್ಮವೇ ಇಂತಹ ಏಕಮಾತ್ರವಾದ ವಸ್ತುವಾಗಿರುವುದರಿಂದ(**ब्रह्मैवेदं सर्वं, आत्मैवेदं सर्वम्।** ಛಾ ೭.೨೫.೨) ಆತ್ಮಜ್ಞಾನವೇ ಶ್ರೇಷ್ಠವಾದ ಜ್ಞಾನವೆಂದು ಅವರು ಒತ್ತಿ ಒತ್ತಿ ಹೇಳಿದ್ದಾರೆ. "ಈ ಎಲ್ಲ ಪ್ರಸಾರವು ಏತರಿಂದಾಗಿರುವುದೋ ಆ ಮೂಲವಸ್ತುವು ಅವಿನಾಶಿಯೆಂದು ತಿಳಿ. ಅವ್ಯಯವಾದ ಆ ಮೂಲವಸ್ತುವಿನ ನಾಶವನ್ನು ಯಾವನೂ ಮಾಡುವುದು ಶಕ್ಯವಿಲ್ಲ." (ಗೀ. ೨.೧೭.) ಎಂದು ಗೀತೆಯಲ್ಲಿ ಹೇಳಿದಂತೆ ಸ್ಪೆನ್ಸರ ಸಾಹೇಬರಾದರೂ ಆ ಅಜ್ಞೇಯವಸ್ತುವಿನಿಂದಲೇ ಈ ಜಗನ್ನೃತ್ಯವು ನಡೆದಿರುವುದೆಂದು ಒಪ್ಪಿಕೊಂಡಿದ್ದಾರೆ. ಇನ್ನು ಸಗುಣವರ್ಣನೆಗಳಿಂದ ನಿರ್ಗುಣಬ್ರಹ್ಮವು ದೂಷಿತವಾಗಲಾರದಾದುದರಿಂದ, ಈ ಸಗುಣಜ್ಞಾನವು ಅನಂತಕಾಲದ ವರೆಗೆ ಅನಂತ ರೂಪಾಂತರಗಳನ್ನು ಹೊಂದುತ್ತಹೋದರೂ, ಬ್ರಹ್ಮಜ್ಞಾನವು ಮಾತ್ರ ಈವೊತ್ತು ಒಂದು ನಾಳೆ ಇನ್ನೊಂದಾಗುವುದು ಶಕ್ಯವಿಲ್ಲ. ಅದು ಎಂದಾದರೂ ಏಕರೂಪವೇ. ಜ್ಞಾನವು ವಸ್ತುತಂತ್ರವಾಗಿರುವುದರಿಂದ ಅದು ಭಿನ್ನ ಭಿನ್ನ ರೂಪಿಯಾಗಲಾರದೆಂದು ಶ್ರೀಶಂಕರಾಚಾರ್ಯರು ಹೇಳಿದ್ದಾರೆ. ಮತ್ತು ಭೌತಿಕಶಾಸ್ತ್ರಗಳಾದರೂ ಕಟ್ಟಕಡೆಗೆ ಅಜಡವಾದ ಸಚ್ಛಕ್ತಿಯ ಹೊರತು ಬೇರೊಂದು ವಸ್ತುವಿಲ್ಲೆಂಬ ಸಿದ್ಧಾಂತವನ್ನು ತೆಗೆದಿವೆ. ನಿಸರ್ಗನಿಯಮಗಳೆಲ್ಲ ಅಧ್ಯಾಸವೆಂದು ಅವು ಒಪ್ಪು

ತ್ತಿವೆ. ಇನ್ನು ಜೀವ, ಸಂಸಾರ, ಬಂಧ, ಮೋಕ್ಷ ಮೊದಲಾದ ಕಲ್ಪನೆಗಳೆಲ್ಲ ವಸ್ತುತಃ ಅನೃತವಾಗಿರುವವೆಂದು ವೇದಾಂತವೂ ನಿರ್ಭಿಡೆಯಿಂದ ಹೇಳುತ್ತದೆ. ಹೀಗೆ ಸ್ಥೂಲಾನಿಖನನ ನ್ಯಾಯದಂತೆ ನಾವು ಎತ್ತೆತ್ತ ವಿಚಾರಮಾಡಿ ನೋಡಿದರೂ ವೇದಾಂತದ ಸಾರ್ವಭೌಮತ್ವವು ಸಿದ್ಧವಾಗುವುದಿಲ್ಲವೇ ? ಅಂತಹ ವೇದಾಂತಕ್ಕೆ ಅಧಿಕಾರಿಗಳಾದ ನಮ್ಮ ಭಾಗ್ಯವೆಷ್ಟು ಹಿರಿದಾಗಿರಬೇಕು ? ಎಂತೆಯೇ ವಿವೇಕಾನಂದರು “ ಭಾರತೀಯನಾದುದಕ್ಕೆ ಸಂತೋಷಪಡೆ ”ಂದು ಬಲು ಇಂಪಾಗಿ ಹಾಡಿರುವರಲ್ಲವೇ ? ಎಂತೆಯೇ ವ್ಯಾಸಮಹರ್ಷಿಗಳು “ ಭಾರತದಲ್ಲಿ ಜನ್ಮ ಸಿಗುವುದೇ ದುರ್ಲಭವು ” ಎಂದು ದೀರ್ಘವಾಗಿ ಉಚ್ಚಸ್ವರದಿಂದ ಘೋಷಿಸಿರುವರಲ್ಲವೇ ?

॥ॐ॥

॥ तत्सद्ब्रह्मार्पणमस्तु ॥

---

ಮುದ್ರಕರು—ಖಂ. ರಾ. ಭಿಸೆ, ಕ. ಪ್ರಿಂ. ವ. ಧಾರವಾಡ, ೯-೨೯-೩೦,೧೦೦೦

# ಶಬ್ದಕೋಶ

ಧಾರ್ಮಿಕರು, ತತ್ತ್ವಜ್ಞಾನಿಗಳು= ಇಲ್ಲಿ "ಧರ್ಮ"ವೆಂಬ ಶಬ್ದದಿಂದ ಇಂಗ್ಲಿಷದ "ರಿಲಿಜನ್" ಎಂಬ ಅರ್ಥವನ್ನು ತೆಗೆದುಕೊಳ್ಳಬೇಕು. ಸೃಷ್ಟಿ ನಿಯಮಗಳ ಮೇಲೆ ಪ್ರಭುತ್ವವುಳ್ಳ ಅತೀಂದ್ರಿಯಪುರುಷರು ( ದೇವತೆ ಅಥವಾ ದೇವತೆಗಳು) ಇರುವರೆಂದೂ, ಧ್ಯಾನಾದಿಗಳಿಂದ ಅವರನ್ನು ವಶಪಡಿಸಿಕೊಳ್ಳ ಬಹುದೆಂದೂ "ಧಾರ್ಮಿಕರು" ತಿಳಿಯುತ್ತಾರೆ. "ಧರ್ಮ"ದ ವೈಶಿಷ್ಟ್ಯ ವೆಂದರೆ ದೇವರನ್ನು "ಪ್ರತ್ಯಕ್ಷ"ವಾಗಿ ಸಾಕ್ಷಾತ್ಕರಿಸಿಕೊಳ್ಳಬೇಕೆಂಬ ನಂಬಿ ಗೆಯು. ಮತ್ತು ಆ ಕೆಲಸವನ್ನು ಅವರು ಪ್ರಾರ್ಥನೆ ಮೊದಲಾದವುಗಳಿಂದ ಸಾಧಿಸಬೇಕೆನ್ನುತ್ತಾರೆ. "ತತ್ತ್ವಜ್ಞಾನ"ವೆಂದರೆ ಇಂಗ್ಲಿಷದ "ಫಿಲಾ ಸಾಫಿ"ಯು. ಅನುಮಾನವನ್ನೇ ಮುಖ್ಯಪ್ರಮಾಣವನ್ನಾಗಿಟ್ಟುಕೊಂಡು ಜಗತ್ತಿನ ಗೂಢವನ್ನು ಬಿಡಿಸಬೇಕೆನ್ನುವ ಅಭಿಪ್ರಾಯಕ್ಕೆ "ತತ್ತ್ವಜ್ಞಾನ"ವೆಂದು ಕರೆಯುಬಹುದು.

ಸ್ಫಿಂಕ್ಸ= ಗ್ರೀಕಜನರ ಕಲ್ಪನೆಯಂತೆ ಇವಳೊಬ್ಬ ರಾಕ್ಷಸಿಯು. ತನ್ನ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಕೊಡದವರು ಈಕೆಯಿಂದ ಹತ ರಾಗುತ್ತಿದ್ದರು.

ಗೋರ್ಡಿಯಸ್= ಒಬ್ಬಾನೊಬ್ಬ ಅರಸನು. ಇವನು ಒಂದು ಬಲು ತೊಡಕಾದ ಗಂಟನ್ನು ಹಾಕಿದ್ದನು. ಅದನ್ನು ಯಾರೂ ಬಿಚ್ಚಲು ಸಮರ್ಥ ರಾಗಲಿಲ್ಲ. ಅಲೆಕ್ಸಾಂಡರನೇ ಅದನ್ನು ಕಡೆಗೆ ಬಿಚ್ಚಿದನಂತೆ !

ಪ್ರಾಣಿಗಳ ನಿಯತತ್ವ= ಈ ಜಗತ್ತಿನಲ್ಲಿ ಸುಮಾರು ೮೪ ಲಕ್ಷ ಯೋನಿ ಗಳು ಇರುವವೆಂದು ಹೇಳುವರಲ್ಲ; ಅವುಗಳಲ್ಲಿ ಒಂದು ಜಾತಿಯ ಪ್ರಾಣಿಯು ಮತ್ತೊಂದರಿಂದ ಹುಟ್ಟಿರದೆ, ಅದು ಸೃಷ್ಟಿಯ ಆರಂಭಕಾಲದಿಂದಲೇ ಹಾಗೆಯೇ ಇದೆ. ಎಂದರೆ ಸೃಷ್ಟಿಕರ್ತನು ಈ ೮೪ ಲಕ್ಷ ಯೋನಿಗಳಲ್ಲಿ ಪ್ರತಿಯೊಂದು ಜಾತಿಗೆ ಒಂದು ಹೆಣ್ಣನ್ನು ಒಂದು ಗಂಡನ್ನು ಹುಟ್ಟಿಸಿ ನಿಮ್ಮ ಸಂಖ್ಯೆಯನ್ನು ಹೆಚ್ಚಿಸಿರಿ ಎಂದು ಹೇಳಿದನೆಂದು ಕಲ್ಪಿಸಬಹುದು. ಎಲ್ಲ ಪ್ರಾಣಿವರ್ಗಗಳೂ

ಸ್ವತಂತ್ರವಾಗಿ ಪ್ರಾರಂಭದಿಂದಲೇ ಜೀವಿಸಿರುವವೆಂದು ಹೇಳಬಹುದು. ಇವಕ್ಕೆ ಇಂಗ್ಲಿಷದಲ್ಲಿ Fixity of Species ಎಂದು ಹೆಸರು.

Theology= ದೇವಶಾಸ್ತ್ರ, ಧರ್ಮಶಾಸ್ತ್ರ.

Theological dogma= ದೇವಶಾಸ್ತ್ರದ ಆಗ್ರಹದ ವಾಕ್ಯಗಳು.

Revealed dogma= ದೇವಪ್ರೇರಣೆಯಿಂದ ಪ್ರಕಟವಾದ ಆಗ್ರಹ ಶಬ್ದಗಳು, ಅಥವಾ ಆಪ್ತವಾಕ್ಯಗಳು.

Axiom= ಸ್ವತಃಪ್ರಮಾಣಭೂತವಾದ, ಸ್ವತಃಸಿದ್ಧವಾದ ಮಾತು.

"ಸ್ವಾರ್ಥ ಮತ್ತು ಕರ್ತವ್ಯಗಳ ನಡುವಿನ ವೈಪರೀತ್ಯ"="Conflict between Interest and Duty." ಪ್ರತಿಯೊಬ್ಬನಿಗೆ ಆತ್ಮವೇ ಪ್ರಿಯವಾದ ವಸ್ತುವು. ತನ್ನ ಸಲುವಾಗಿ ಉಳಿದ ವಸ್ತುಗಳು ಬೇಕಾಗುತ್ತವೆ; ಉಳಿದ ವಸ್ತುಗಳಿಗಾಗಿ ಆತ್ಮನು ಎಂದೂ ಬೇಕಾಗುವುದಿಲ್ಲ. ಎಂದರೆ ಆತ್ಮವು ಎಂದಾದರೂ ಸಾಧ್ಯವೇ ವಿನಹ ಸಾಧನವಲ್ಲ. ಪ್ರಸಿದ್ಧವಾದ "ಮಂಗವೂ ಅದರ ಮರಿಯೂ" ಎಂಬ ಕಥೆಯನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು.

ಆದುದರಿಂದ ಈ ಲೋಕದಲ್ಲಿ ನಾವು ಕಷ್ಟವನ್ನು ಸಹಿಸಿಕೊಂಡು ಪರೋಪಕಾರವನ್ನು ಮಾಡುವುದು ಕೂಡ, ಅದರಿಂದ ಮುಂದೆ ನಮಗೆ ಒಂದಿಲ್ಲೊಂದು ರೀತಿಯಿಂದ ಲಾಭವಾಗಬೇಕೆಂಬ ವಿಶ್ವಾಸದಿಂದಲೇ. ಪರರಿಗಾಗಿ ನಾನು ಇಲ್ಲಿ ಕಷ್ಟಗಳನ್ನು ಸಹಿಸಿದರೆ, ಅದಕ್ಕೆ ಪ್ರತಿಫಲವಾಗಿ ದೇವರು ಪರಲೋಕದಲ್ಲಿ ನನಗೆ ಸೌಖ್ಯವನ್ನು ಕೊಡುತ್ತಾನೆಂದು ನಾವು ತಿಳಿಯುತ್ತೇವೆ. ಧರ್ಮಜ್ಞನಿಗೂ ನೀತಿಜ್ಞನಿಗೂ ಸಾಮಾನ್ಯತಃ ಇಹಲೋಕದ ಸೌಖ್ಯವು ಸಿಗುತ್ತಿರುವುದಿಲ್ಲೆಂದು ವಿಭೂತಿಪುರುಷರ ಚರಿತ್ರೆಗಳನ್ನೋದಿದರೆ ತಿಳಿಯುವಂತಿದೆ. ಕಿಂಬಹುನಾ, ದೊಡ್ಡವರಾಗುವುದೆಂದರೆ ದೊಡ್ಡ ದೊಡ್ಡ ಕಷ್ಟಗಳನ್ನು ಶಾಂತ ರೀತಿಯಿಂದ ಸಹನಮಾಡಲಿಕ್ಕೆ ಕಲಿಯುವುದೇ ಸರಿಯೆಂದು ಹೇಳಬಹುದು. ಇಂದಿನ ವರೆಗೆ ದೊಡ್ಡವರಾದವರೆಲ್ಲ ಈ ತರದ ದುಃಖಪ್ರಸಂಗಗಳನ್ನು ಅನುಭವಿಸಿದ ಮೇಲೆಯೇ ದೊಡ್ಡವರೆಂದು ಪ್ರಖ್ಯಾತರಾದರು. ಬಂಗಾರವು ಬಂಗಾರವೆಂದು ಗೊತ್ತಾಗುವುದು ಬೆಂಕಿಯಲ್ಲಿಯೇ ಅಲ್ಲವೆ ? ಈ ರೀತಿಯಿಂದ ಧರ್ಮ

ನೀತಿಗಳ ಬೆನ್ನುಹತ್ತಿದವರಿಗೆ ಐಹಿಕಸುಖವು ದುರ್ಲಭವೆಂಬುದು ಗೊತ್ತಿದ್ದರೂ, ಧರ್ಮನೀತಿಗಳನ್ನು ಅನುಸರಿಸುವುದು ತಮ್ಮ ಧರ್ಮವೆಂದು ಅವರು ತಿಳಿಯುತ್ತಾರೆ. ಹೀಗೆ ಕರ್ತವ್ಯಮಾರ್ಗವನ್ನು ಹಿಡಿದು ಧರ್ಮನೀತಿಗಳಿಗೆ ಅನುಸರಿಸಿ ನಡೆಯುಹತ್ತಿದರೆ ಇಲ್ಲಿಯು ಸ್ವಾರ್ಥಕ್ಕಂತೂ ( ಎಂದರೆ ಐಹಿಕಸುಖಕ್ಕೆ ) ಅವರು ಎರವಾಗುವರು. ಈ ರೀತಿಯಿಂದ ಕರ್ತವ್ಯ ಮತ್ತು (ಐಹಿಕ) ಸ್ವಾರ್ಥಗಳ ನಡುವೆ ವೈಪರೀತ್ಯವಿರುವುದೆಂದು ಹೇಳಬಹುದು. ಆದರೆ ಧರ್ಮನೀತಿಗಳಿಂದ ನಡೆಯುವುದು ನಿಜವಾದ ಸನ್ಮಾರ್ಗವಾಗಿದ್ದರೆ, ಆ ಮಾರ್ಗದಿಂದ ನಡೆದವನಿಗೆ ಪರಲೋಕದಲ್ಲಾದರೂ ಅದಕ್ಕೆ ಸಾಕಷ್ಟು ಪ್ರತಿಫಲವು ದೊರೆಯಬೇಕೆಂಬುದು ಸ್ಪಷ್ಟವಿದೆ. ಇಹಲೋಕದ ಈ ವೈಪರೀತ್ಯವನ್ನು ತೆಗೆದುಹಾಕುವುದಕ್ಕಾಗಿಯೇ ಪರಲೋಕದ ಕಲ್ಪನೆಯು ಅವಶ್ಯವಿರುವುದೆಂದು ನೀತಿಶಾಸ್ತ್ರಜ್ಞರು ಹೇಳುತ್ತಾರೆ. ಕರ್ತವ್ಯಮಾರ್ಗಕ್ಕೆ ಅನುಸರಿಸಿ ನಡೆದವನಿಗೆ ಈ ಲೋಕದಲ್ಲಿ ಸೌಖ್ಯ ಸಿಗದಿದ್ದರೂ, ಸ್ವರ್ಗಾದಿಗಳಲ್ಲಿ ಅವನಿಗೆ ಅದರ ಕೋಟಿಪಾಲು ಸೌಖ್ಯವು ಸಿಕ್ಕೇಸಿಗುವುದೆಂದು ಅವರ ಅಭಿಪ್ರಾಯವು. ಅದರಂತೆಯೇ ಈ ಲೋಕದಲ್ಲಿ ದುರ್ಮಾರ್ಗದಿಂದ ನಡೆಯುವವರಿಗೆ ಐಹಿಕಸುಖವು ಹಸ್ತಗತವಾದಂತೆ ಕಂಡರೂ, ಅದಕ್ಕೆ ತಕ್ಕ ಪ್ರಾಯಶ್ಚಿತ್ತವು ಅವರಿಗೆ ರೌರವಾದಿ ನರಕಗಳಲ್ಲಿ ಸಿಗುವುದೆಂದು ಅವರು ಕಾಯಾಸಕಟ್ಟುತ್ತಾರೆ. ಎಂತೆಯೇ ಸ್ವಾರ್ಥ ಮತ್ತು ಕರ್ತವ್ಯಗಳ ನಡುವಿದ್ದ ಈ ಐಹಿಕವೈಪರೀತ್ಯವನ್ನು ಸರಿಪಡಿಸಬಲ್ಲ ಕರ್ತೃವಾದ ದೇವರು ಇರುವನೆಂದೂ, ಆ ಕೆಲಸವನ್ನವನು ಮರಣಾನಂತರ ಮಾಡುವನೆಂದೂ ಹಲವು ಧರ್ಮಗಳ ಮತವು. ಹೀಗಿರದೆ ಮರಣಾನಂತರ ನಾವು ಪುನಃ ಜಡರೂಪವೇ ಆಗಿ ಹೋಗುವೆವೆಂದು ಕಲ್ಪಿಸಿದರೆ, ನಾವು ನಿಜವಾದ ಪರೋಪಕಾರವನ್ನು ಏಕೆ ಮಾಡಬೇಕೆಂಬುದನ್ನು ತಿಳಿಸಿಕೊಡುವುದು ಕಷ್ಟವಿದೆ. ಜಡವಾದದಿಂದ ಹೊರಡಬಹುದಾದ ಸರಳವಾದ ನೀತಿಶಾಸ್ತ್ರವೆಂದರೆ ಚಾರ್ವಾಕರ ಮತವೇ ಸರಿ !

Historical Method=ಐತಿಹಾಸಿಕ ಪದ್ಧತಿ

Struggle for Existence=ಜೀವನ ಕಲಹ. ಪ್ರತಿಯೊಂದು ಜೀವಿಯೂ ತಾನು ಬದುಕಿರಬೇಕೆಂದು ಉಳಿದೆಲ್ಲ ಪ್ರಾಣಿಗಳ ಸಂಗಡ ಬಡಿದಾಡಬೇಕಾಗುವುದು.

೨

Sense-experience=ಇಂದ್ರಿಯಜನ್ಯ ಅನುಭವ.

Emotion=ಭಾವನೆ.

Conscience=ಅಂತಃಕರಣ, ಅಂತರಾತ್ಮ.

Intuition=ಅಂತಃಸ್ಫೂರ್ತಿ.

Prejudices=ದುರಾಗ್ರಹಗಳು.

Observation=ಪರೀಕ್ಷಣೆ, ನೋಟ.

Classification=ವರ್ಗೀಕರಣ.

Laws=ಧರ್ಮ, ನಿಯಮ, ಕಟ್ಟು, ಕಟ್ಟಳೆ.

Wider law=ವಿಶಾಲತರವಾದ ನಿಯಮ.

Hypothesis=ಶಾಸ್ತ್ರೀಯ ಊಹೆ.

Verification=ತಾಳೆ ನೋಡುವುದು, ಸತ್ಯಸ್ಥಾಪನೆ.

Spectroscope=ಪ್ರಕಾಶಪ್ರಥಕ್ಕರಣಯಂತ್ರ.

Geology=ಭೂಗರ್ಭಶಾಸ್ತ್ರ.

Strata=ಪದರುಗಳು, ತರಗಳು.

Stratified Rocks=ಪ್ರಸ್ತರೀಭೂತಶಿಲೆಗಳು.

Horizontally=ಅಡ್ಡವಾಗಿ, ನೆಲಸಮನಾಗಿ, ಪ್ರತ್ಯಕ್ಕಾಗಿ.

Biology=ಜೀವಶಾಸ್ತ್ರ.

Botany=ವನಸ್ಪತಿಶಾಸ್ತ್ರ.

Zoology=ಪ್ರಾಣಿಶಾಸ್ತ್ರ.

Comparative Anatomy=ತುಲನಾತ್ಮಕ ಶಾರೀರಶಾಸ್ತ್ರ.

Vestigial Structures=ಹೆಗ್ಗುರುತಾಗಿ ಉಳಿದ ಹಿಂದಿನ ಕಾಲದ ದೇಹರಚನೆಗಳು.

Embryology=ಪಿಂಡಶಾಸ್ತ್ರ.

Geographical Distribution of Animals=ಪ್ರಾಣಿಗಳ ವಾಸಸ್ಥಾನ.

Arguments=ಉಪಪತ್ತಿಗಳು.

೩

Unknowable=ಅಜ್ಞೇಯ.

Knowable=ಜ್ಞೇಯ.

Space=ದಿಕ್, ಅಥವಾ ಆಕಾಶ.

Self-Consciousness=ಸ್ವಪ್ರಜ್ಞತೆ.

Uniformity of Law=ಧರ್ಮಸಾದೃಶ್ಯವು, ಕ್ರಮಬದ್ಧತೆ, ಬದ್ಧ ಕ್ರಮತೆ.

Integration of Matter=ದ್ರವ್ಯಸಂಯೋಗ.

Dissipation of Motion=ಗತಿಯ ಚದರಿಕೆ.

Processes=ಕಾರ್ಯಕ್ರಮಗಳು.

Evolution and Devolution=ಉತ್ಕ್ರಾಂತ್ಯವಕ್ರಾಂತಿಗಳು

Law of Evolution=ಉತ್ಕ್ರಾಂತಿಯ ನಿಯಮವು

Homogeneity=ಸಾದೃಶ್ಯ, ಏಕತ್ವ.

Heterogeneity=ವಿಸದೃಶತೆ, ಬಹುತ್ವ.

Coherence=ಹೊಂದಿಕೆ, ಸಂಬಂಧ, ಸ್ನೇಹ.

Cells=ಜೀವಕೋಶಗಳು.

Amphibious=ದ್ವಿಚರ.

೪

Past History of the Earth=ಪೃಥ್ವಿಯ ಗತಾಯುಷ್ಯದ ಇತಿಹಾಸವು.

Image=ಪ್ರತಿಬಿಂಬ.

Non-natural=ಅನೈಸರ್ಗಿಕ, ಸಾಮಾನ್ಯವಾಗಿ ಗೊತ್ತಿದ್ದ ನೈಸರ್ಗಿಕಜ್ಞಾನದ ಮೇಲಿಂದ ಉಪಪತ್ತಿಯನ್ನು ಹಚ್ಚಲಿಕ್ಕೆ ಬರದಂತಹದು.

Testimonial Evidence=ಮಾನವಸಾಕ್ಷಿ.

Circumstantial Evidence=ವಿದ್ಯಮಾನಸಾಕ್ಷಿ ಅಥವಾ ಪ್ರಮಾಣ.

Condensation=ಘನೀಭವನ.

Extent=ವ್ಯಾಪಕತೆ.

Azoic Rocks=ನಿರ್ಜೀವ ಅಥವಾ ಜೀವರಹಿತ ಶಿಲೆಗಳು.

ಜ

ಜೀವ=ಧರ್ಮವೆಂಬ ಶಬ್ದವನ್ನು ಬೇರೆ ಬೇರೆ ಅರ್ಥಗಳಲ್ಲಿ (ಪಂಥ ಅಥವಾ ಜಾತಿ, ಧಾರ್ಮಿಕ ಭಾವನೆ, ನಿಯಮ ಅಥವಾ ಕಟ್ಟು) ಉಪಯೋಗಿಸಿದಂತೆ ಜೀವಶಬ್ದವನ್ನೂ ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗಿಸಿದೆ. ಒಮ್ಮೆ ಇದು ವೇದಾಂತದ ಜೀವವೆಂಬ ಅರ್ಥದಲ್ಲಿಯೂ ಇನ್ನೊಮ್ಮೆ "life" ಎಂದರೆ ಜಡ ದಿಂದ ಭಿನ್ನವಾದ ಸ್ಥಿತಿಯನ್ನು ತೋರಿಸುವುದಕ್ಕಾಗಿಯೂ ಯೋಜಿಸಲ್ಪಟ್ಟಿದೆ. ಇದನ್ನು ಓದುಗರು ಚೆನ್ನಾಗಿ ಲಕ್ಷದಲ್ಲಿಟ್ಟು ಆ ಆ ಪ್ರಸಂಗಕ್ಕೆ ತಕ್ಕ ಅರ್ಥವನ್ನು ಮಾಡಿಕೊಳ್ಳಬೇಕು.

Protoplasm=ಜೀವನಾದಿರಸ, ಜೀವನರಸ, ಜೀವರಸ.

Living Protoplasm=ಸಚೇತನ ಜೀವರಸ.

Nucleated Protoplasm=ಸಬೀಜ ಅಥವಾ ಗಟ್ಟಿಯಾದ ಜೀವರಸ.

Chemistry=ರಸಾಯನಶಾಸ್ತ್ರ.

Carbon=ಅಂಗಾರ.

Spontaneous Generation=ಜೀವವನ್ನು ದೇವರಾಗಲಿ, ಬೇರೆ ಯಾರಾಗಲಿ ಹುಟ್ಟಿಸದೆ ಅದು ತಾನಾಗಿಯೇ ಆಕಸ್ಮಾತ್ತಾಗಿ ಪದಾರ್ಥಗಳ ವಿಶಿಷ್ಟ ಸಂಯೋಗದಿಂದ ವಿಶಿಷ್ಟ ಪರಿಸ್ಥಿತಿಯಲ್ಲಿ ಹುಟ್ಟಿತೆಂದು ಹೇಳುವುದು.

Temperature=ಉಷ್ಣತೆ.

Moisture=ದ್ರವತೆ.

Pressure=ಭಾರ.

Compound=ಸಂಯುಕ್ತ ದ್ರವ್ಯ.

Survival of the Fittest=ಬಲಿಷ್ಠರ ಬಾಳ್ವೆ. ಎಂದರೆ ಜೀವನ ಕಲಹದಲ್ಲಿ ಯಾರು ಜಯಶಾಲಿಗಳಾಗುವರೋ ಅಂತಹ ಬಲಿಷ್ಠರೇ ಈ ಜಗತ್ತಿನಲ್ಲಿ ಬದುಕಿ ಬಾಳ್ವೆಮಾಡುತ್ತಾರೆ.

Fixity=ಸ್ಥಿರತೆ.
Irritability=ಕೆರಳುವುದು, ಕೆರಳಿಕೆ.
Stimulus=ಉತ್ತೇಜಕ, ಪ್ರೇರೇಪಕ,
Power of Reproduction=ಪ್ರಜನನಶಕ್ತಿ.
Ovum=(ಹೆಂಗಸಿನ) ತತ್ತಿ.
Sperm=(ಗಂಡಸಿನ) ವೀರ್ಯಜಂತು.
Urea=ಉಚ್ಚಿ.

Proteins=The complex combinations of carbon, hydrogen, oxygen, and nitrogen.

೬

Azoic Period=ನಿರ್ಜೀವ ಶಿಲೆಗಳ ಕಾಲ.
Record of the Rocks=ಶಿಲಾಸಾಕ್ಷಿ.
Graphite=ಅಸಂಯುಕ್ತವಾದ ಅಂಗಾರದಂತಹದೊಂದು ವಸ್ತುವು.
Age of Fishes=ಮೀನದ ಯುಗ.
Moss=ಹಾವಸೆ.
Reptiles=ಉರಗಮನಗಳು.
Gills=ಮೀನಗಳ ಶ್ವಾಸಯಂತ್ರ.
Lungs=ಶ್ವಾಸಕೋಶ.
Mammals=ಸಸ್ತನ ಪ್ರಾಣಿಗಳು.
Metabolism=ದೇಹಪುಷ್ಟಿ.
Vertebrate=ಬೆನ್ನೆಲುಬಿನ ಪ್ರಾಣಿ.
Mental life=ಮಾನಸಿಕ ಜೀವನ.
Social instinct=ಸಾಮಾಜಿಕ ಭಾವನೆ.

Natural Selection=ಪ್ರಕೃತಿ ಅಥವಾ ಸೃಷ್ಟಿಸಂಗ್ರಹ. ಜೀವನ ಕಲಹದಲ್ಲಿ ಯಾರು ಬಲಿಷ್ಠರಾಗಿ ಬಾಳುತ್ತಾರೋ, ಅವರನ್ನೆ ಪ್ರಕೃತಿ ಅಥವಾ ಸೃಷ್ಟಿಯು ಆರಿಸಿತೆಗೆದು ಇವರೇ ಶ್ರೇಷ್ಠರೆಂದು ಹೇಳುವದೆಂದು ಕಲ್ಪಿಸಬಹುದು.

ಈ ತರದಿಂದ ಆರಿಸುವುದಕ್ಕೆ ಪ್ರಕೃತಿ ಅಥವಾ ಸೃಷ್ಟಿಶೋಧನೆಯೆಂದೂ ಹೆಸರು ಕೊಡಬಹುದು.

Specialisation=ನೈಪುಣ್ಯ, ವಿಶೇಷತೆ.

Rigidity=ಬಿರುಸುತನ.

Paleontology=ಶಿಲಾಶಾಸ್ತ್ರ.

೭

Remote=ಪ್ರಾಚೀನ.

Response to environment=ಸುತ್ತಲಿನ ಪರಿಸ್ಥಿತಿಗೆ ಉತ್ತರ ಕೊಡುವುದು.

Assimilation=ಆಹಾರವನ್ನು ಜೀರ್ಣಿಸಿಕೊಳ್ಳುವುದು.

Fertilised egg=ಗರ್ಭಗಟ್ಟಿದ ತತ್ತಿ.

Primary or Paleozoic Age=ಆದಿ ಅಥವಾ ಶಿಲಾಯುಗ.

Mesozoic or Secondary Age = ದ್ವಿತೀಯ ಅಥವಾ ಮಧ್ಯ ಯುಗ.

Tertiary or Modern Age=ತೃತೀಯ ಅಥವಾ ನವಯುಗವು.

Primate=ಶ್ರೇಷ್ಠ.

Lemuroids, Lemurs=ಅರ್ಧಕಪಿ.

Simioids, Simia=ಕಪಿ.

Homo=ಮನುಷ್ಯ.

Microscopic Anatomy = ಶರೀರದ ಸೂಕ್ಷ್ಮಾವಯುವಗಳನ್ನು ಅಭ್ಯಾಸಿಸುವ ಶಾಸ್ತ್ರ.

Glacial Age=ಹಿಮಯುಗ.

Cellular Theory=ಜೀವಕೋಶ ಸಿದ್ಧಾಂತವು. ಪ್ರಾಣಿದೇಹಗಳೆಲ್ಲ ಒಂದೇ ಗರ್ಭಗಟ್ಟಿದ ತತ್ತಿಯಿಂದ ಹುಟ್ಟಿ, ಮುಂದೆ ಒಂದೇ ಜೀವಕೋಶದ ದ್ವಿಗುಣಿತಭಾವದಿಂದ ಬೆಳೆಯುವವೆಂದು ಹೇಳುವ ಸಿದ್ಧಾಂತವು.

Glands of the Skin=ಚರ್ಮಗ್ರಂಥಿ.

Central Nervous system=ಮುಖ್ಯಜ್ಞಾನತಂತು ಕ್ರಮ-
Joints=ಕೀಲಗಳು.
Ligaments=ಅಸ್ಥಿಬಂಧನಗಳು.
Diaphragm=ಕರುಳುಪರೆ, ಹೃತ್ಪಟಲ.
Placenta=ಪುನರ್ಜನ್ಮ, ಮಾಸದ ಚೀಲ.
Temples=ಕಣಃಲೆ (ಹಣೆ ಮತ್ತು ಕಿವಿಗಳ ನಡುವಿನ ಭಾಗವು).
Parasite=ಪರತಂತ್ರಜೀವಿ.
Alimentary Canal=ಕರುಳು.
Curve=ಬಾಗು.
Fins=ರೆಕ್ಕೆಗಳು.

೮

Incisors=ಛೇದಕದಂತಗಳು.
Cheek-Pouches=ಬಾಯಿಯ ಒಳಮಗ್ಗಲಿಗೆ ಗಲ್ಲಗಳ ಮೇಲಿರುವ ಚೀಲಗಳು.

Prehensile=ಹಿಡಿಯುವಂತಹವು. ಎಂದರೆ ಮಂಗಗಳು ತಮ್ಮ ಬಾಲದಿಂದ ಯಾವುದೊಂದು ವಸ್ತುವನ್ನು ಸುತ್ತಿಕೊಂಡು, ಅವನ್ನು ಗಟ್ಟಿಯಾಗಿ ಹಿಡಿಯುವವೆಂದರ್ಥ.

Catarrhini=ಅಧೋಮುಖ ನಾಸಿಕೆಯ ಕಪಿಗಳು.
Anthropoid Apes=ಮಾನವಕಪಿಗಳು.
Ridges=ಕಂಬಗಳು.

೯

Youngest=ಕನಿಷ್ಠ
Ganglionic Cells=ಜ್ಞಾನದ್ರವ್ಯ ಕೋಶಗಳು.

The law ol Universal Dissimilarity=ವಿಶ್ವವೈಷಮ್ಯ. ಜಗತ್ತಿನಲ್ಲಿ ಯಾವುದೇ ಎರಡು ವಸ್ತುಗಳು ಎಲ್ಲ ಬಾಬುಗಳಲ್ಲಿಯೂ ಒಂದೇ ಆಗಿರಲಾರವೆಂಬ ಸಿದ್ಧಾಂತವು.

Principal Documents=ಮುಖ್ಯವಾದ ಲೇಖಪ್ರಮಾಣಗಳು.
Paleolithic Age=ಪ್ರಾಚೀನ ಶಿಲಾಯುಗ.
Neolithic Age=ನವಶಿಲಾಯುಗ.
Races of men=ಮಾನವ ವರ್ಣಗಳು.
Priests=ಉಪಾಧ್ಯಾಯರು.
Historical Period=ಐತಿಹಾಸಿಕ ಕಾಲವು.
Analysis=ವಿಭಜನೆ.
Synthesis=ಏಕೀಕರಣ, ಕ್ರೋಡೀಕರಣ.
Vision=ಕಣಸು.
Similarity=ಸಾದೃಶ್ಯ.
Contiguity=ಸಾಮೀಪ್ಯ.

AnthropomorphicGods= ಮಾನವರಂತಹ, ಮಾನವಕಲ್ಪಿತ ದೇವತೆಗಳು. ಮನುಷ್ಯನು ತನ್ನ ಮೇಲಿಂದಲೇ ದೇವರು ಈ ಈ ಗುಣಧರ್ಮಗಳಿಂದ ಯುಕ್ತನಾಗಿರಬೇಕೆಂದು ಊಹಿಸುವನು. ಈ ತರದಿಂದ ಕಲ್ಪಿತವಾದ ದೇವತೆಗಳು.

Innate Faculties = ಆನುವಂಶಿಕ ಗುಣಧರ್ಮಗಳು. ಸ್ವಭಾವತಃ ಇದ್ದ ಗುಣಧರ್ಮಗಳು.

೧೦

Hereditary or Inherited=ಆನುವಂಶಿಕ.
Environmental=ಸುತ್ತಲಿನ, ಪ್ರೇರೇಪಕ, ಉತ್ತೇಜಕ.
Museums=ಪದಾರ್ಥಸಂಗ್ರಹಾಲಯಗಳು.
New Fashions='ನವೀನ ಕಲ್ಪ'ಗಳು, ಹೊಸಬೆಡಗುಗಳು.
Pressure oi Environment=ಬಾಹ್ಯವಸ್ತುಗಳ ಹೊಡೆತ.
Conditions of Life=ಜೀವನದ ಸಂಗತಿಗಳು.
Overproduction=ಮಿತಿಮೀರಿದ ಜನನ.
Individual Variation=ವೈಯಕ್ತಿಕ ಮಾರ್ಪಾಟುಗಳು.
Law of Heredity=ಆನುವಂಶಿಕ ನಿಯಮ.

Geometrical Progression=ಭೌಮಿತಿಕಶ್ರೇಢಿ.

Acquired Characteristics=ಅರ್ಜಿತ ಧರ್ಮಗಳು.

Rarity=ಅಪರೂಪತೆ.

Abundance=ಹೆಚ್ಚಳ.

Sexual Selection=ಲಿಂಗಶೋಧನೆ.

Structural Selection=ದೈಹಿಕ ಶೋಧನೆ.

Secondary=ಗೌಣ.

Sexual Characteristics=ಲಿಂಗಧರ್ಮಗಳು.

## ೧೭, ೧೨

Atheism=ನಾಸ್ತಿಕತನ, ನಾಸ್ತಿಕವಾದ.

Gross Materialism=ಸ್ಥೂಲಜಡವಾದ.

Judgment Day=ದೇವರು ಜೀವರ ಪಾಪಪುಣ್ಯಗಳನ್ನು ವಿಚಾರ ಮಾಡುವ ದಿನ.

Facts=ಸಂಗತಿಗಳು

Introspection =ಅಂತಃಪರೀಕ್ಷೆ, ಅಂತರ್ನಿರೀಕ್ಷಣೆ, ಅಂತರ್ಮುಖತೆ.

Fellowship=ಸಾಮಾಜಿಕಜೀವನ.

Mysticism=ಅನುಭಾವಿಪದ್ಧತಿ.

Parable=ರೂಪಕ.

Electron=ವಿದ್ಯುತ್ಕಣ.

Positive Electron=ಧನವಿದ್ಯುತ್ಕಣ.

Negative Electron=ಋಣವಿದ್ಯುತ್ಕಣ.

Noumenon=ಅತೀಂದ್ರಿಯ ವಸ್ತು.

## Bibliography


(1) Anti-theistic theories (Flint).

(2) Creative Evolution (Bergson).

*(3) Descent of man.

*(4) Easy outline of Evolution.

*(5) Evolution and Christianity.

(6) Evolution of Living Organisms.
(ಸಜೀವಪ್ರಾಣಿಗಳ ವಿಕಾಸವು)

(7) First Principles (Spencer) ( ಮೂಲತತ್ತ್ವಗಳು ).

(8) Gifford Lectures 1928— Prof. Eddington.

(9) Hero and Hero-worship. (Carlyle).

(10) Imitation of Christ. (Kempis).

*(11) An Introduction to the study of Herbert Spencer.

(12) In Memoriam (Tennyson)

•(13) Is Evolution True ? ( ವಿಕಾಸವಾದವು ನಿಜವೇ ? )

*(14) Lectures on Evolution. (Huxley)

(15) Metaphysics ( A E. Taylor )

*(16) Modern Science and Thought.
(ಆದಿಭೌತಿಕ ಶಾಸ್ತ್ರವೂ, ವಿಚಾರವೂ)

(17) Notes on Brahmasutra Bhashya
( Dr. S K. Belvalkar)

*(18) Origin of Species.

*(19) Pioneers of Evolution.

(20) Plato's Republic.

(21) Plato— By A. E. Taylor.

(22) A Pluralistic Universe. ( W. James)

(23) Poetical works of Matthew Arnold.

(24) Prolegomena to Ethics (T. H. Green)

(25) Realm of Ends (James ward).

*(26) Riddle of the Universe (ವಿಶ್ವಕೂಟ) By Haeckel

*(27) Science and Islam (Renan).
(ಭೌತಿಕ ಶಾಸ್ತ್ರವೂ, ಇಸ್ಲಾಮು ಧರ್ಮವೂ)

(28) A Short History of the world (H. G. Wells).

(29) Story of Creation (ಸೃಷ್ಟಿಯ ಕಥೆಯು).

(30) The A B C of Atoms. (Bertrand Russell)

(31) The A B C of the Electron theory of Matter.
(Maynard Shipley)

(32) ಈಶಾವಾಸ್ಯೋಪನಿಷತ್

(33) ಐತರೇಯೋಪನಿಷತ್

(34) ಕಠೋಪನಿಷತ್

(35) ಕುಮಾರಸಂಭವ

(36) (ಶ್ರೀಮಚ್ಛಂಕರಾಚಾರ್ಯರ) ಗೀತಾಭಾಷ್ಯ

(37) ಛಾಂದೋಗ್ಯೋಪನಿಷತ್

(38) ತೈತ್ತಿರೀಯ ಆರಣ್ಯಕ

(39) ತೈತ್ತಿರೀಯೋಪನಿಷತ್

(40) (ವಿದ್ಯಾರಣ್ಯರ) ಪಂಚದಶೀ

(41) (ಶ್ರೀಮಚ್ಛಂಕರಾಚಾರ್ಯರ) ಪ್ರಕರಣ ಗ್ರಂಥಗಳು
(ಅಷ್ಟೇಕರ ಕಂಪನಿಯವರು ಪ್ರಸಿದ್ಧ ಮಾಡಿದ್ದು)

(42) ಭಗವದ್ಗೀತಾ

(43) ಭಾಗವತ

(44) (ಶ್ರೀಮಚ್ಛಂಕರಾಚಾರ್ಯರ ಬ್ರಹ್ಮಸೂತ್ರ ಭಾಷ್ಯದ ಮೆ.
ರತ್ನಪ್ರಭಾ ಟೀಕೆಯು

(45) ಮಹಾಭಾರತ

(46) (ಶ್ರೀಮದ್ವ್ಯಾಸರ) ವೇದಾಂತಸೂತ್ರಗಳು

(47) ಶ್ವೇತಾಶ್ವತರೋಪನಿಷತ್

**ವಿ. ಸೂ :—** * ಈ ಗುರುತಿನಿಂದ ಅಂಕಿಸಲ್ಪಟ್ಟವು Rationalist Press Association Series ದೊಳಗಿನ ಪುಸ್ತಕಗಳು.

# ಶುದ್ಧಿಪತ್ರಿಕೆ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೪೦ | ೨೩ | ನಾಶವಾಗುವದು | ನಾಶವಾಗುವದು. |
| ೪೬ | ೨ | Puraly | Purely |
| ೫೯ | ೫ | ಸವಂತಿಸಲಿಕ್ಕೇ | ಸಮ್ಮತಿಸಲಿಕ್ಕೇ |
| ೬೯ | ೩ | ಬ್ಬುತ್ತ | ಹಬ್ಬುತ್ತ |
| ೭೫ | ೧೦ | ಹೆವೆಯು | ಹವೆಯು |
| ೭೯ | ೨ | ಶವ್ಯವಿದೆ | ಶಕ್ಯವಿದೆ |
| ೧೫೩ | ೫ | ಸುಧಾರಣೆಯಲ್ಲಿ | ಸುಧಾರಣೆಯೆಲ್ಲ |
| ೧೬೬ | ೧೨ | ಪ್ಲೇಟೋನ | ಪ್ಲೇಟೋನು. |
| ೧೭೧ | ೧೫ | ಹಿಂದಕ್ಕೆ | ಅದು ಹಿಂದಕ್ಕೆ |
| ೧೭೨ | ೧೪ | ಮುಖ್ಯಕಾರಣ | ಮುಖ್ಯಕರಣ |
| ೧೭೪ | ೮ | ಇಭಿಪ್ರಾಯ | ಅಭಿಪ್ರಾಯ |
| ೧೭೫ | ೧ | ಮನುಷ್ಯನ | ಮನುಷ್ಯನನ್ನು |
| ೧೭೬ | ೨ | कश्चिद्धी | कश्चिद्धीरः |
| ೧೭೭ | ೧೮ | ಪ್ರಾತಿಭಾಷಿಕ | ಪ್ರಾತಿಭಾಸಿಕ |
| ೧೭೯ | ೧೧ | ಬುದಿಯೂ | ಬುದ್ಧಿಯೂ |
| ೧೯೪ | ೩ | इत्यषो | इत्येषा |